# ಪಶ್ಚಾತ್ತಾಪ

ಬರಹಗಾರ: **ಮುಳಿಯ ತಿಮ್ಮಪ್ಪಯ್ಯ.**



ಪ್ರಥಮ ಮುದ್ರಣ. ಪ್ರತಿಗಳು ೧೦೦೦



---

ಮುದ್ರಣ:
ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.

**1934**

**ಬೆಲೆ: ೦—೧೪—೦**

# ಮುನ್ನುಡಿ.

ಮುನ್ನುಡಿ ಇಲ್ಲದೆ ಈ ಕತೆಯನ್ನು ಪ್ರಕಟಿಸಬೇಕೆಂದಿದ್ದೆನು. ಮಾಡುವುದೇನು? ಈ "ಪಶ್ಚಾತ್ತಾಪ"ಕ್ಕೆ ಪಶ್ಚಾತ್ತಾಪದ ಮುನ್ನುಡಿಯನ್ನೆ ಬರೆಯಬೇಕಾಯಿತು. ಕುಂದಾಪುರದ ಡಿ. ಬೋ. ಕನ್ನಡ ಪಂಡಿತನಾಗಿದ್ದ, ನನ್ನ ತಮ್ಮ ಶಂಕರನ ಒತ್ತಾಯವೇ, ಈ ಕಥಾರಚನೆಗೆ ನನ್ನನ್ನಿಳಿಸಿದುದು. ಸುಮಾರು ನಾಲ್ಕಯ್ದು ತಿಂಗಳ ಮೊದಲು, ಇದನ್ನು ಬರೆಯತೊಡಗಿದೆನು. ಆದರೆ, ತೊಂದರೆಗಳಿಂದಾಗಿ ಪ್ರಯತ್ನವು ಮುಂದುವರಿಯಲಿಲ್ಲ. ಆಗಾಗಿನ ಪತ್ರಗಳಲ್ಲಿ, "ಬರೆದು ಮುಗಿಸಿದೆಯೊ?" ಎಂದು ಕೇಳುತ್ತಲೆ ಇದ್ದನು. "ಇಲ್ಲ"ವೆಂದೇ ಉತ್ತರಗೊಡಬೇಕಾಗಿತ್ತು. ಕಳೆದ ಡಿಸೆಂಬರದಲ್ಲಿ ಬಂದವನು, ಅದೇ ಪ್ರಶ್ನೆಯನ್ನು ಮತ್ತೆ ಕೇಳಿದನು. ಮೊದಲಿನ ಉತ್ತರವೇ ಹೊರಡಬೇಕಾಯಿತು. "ನೀನು ಬರೆದಡ್ಡ" ಎಂದು ನಗುತ್ತಾ ಹೇಳಿದನು. ಹಾಗೆ ಹೋದವನು ಮತ್ತೆ ಬರಲಿಲ್ಲ. ಅವನ ಕತೆ ಹಾಗಾಯಿತು. ಈ ಕತೆ ಹೀಗೆ ತಲೆದೋರಬೇಕಾಯಿತು. ಈ ಕತೆಗೆ, ಸಹೃದಯರ ಹೃದಯವನ್ನು ಒಂದಿಷ್ಟಾದರೂ ಮೆಚ್ಚಿಸುವ ಶಕ್ತಿಯೊದಗಿದರೆ, ಅದು ಅವನ ಆತ್ಮವನ್ನೂ ಆನಂದಗೊಳಿಸೀತು. ಅದು ಮುಂದಿನ ಮಾತು. ಈ "ಪಶ್ಚಾತ್ತಾಪ"ವನ್ನು ಆ ತಮ್ಮನ ಸ್ಮಾರಕವಾಗಿ ಕನ್ನಡಿಗರಡಿಯಲ್ಲಿ ಅರ್ಪಿಸಿರುತ್ತೇನೆ.

ಈ ಕಥಾಭಾಗದಲ್ಲಿ ಕೆಲವು ನಡೆದುವುಗಳು; ಕೆಲವು ಕಲ್ಪಿಸಿದುವುಗಳು. ಒಂದಕ್ಕೊಂದು ಒಪ್ಪುವಂತೆ, ಅವುಗಳನ್ನು ಜೋಡಿಸಿ ಕಳೆಗೊಡುವುದರಲ್ಲಿದೆ ಜಾಣ್ಮೆ. ಆ ಜಾಣ್ಮೆಗೆ ಬರಹಗಾರನ ಶೈಲಿಯೂ ಕೈಗೊಡುತ್ತದೆ. ಅಂಥ ಜಾಣ್ಮೆ, ಈ ಕತೆಯಲ್ಲಿ ಹೊಳೆಯುವುದೋ ಇಲ್ಲವೋ ಎಂಬುದನ್ನು ನಾನರಿಯೆನು. ಮನೆ ಮಾತನ್ನೆ, ಸಾಹಿತ್ಯದೃಷ್ಟಿಯಿಂದ ಮಾರ್ಪಡಿಸಿಕೊಂಡಿರುತ್ತೇನೆಂದು ಮಾತ್ರ ಹೇಳಬಲ್ಲೆನು, ಉಳಿದುವುಗಳನ್ನೆಲ್ಲ, ವಿಮರ್ಶಕರ ಹಿನ್ನುಡಿ ವಿಸ್ತರಿಸೀತೆಂದು ನಂಬಿರುತ್ತೇನೆ.

ಇನ್ನೊಂದು ಮಾತು. ಕುಂದಾಪುರದಲ್ಲಿ ದೊರೆತ, ನನ್ನ ತಮ್ಮನ ನೂತನ ಭಾವಚಿತ್ರವು, ಅಷ್ಟು ಸರಿಯಾಗಿಲ್ಲ. ಅವನು ಮೊದಲು ಉದ್ಯೋಗದಲ್ಲಿದ್ದುದು ನಮ್ಮ ಸೈಂ. ಎ. ಕೋಲೇಜಿನಲ್ಲಿ. ನನ್ನ ಪ್ರಾರ್ಥನಾನುಸಾರವಾಗಿ ಕೋಲೇಜಿನ ಅಧಿಕಾರಿಗಳು, ಪ್ರಯತ್ನಪಟ್ಟು ಹುಡುಕಿ, 1929-30ನೆ ಇಸವಿಯ ಭಾವಚಿತ್ರ

(Group Photo) ವನ್ನು ಒದಗಿಸಿಕೊಟ್ಟರು. ಅದರಿಂದಲೆ ಎತ್ತಿಕೊಂಡುದು, ಮೇಲೆ ತೋರುವ ಭಾವಚಿತ್ರ. ಈ ಸಹಾಯಕ್ಕಾಗಿ, ನಮ್ಮ ಮಂಗಳೂರು ಸ್ಯೆಂ. ಎ. ಕೋಲೇಜಿನ ಅಧಿಕಾರಿಗಳಿಗೆ, ನಾನು ಎಷ್ಟು ಕೃತಜ್ಞನಾದರೂ ಕಡಿಮೆಯೆ. ಯಾಕೆಂದರೆ, ಇದರಷ್ಟು ಸರಿಯಾದ ಅವನ ಭಾವಚಿತ್ರವು ಬೇರೊಂದೂ ಇಲ್ಲ. ಸಕಾಲದಲ್ಲಿ ಇದನ್ನು ಅಂದವಾಗಿ ಮುದ್ರಿಸಿಕೊಟ್ಟವರೆಂದರೆ, ಮಂಗಳೂರಿನ ಸರಸ್ವತೀ ಪ್ರಿಂಟಿಂಗ್ ವರ್ಕ್ಸಿನವರು. ಅದರ ಸುಪರಿಂಟೆಂಡೆಂಟರಾದ ಶ್ರೀ। ಯು. ಗಣೇಶ ಶೆಣ್ಯೆಯವರು ಮುದ್ರಣದ ವಿಷಯದಲ್ಲಿ ತೋರಿಸಿದ ಆತ್ಮೀಯತೆ ಅಷ್ಟಿಷ್ಟಲ್ಲ. ಅವರಿಗೂ ನನ್ನ ಕೃತಜ್ಞತೆ ಅವಶ್ಯವಾಗಿ ಸಲ್ಲಬೇಕು.

ಮಂಗಳೂರು,<br>7—6—1934.

ಮುಳಿಯ ತಿಮ್ಮಪ್ಪಯ್ಯ,<br>ಸ್ಯೆಂ. ಎ. ಕೋಲೇಜ್, ಮಂಗಳೂರು.





ಕೀರ್ತಿಶೇಷ ಮುಳಿಯ ಶಂಕರಭಟ್ಟ ವಿದ್ವಾನ್,
ಕುಂದಾಪುರ ಡಿ. ಬೋ. ಹೈಸ್ಕೂಲ್,
ಕನ್ನಡಪಂಡಿತ.

# ಪಶ್ಚಾತ್ತಾಪ

## ೧.

“ಅಂದು ಮೊದಲ್ಗೊಂಡು ಮೊನ್ನೆ ಮೊನ್ನೆಯ ವರೆಗೂ, ಎಡೆಬಿಡದೆ ಹೇಳುತ್ತಾ ಬಂದೆ ನೀನು; “ಹೆಂಗುಸರ ಹಾಡು ಹಾಗೆಯೆ” ಎಂದು ಕಡೆಗಣಿಸುತ್ತಾ ಇದ್ದೆ ನಾನು. ಮದ್ದು ರೋಗಿಯ ಬಾಯಿಗೆ ಮಾತ್ರವೇ ಅಲ್ಲ; ಕಿವಿಗೂ ಕಹಿಯಾಗುವುದೆಂದು ಈಗಲೆ ಗೊತ್ತಾಯಿತಷ್ಟೆ ನನಗೆ. ಸಂಸಾರವೆಂಬುದಿದು ಕರ್ಮಕ್ಷೇತ್ರವು. ಬರಿಯ ತಿಳುವಳಿಕೆ ಎಷ್ಟೆಷ್ಟೊ ತುಂಬಿರುತ್ತಿದೆ ಇಲ್ಲಿ. ಆದರೇನು? ಕುಡಿಯುವ ಕಯ್ಯನ್ನು ನೀಡಿ ದೊಡನೆಯೆ ಕದಡಿ ಕಷ್ಮಲವಾಗಿಬಿಡುತ್ತಿದೆ ಈ ಚಿಲುಮೆಯ ತಿಳಿನೀರು. ಕಯ್ಯಲ್ಲಿ ಅಂಟಿರುವ ಕೆಸರಿನಿಂದಲೆ ಹೀಗಾಗುವುದೆಂದು ಭಾವಿಸಲೂ ಬಾರದು; ಕೆಲಸಾರಿ ಚಿಲುಮೆಯ ತಳದಲ್ಲಿ ಕೊಳೆ ಇರುವುದೂ ಉಂಟು.”

“ಕಡಿದ ನೀರು ಕಟ್ಟಕ್ಕೆ ಬರುವುದೆ? ಎಂದೂ ಬಾರದು. ಅಷ್ಟೆ ಅಲ್ಲ, ಕುಪ್ಪಿಯ ಪುಡಿಯನ್ನು ಹುಣ್ಣಿಗೆ ಉಜ್ಜಿದಂತಾದೀತು, ಕಯಿಮೀರಿ ಹೋದ ಸಂಗತಿಯನ್ನು ಮನಸ್ಸಿಗೆ ಹಚ್ಚಿಕೊಂಡರೆ.”

“ಅದೇನೋ ಹೌದು. ಆದರೆ “ಊರು ಸೂರೆಹೋದ ಮೇಲಲ್ಲವೇ ರಾಯರಿಗೆ ಎಚ್ಚರವಾಯಿತು?” ಈಗ ಕೂತಲ್ಲಿಂದ ಏಳಲಿಕ್ಕಾಗುವುದಿಲ್ಲ; ಚೆಂಬಿನಲ್ಲಿ ಹುಟ್ಟಿದ ಕಾಸೂ ಕಯ್ಯಲ್ಲಿಲ್ಲ; ಹೋಗಲಿ, “ನಾನಿದ್ದೇನೆ” ಎಂದು ಕಯ್ಗೊಡುವ ಬಂಧುಬಳಗವಾದರೂ ಇದೆಯೆ? . . . . ಹುಂ, ಇದ್ದರೂ ಇಲ್ಲ, ಮತ್ತೇನಿದೆ? ಕಣ್ಣು ಮನಸ್ಸುಗಳು ಹೋದಲ್ಲಿ, ಬಂದಲ್ಲಿ, ಎಲ್ಲೆಲ್ಲಿಯೂ ಇಲ್ಲ; ಇಲ್ಲ; ಇಲ್ಲ.”

“ನಮ್ಮಲ್ಲಿ ಬೇಕಾದಷ್ಟಿದ್ದರೆ ಬಂಧುಗಳೂ ಇದ್ದಾರೆ, ಬಳಗವೂ ಇದೆ. ಈ ಒಕ್ಕಲಿಲ್ಲದ ಮನೆಗೆ ಆ ಇಲಿಹೆಗ್ಗಣಗಳ ಕಾಟವೆಂದೂ ಒದಗಲಾರದು. ಬರಿದೆ ಆ ಬಿಸಿಲ್ಗುದುರೆಯನ್ನು ಏರಬೇಕೆಂದು ಹವಣಿಸ ಬೇಡಿರಿ. ತಂತಮ್ಮ ತಲೆಯಡಿಗೆ ತಂತಮ್ಮ ಕಯ್ಯೇ ಆಗಬೇಕಷ್ಟೆ ಇಂಥ

ಸಿಕ್ಕು ಸಂಕಟದ ಸಂದಿನಲ್ಲಿ. ನಾವು ಅಂಥ ಅನ್ಯಾಯವನ್ನಾರಿಗೂ ಮಾಡಲಿಲ್ಲ. ದೇವರು ಕಣ್ದೆರೆದರೆ ಈ ರೋಗ ಯಾವ ಲೆಕ್ಕ? ಗುಣ ವಾದೀತು. ಆ ಮೇಲೆ ಎಲ್ಲೆಲ್ಲಿಯೂ "ಉಂಟು" ಎಂದಾದೀತು; ಬುಧನ ದಶೆಯೂ ಬಂದೀತು".

"ಬದುಕಿದ್ದರೆ ಬುಧನ ದಶೆ ಬಂದೀತು" ಎಂದಲ್ಲವೆ ಸರಿಯಾದ ಗಾದೆ? ಆ ಬುಧನ ದಶೆ ಬಂದು ಹೋಗಿ ಎಷ್ಟೊ ಕಾಲವಾಯಿತು. ಇನ್ನೂ ಅದು ಬರುವುದೆ? ಬದುಕಿದ್ದರೆ ಮಾತ್ರವೇ ಅದು ಬರುವುದು. ಭವಿಷ್ಯತ್ತಿನ ಮಸಣದಿಂದ ಹೆಕ್ಕುವ ಎಲುಬೂ ಆ ಬುಧನ ದಶೆಯನ್ನನು ಭವಿಸಲಾರದು. ಆ ಹಿಂದಣ ಕಾಲವೆಂದರೆ ಕಾಲ! ಆಗ ಗೆಳೆಯರೆಷ್ಟು ಮಂದಿ!! ಊಳಿಗದವರೆಷ್ಟು ಮಂದಿ!!! ಹೋದಲ್ಲೊಬ್ಬ, ಬಂದಲ್ಲೊಬ್ಬ, ನಿಂತಲ್ಲಿ ಮತ್ತೊಬ್ಬ. ಹುಲಿಯ ಹಾಲಾದರೂ ಸರಿ; ಬಾಯಿಂದ ಬೀಳ ಬೇಕಾಗಿರಲಿಲ್ಲ; ಕಯ್ಯನ್ನು ನೀಡಿದರೆ ಸಾಕಾಗುತ್ತಿತ್ತು. ಆಗಲೂ ಇದೇ ನಾನು, ಈಗಲೂ ಇದೇ ನಾನು. ಆದರೆ ಆಗ ಬುಧನ ದಶೆಯ ನಾನು, ಈಗ ಕುಜರಾಹುಸಂಧಿಯ ನಾನು. ನೋಡು, ಈ ಗ್ರಹಭುಕ್ತಿಯ ಹೊಡೆತವನ್ನು. ಮೊದಲಿನ ಗೆಳೆಯರೊಳಗೆ ಒಬ್ಬರಾದರೂ ಬರುತ್ತಾರೆಯೆ ಈಗಿನ ನನ್ನಲ್ಲಿಗೆ? ಬರುವುದಿರಲಿ; ಈ ಕಡೆಗೆ ತಲೆ ಹಾಕಿ ಮಲಗುವುದೂ ಇಲ್ಲ."

"ಹೀಗೆಲ್ಲ ಸುಮ್ಮನೆ ಕೊರಗುತ್ತಿರುವುದೇಕೆ? ಮೊದಲೆ ಹಸೆಹಿಡಿದು ಚಿಂದಿಯಂತಾದ ಮೈ; ಇದು ಇಂಥ ಮರುಕವನ್ನು ತಡೆಯಲಾರದು".

"ಬೇಕೆಂದು ಮರುಗುವುದಲ್ಲ. ಹಸೆಹಿಡಿದ ಮೈ ಕಂಬಕ್ಕೆ ಕಟ್ಟಿದ ದನದಂತಾಗಿದೆ. ಕರುವಿನಂತೆ ಮನಸ್ಸು ಅಲ್ಲಿ ಇಲ್ಲಿ ಅಲೆದಾಡುತ್ತಿದೆ. ಇರಲಿ, ಇದೆಲ್ಲ ಹೊಸತಾಗಿ ತೋರುವುದು ನನಗೆ ಮಾತ್ರ. ಕಣಿಯಿಟ್ಟು ಕಂಡಂತೆ ಮೊದಲೆ ಹೇಳುತ್ತಿದ್ದೆ ನೀನು; "ಹಿತ್ತಿಲ ಗಿಡ ಮದ್ದಲ್ಲ"ವೆಂದು ಎಲ್ಲವನ್ನೂ ಮರೆಯುತ್ತಾ ಬಂದೆ ನಾನು. ಕಂಡಾಬಟ್ಟೆಯಲ್ಲಿ ಕಾಲಿಟ್ಟು ಕಲ್ಮುಳ್ಳುಗಳು ಕಂತಿದುವೆಂದು ಮರುಗಿದರೆ ಫಲವಿಲ್ಲವೆಂಬುದು ಸರಿ. ಆದರೂ ಮನಸ್ಸಿಗೆ ತೋರಿದುದನ್ನು ನಾಲಗೆ ಹೇಳಿಬಿಡುವುದು. ತೋಟ

ಗದ್ದೆಗಳ ಪಟ್ಟೆಪತ್ರಗಳೆಲ್ಲ ಆ ರಾಮಯ್ಯನ ಪೆಟ್ಟಿಗೆಯಲ್ಲಿ; ನಗನಾಣಯ ಗಳೆಲ್ಲ ಕಂಡವರ ಕರಡಿಗೆಯಲ್ಲಿ. "ಸಾಲ" ಎಂದಲ್ಲವೆ ಅದರ ಹೆಸರು. ಆ ಸಾಲದ ಎದ್ದಾಸರು ಏರುತ್ತಾಹೋಯಿತು; ಉಪ್ಪು ನೀರನ್ನಾದರೂ ಕುಡಿಯಿಸಿತು; ಬಿತ್ತಿನ ಮುಡಿಯನ್ನೂ ಬೇಯಿಸಿತು; ಕಡೆಗೆ ತಿರುಪತಿಯ ತಿಮ್ಮಪ್ಪನ ಮುಡಿಪನ್ನೂ ಮುರಿಯಿಸಿತು. ಈ ಹೊತ್ತೊ ನಾಳೆಯೊ ಅಮೀನನು ಬಂದು ಮನೆಯಿಂದ ಹೊರಡಿಸಿ ಆಸ್ತಿಯನ್ನು ರಾಮಯ್ಯನಿಗೆ-ಥೇ, ಆ ಬೊಂಬೆಗೇನು ಬೇಕಾಗಿದೆ! ಸೂತ್ರಧಾರಿಯಾದ ಆ ನಾಗಪ್ಪಯ್ಯ ನಿಗೆ—ಬಿಡಿಸಿಕೊಡುವ ಮಂಗಳಪದವೊಂದು ಉಳಿದಿದೆ. ಈ ಮನೆ ಯೆಂದರೆ ಬರಿಯ ಮನೆ ಮಾತ್ರವಲ್ಲ; ನಾಲ್ಕಯ್ದು ತಲೆವಿಡಿದು ಬಂದ ನಮ್ಮ ಸಂಸಾರದ ಜೀವಕ್ಕೆ ಮೈ ಇದು. ಊರನ್ನಾಳುತ್ತಿದ್ದ ಹೆಗ್ಗಡೆಯವ ರಿಗೆ ನಮ್ಮ ಅಜ್ಜನ ಅಜ್ಜಂದಿರು ಅಯ್ಯಗಳಾಗಿದ್ದರಂತೆ. ಈ ಆಸ್ತಿಯನ್ನು ಬಿಟ್ಟುಕೊಟ್ಟು ಗುರುಭಕ್ತಿಯ ಶಾಸನದಂತೆ ಈ ಮನೆಯನ್ನೂ ಅವರೆ ಕಟ್ಟಿಸಿಕೊಟ್ಟರಂತೆ. ಈ ಮನೆಯೊಕ್ಕಲಿಗೆ ಕುಟುಂಬಸಮೇತವಾಗಿ ಬಂದು ಮಂತ್ರಾಕ್ಷತೆಯನ್ನು ಧರಿಸಿ ಊಟ ಮಾಡಿ ಹೋಗಿದ್ದಾರಂತೆ. ಹೋಗುವಾಗ "ಅರಮನೆ ಅದು, ಗುರುಮನೆ ಇದು" ಎಂದರಂತೆ. ಇದೆಲ್ಲ ಕತೆಯನ್ನು ಅಜ್ಜ ಹೇಳುತ್ತಿದ್ದರು. ಏನು ಹೇಳಿದರೇನು? ಆ ಎಲ್ಲ ಬಣ್ಣವನ್ನೂ ಈ ಮಸಿಯೊಂದೇ ನುಂಗಿತು. ಇದನ್ನೆಲ್ಲ ಎಣಿಸ ದಿರುವುದು ಹೇಗೆ? ಅಲೆದಾಡುವ ಮನಸ್ಸಿಗೆ ಆ ಚಿತ್ರಗಳೆಲ್ಲ ತೋರುತ್ತವೆ. ನಾಲಗೆ ಅದನ್ನೇ ಹೇಳುತ್ತಿದೆ. ಇನ್ನು ಆ ಬುಧನ ದಶೆ ಬಂದರೂ ಆಗುವು ದೇನು? "ಎಕ್ಕುತ್ತಿರುವ ಎಕ್ಕ" ಪಂಜರದಿಂದ ಹಾರಿಹೋಗುವುದು."

ಈಗ ಕೇಳುತ್ತಿರುವ ಕೆಲವರಿಗೆ ಇದೊಂದು ಆಕಾಶಭಾಷಿತವಾಗಿ ತೋರಬಹುದು. ಆದರೆ ಆಗ ಹಸೆಹಿಡಿದ ಭೀಮಯ್ಯನ ಬಾಯಿಂದ ಹೊರಡುತ್ತಿದ್ದಾಗ ಹತ್ತಿರದಲ್ಲಿ ಕೂತಿದ್ದ ದೋಪಿಗೆ ಇದು ಯಾವತರದ ಮಾತಾಗಿಯೂ ತೋರುತ್ತಿದ್ದಿಲ್ಲ; ಕನಲುತ್ತಿರುವ ಕಿಡಿಗಳನ್ನೆ ಕಿವಿಗೆ ಸುರಿ ದಂತಾಗುತ್ತಿತ್ತು. ಭೀಮಯ್ಯನ ಬಾಯಿಂದ ಅಂಥ ನಿರಾಶೆಯ ಮಾತು ಗಳು ಹೊರಟುದಕ್ಕೆ "ಅದೆ ಮೊದಲು, ಅದೆ ತುದಿ" ಎಂದು ಆಕೆ ಹೇಳು ತ್ತಿದ್ದಳು. ಆದರೂ ಧೈರ್ಯವನ್ನವಲಂಬಿಸಿಕೊಂಡು ಗಂಡನನ್ನು ಸಮಾ ಧಾನಿಸ ತೊಡಗಿದಳು.

**ದೋಪಿ:**—ನನ್ನ ಮಾತುಗೇಳದೆ ಇಷ್ಟೆಲ್ಲ ಬವಣೆಗಳು ಬಂದು ವೆಂದು ಹೇಳುತ್ತೀರಿ. ಇರಲಿ, ಈಗಲಾದರೂ ಒಂದು ಮಾತು ಹೇಳು ತ್ತೇನೆ. ಕೇಳುತ್ತೀರಷ್ಟೆ?

**ಭೀಮ:**— ಸಂದೇಹವೇನು?

**ದೋಪಿ:**—ನಿರಾಶೆಯನ್ನು ತುರುಕುವ ರೋಗ, ಗುರಿಗಾಣದ ಬಡತನ, ಇವೆರಡೂ ಒಂದಾಗಿ ನಿಮ್ಮೆಣಿಕೆಯನ್ನು ಹಿಂಡಿಹಿಳಿದು ಬಿಟ್ಟಂತೆ ತೋರುತ್ತಿದೆ. ಕುತ್ತವೊಂದು ವಾಸಿಯಾದರೆ ಈ ಬಡತನಕ್ಕೆ ಉತ್ತರ ಗೊಡುವ ಶಕ್ತಿ ನನ್ನ ಕಯ್ಯಲ್ಲಾಗುವುದು. ಅಪಾಯಕರವಾದ ಲಕ್ಷಣ ವೇನೂ ಇಲ್ಲವೆಂದು ಪಂಡಿತನೂ ಹೇಳಿದ್ದಾನೆ. ಆಪತ್ತಿಗಿಂತ ಹೆಚ್ಚಿನದು ಆರಯ್ಕೆ. ಆದರಿಂದ ಆ ಬಡತನದ ಬಂದಣಿಕೆಯನ್ನೆಲ್ಲ ಮನಸ್ಸಿನಿಂದ ತಳ್ಳಿಬಿಡಿರಿ. ಈ ರೋಗದ ಕಯ್ಕೆ ಸಾಕು, ಎಂಥವನನ್ನೂ ಹದಗುಟ್ಟಿ ಹಾಸಿಗೆ ಹಿಡಿಯಿಸಲಿಕ್ಕೆ. ಅದರ ಮೇಲೆ ಚಿಂತಿಸಿ ಚಿಂತಿಸಿ ಗೆದ್ದಲು ಹಿಡಿದ ಮರದಂತಾದರೆ ಕೇಳುವುದೇನು? ನಾನೇನೋ ನನ್ನೆಣಿಕೆಗೆ ಹೊಳೆದಂತೆ ಆಗ ಹೇಳುತ್ತಿದ್ದುದು ನಿಜ. ಆದರೆ ಎಣಿಕೆಗಳೆಲ್ಲ ಕನಸಿನ ಒಡಹುಟ್ಟುಗಳ ಲ್ಲವೆ? ತಲೆಬರಹ ಓರೆಯಾಗಿದ್ದಾಗ ಮಾಣಿಕವನ್ನೆ ಮುಟ್ಟಲಿ, ಅದು ಮಸಿಯುಕಾಳಾಗಿ ಮಾರ್ಪಡುವುದೆಂಬುದು ಹೊಸತಲ್ಲ. ಈಗಿನ ಮಟ್ಟಿಗೆ ಆ ಕಸಗಳನ್ನೆಲ್ಲ ಗುಡಿಸಿಬಿಡಿರಿ ಮನಸ್ಸಿನಿಂದ. ದಿನದಂತೆ ದಿನವಿರಲಿಕ್ಕಿಲ್ಲ. ದೇವರು ಕಣ್ದೆರೆದುಬಿಟ್ಟರೆ ಅಸಾಧ್ಯವಾವುದು? ನಮ್ಮದರಂತೆಯೆ ಈ ಮಕ್ಕಳ ತಲೆಬರಹವೂ ಇದ್ದೀತೆ?

**ಭೀಮ:**—ಹೌದು, ಇರಲಿಕ್ಕಿಲ್ಲ. ಆದರೆ ಇವರ ಹಣೆಯೋಲೆಗೆ ಇನ್ನೂ ಕಪ್ಪುಬಳಿದಿಲ್ಲ; ಓದುವಂತಾಗಲಿಲ್ಲ. ಅದೀಗ ನಿಜವಾಗಿಯೂ ಬೆಳ್ಳಕ್ಕರವು. ದೇವರೆ, ಅದೀಗ ಯಾರೂ ಓದದೆ ಮೊಸಲಾಗಿಯೆ ಇರಲಿ. ಓದಿ ಪೂರ್ತಿಯಾದುದೀಗ ಈ ಭೀಮಯ್ಯನದು. ನಿಮ್ಮೆಲ್ಲರ ಹಣೆಬರಹ ವನ್ನು ಓದಲಿಕ್ಕಾಗಿ ಲೋಕದ ಕಣ್ಣು ತೆರೆಯಬೇಕಾದರೆ ಮೊದಲು ಭೀಮ ಯ್ಯನ ಕಣ್ಣು ಮುಚ್ಚಬೇಕು. ಮಕ್ಕಳ ಏಳಿಗೆಯನ್ನು ನೋಡಿ, ಈ ಹುಟ್ಟುಸಾವಿನ ಕಡಲಿನಿಂದತ್ತ ಶಾಂತವಾಗಿ ಈಜಾಡಿ ಸಾಗಿಬಿಡಬೇಕೆಂಬ

ಒಂದಾಸೆ ಇತ್ತು. ಅದೆಲ್ಲವೂ "ಎತ್ತಿನ ಕೊಂಬಿನತನೆ" ಯಾಯಿತು. ಹೌದು; ಪಡೆದಷ್ಟಲ್ಲವೆ ಬರುವುದು? ಅಂಥ ಯೋಗ್ಯತೆ ಇರುತ್ತಿದ್ದರೆ ಇಂಥ ಬಾರದ ಬನ್ನಗಳಿಗೆ ಬಲಿಯಾಗಬೇಕಿತ್ತೆ? ತಳಿರೆಲೆ ಚಿಗುರಿ ತಂಗಾಳಿಯೊಡನೆ ನಲಿದಾಡುವುದನ್ನು ನೋಡಿ ಕಳಚಿಬೀಳುವ ಪುಣ್ಯವು ಈ ತರಗೆಲೆಗೆ ಎಲ್ಲಿಂದ ಬಂದೀತು? ಸೊಬಗಿನ ಸುಗ್ಗಿ ಎಲ್ಲ "ಭೂತ"ದ ತುತ್ತಿನಲ್ಲಿ; ನೆನಪಿನ ಉಮ್ಮಳಿಸುವ ಗಳೆಲ್ಲ ವರ್ತಮಾನದ ಅಂಗಳದಲ್ಲಿ; ಮತ್ತೇನು, ಅಗಾಧವಾದ 'ಭಾವಿ'ಯೊಂದು ಗುರಿದೋರದ ಬಾಯನ್ನು ತೆರೆದಿದೆ. "ಮಾಡಿದ್ದುಣ್ಣೋ ಮಾರಾಯ" ಎನ್ನುತ್ತಾ ಹಣೆಯನ್ನೊಮ್ಮೆ ತಟ್ಟಿದನು.

**ದೋಪಿ:**—ನೋಡಿ, ನಾನು ಹೇಳಿದುದೆಲ್ಲವೂ ನೀರಿನ ಹೋಮವೇ ಆಯಿತಲ್ಲ.

**ಭೀಮ:**—"ಇಲ್ಲ, ಇನ್ನು ಮಾತಾಡುವುದಿಲ್ಲ. ಆದರೆ ನಿಮ್ಮ ಮುಂದಿನ ಜೀವನವು ಕಗ್ಗತ್ತಲೆಯಲ್ಲಿದೆ; ಕೈದೀಪವಾವುದೂ ತೋರುವು ದಿಲ್ಲ; ಕುರುಡುವ ಕೆಲಸವನ್ನಾಸೆ ಬಿಡುವುದೂ ಇಲ್ಲ. ಮುಚ್ಚಿದ ಬಾಯ ಬೀಗವನ್ನು ಅದೇ ತೆರೆಯುತ್ತಿದ್ದುದು. ಆಗಲಿ, ಇನ್ನು ಮಾತಾಡುವುದಿಲ್ಲ . . . . ಒಂದು ಮಾತು. ಆ ಮನೆದೇವರು ನಿನ್ನ ತಮ್ಮನ ಎದೆಯಲ್ಲಿ ಒಂದೆಳ್ಳಿನಷ್ಟಾದರೂ ಕನಿಕರವನ್ನುಂಟು ಮಾಡುತ್ತಿದ್ದರೆ ತೊಡಕೆಲ್ಲ ಹರಿದು ಹೋಗುತ್ತಿತ್ತು. ಹುಂ, ಅವನಾದರೂ ಮಾಡುವುದೇನು? ಆ ರಾಮಯ್ಯನ ತಂಗಿಯಲ್ಲವೆ ಶಿವರಾಯನ ಕಯ್ಯನ್ನು ಹಿಡಿದವಳು? ತಲೆದಿಂಬಿನ ಮಂತ್ರವು ಎಂತೆಂತಹ ಕೆಲಸಗಳನ್ನೆಸಗುವುದಿಲ್ಲ! ಅದೆಲ್ಲವೂ ಈ ಬರಹದ ಒಕ್ಕಣೆಯಲ್ಲಿ ಸೇರಿರಬೇಕು" ಎಂದು ಮತ್ತೊಮ್ಮೆ ಹಣೆಯನ್ನು ತಟ್ಟಿದನು.

"ಮಾತಾಡಬಾರದು" ಎನ್ನುವುದೆ ರೋಗಿಗಳ ನಾಲಗೆಯನ್ನು ತುರಿಸಿದಂತಾಗುತ್ತದೆ ಎಂದೆಣಿಸಿದಳು ದೋಪಿ. ಏನೋ ಕೆಲಸದ ನೆವವನ್ನೊಡ್ಡಿ ಒಳಗೆ ಹೋದಳು. ಒಂದು ನಿಮಿಷದ ವರೆಗೆ ಸುಮ್ಮನಿದ್ದನು ಭೀಮಯ್ಯ. ಆ ಮೇಲೆ ಹತ್ತಿರದಲ್ಲಿದ್ದ ಮಕ್ಕಳನ್ನೆ ಕೆದರಿ ಎಡೆಮಾಡಿ ಕೊಂಡಿತು ಅವನ ಮಾತು. ಅದನ್ನು ಕೇಳಿ ಉಕ್ಕುತ್ತಿರುವ ದುಃಖವನ್ನು

ಸಯ್ಸಿಕೊಳ್ಳಲು ಅಸದಳವಾಯಿತವಳಿಗೆ. ತೊಟ್ಟಿಕ್ಕತೊಡಗಿತು ಕಣ್ಣೀರು, ಬಿಟ್ಟು ಬಿಟ್ಟುಕ್ಕಲಾರಂಭಿಸಿತು ಬಿಸುಸುಯ್ಲು. ಸೆರಗಿನಿಂದ ಆದಷ್ಟು ಒರಸಿಕೊಂಡಳು. ಹನಿಯುತ್ತಿರುವ ತೂಬನ್ನು ಕೋಲಿನಿಂದ ತುರುಕಿದಂತಾಯಿತಲ್ಲದೆ ಒರಸಿದಂತಾಗಲಿಲ್ಲವದು. ಚೆನ್ನಾಗಿ ಅತ್ತುಬಿಟ್ಟಳು. ಮಕ್ಕಳೊಡನೆ ಮಾತಾಡುತ್ತ ಇದ್ದ ಭೀಮಯ್ಯನಿಗೆ ಅದರ ಹೊಲಬೆ ಗೊತ್ತಾಗಲಿಲ್ಲ. ಕಣ್ಣೀರನ್ನೊರಸಿಕೊಂಡು ದೋಪಿ ಫಕ್ಕನೆ ಕೈಸಾಲೆಗೆ ಬಂದಳು.

**ಭೀಮ:**—ಇದೇನು ಕಣ್ಣೀರು ಸುರಿಸುತ್ತಿ?

**ದೋಪಿ:**—ಏನೂ ಇಲ್ಲ; ಕಷಾಯಕ್ಕೆ ನೀರಿಟ್ಟಿದ್ದೆ; ಹಸಿಸೌದೆ; ಹೊಗೆ ಬಂತು ಕಣ್ಣಿಗೆ. ಇರಲಿ, ಯಾರೋ ಬರುವ ಸದ್ದು ಕೇಳುತ್ತಿದೆ.

**ಭೀಮ:**—'ಹು, ಹ್ಞೂಂ' ಎಂದು (ಕೆಮ್ಮುತ್ತ) ಮತ್ತಾರು? ಅಮಾನನೋ ಪೇದೆಯೋ ಆಗಿರಬೇಕು. ಈ ಹಾಳೂರಿಗೆ ಮತ್ತಾರು ಬರುತ್ತಾರೆ? "ಅಮಲ್ದಾರಿ" ಮಾಡಿದ್ದಾನಂತೆ ರಾಮಯ್ಯ; ಆಗಲಿ, ಅದೂ ಆಗಲಿ. "ಗಜಮುಖ"ದಿಂದ ಮೊದಲಾದುದು "ಎಲ್ಲಾಲಿ"ಯಲ್ಲಿ ಕೊನೆ ಮುಟ್ಟಲಿ. ಹೌದು, ಈ ಕಣ್ಣಿಗೆ ಆ ಸೌಭಾಗ್ಯವನ್ನು ನೋಡುವುದೊಂದು ಉಳಿದಿದೆ. ಇರಲಿ, ಈಗ ಇದು ನಮ್ಮ ಮನೆಯೇ ಅಲ್ಲವೆ? ಹೊರಗೆ ಹೋಗಿ ನೋಡು. ಬೇಕಾದರೆ ಹಸೆಹಾಕು; ಬಾಯಾರಿಕೆಗೇನಾದರೂ ಬೇಕೋ ಕೇಳು.

ದೋಪಿ ಬಾಗಿಲ ವರೆಗೆ ಹೋದಳು; ಒಳಗಿನಿಂದಲೇ ನಿಲುಕಿ ನೋಡಿದಳು. ಬಂದುದು ಪೇದೆಯೂ ಅಲ್ಲ; ಅಮಾನನೂ ಅಲ್ಲ. ಅವಳನ್ನು ಕಂಡೊಡನೆ ಆಗಂತುಕವ್ಯಕ್ತಿಯ ಮೊಗವಟ್ಟದ ಬಣ್ಣವೇ ಬದಲಾಯಿತು. ಈ ಬದಲಾವಣೆ ದೋಪಿಗೆ ಗೊತ್ತಾಗಲಿಲ್ಲ. ಕಂಡೊಡನೆ ಒಳಗೈದಿಬಿಟ್ಟಿದ್ದಳಾಕೆ. ಬಂದವನಿಗೆ ಅವಳನ್ನು ಕಂಡ ಕೊಡಲೇ ದಿಗಿಲಾಯಿತೆಂದೆನಷ್ಟೆ. ಮಾತಾಡದೆ ಹೋದುದು ಗೊತ್ತಾಗಿ ಆ ದಿಗಿಲು ಭುಗಿಲೆಂದಿತು. "ಇದೇನು ಬೆಕ್ಕಿನ ಕಣಿಯನ್ನು ಕಂಡವಳಂತೆ ಹಿಂಜರಿದು ಬಿಟ್ಟಳು! ಮನಮುನಿಸೇಕಾರಣವಾಗಿರಬಹುದೇನು? ಇರಬಹುದು. ನಿಜ

ವಾದ ತಪ್ಪುಗಾರನಲ್ಲಿ ಆಕೆ ಕೋಪಿಸಿಕೊಂಡರೆ ಆಶ್ಚರ್ಯವೇನೂ ಇಲ್ಲ. ಅದಿರಲಿ; ಆಗದವರಾದರೂ ಸರಿ, ಮನೆಗೆ ಬಂದವರಿಗೆ ಬೇಸರಿಕೆಯನ್ನುಂಟು ಮಾಡುವುದು ನನ್ನಕ್ಕನ ಸ್ವಭಾವವಲ್ಲವಷ್ಟೆ! . . . . ಆದರೆ, ಸೊಬಗಿನ ಸುಗ್ಗಿಯನ್ನನುಭವಿಸುತ್ತಿದ್ದವಳು; ಇತ್ತೀಚೆಗೆ ಬಡತನದ ನರಕಕ್ಕೆ ಬಿದ್ದು ನವೆಯುತ್ತಿರುವವಳು; ಈಗ ಯಾರ ಮುಖವನ್ನು ನೋಡಲಿಕ್ಕೆ ಸವಿಯಾದೀತು ಅವಳ ಕಣ್ಣಿಗೆ? ಅದರಲ್ಲಿಯೂ ಇಲ್ಲದ ತಪ್ಪನ್ನೆ ಹುಡುಕುತ್ತಿದ್ದ ತಮ್ಮನ ನೋಟದಿಂದ ಮರೆಯಾಗುವುದೆಂದರೆ ಅಸ್ವಾಭಾವಿಕವಲ್ಲ. ಅಥವಾ, ಇದೆಲ್ಲ ನನ್ನ ಭಾವನೆಯ ಭೇತಾಳನ ಅವತಾರವಾಗಿರಲೂ ಬಹುದು. ಅಲ್ಲಸಲ್ಲದ ಹೊರೆಯನ್ನವಳ ತಲೆಯಲ್ಲಿ ಹೊರಿಸಿ ಪಳಕವಾದವನು ನಾನು. ಆ ಪಳಕವೇ ಈ ತರದಲ್ಲಿ ಚಿಗುರಿತೋ ಏನೋ? ಇರಲಿ, 'ನೋಡುವ" ಎಂದೆಣಿಸುತ್ತ ಆಗಂತುಕನು ಮೆಲ್ಲನೆ ಚಾವಡಿಗೇರಿದನು. ಕಯ್ಸಾಲೆಗೆ ಹೋಗುವ ದಾರವಂದದ ಪಡಿಯಲ್ಲಿ ಕೈಯೂರಿ ಒಳಗೆ ನಿಲುಕಿದನು. ಆಗ "ಕಿಟ್ಟೂ, ಬಂದುದು ನಿನ್ನ ಮಾವ. ಅಪ್ಪನ ಮಂಚದ ಅಡಿಯಲ್ಲಿರುವ ಹಸೆಯನ್ನು ಕೊಂಡುಹೋಗಿ ಬಿಡಿಸಿಹಾಕು. ನೀರು ತರುತ್ತೇನೆ." ಎನ್ನುವ ದೋಪಿಯ ಮಾತು ಕೇಳಿಸಿತು. ತನ್ನ ಸಂಶಯವೆಲ್ಲ ತಲೆದಿರುಕನ ನೋಟವೇ ಸರಿಯೆಂಬುದಾಗಿ ಮಂದಟ್ಟು ಆಯಿತು. ಅಂಜಿಕೆ ನಾಚಿಕೆ ಪ್ರೀತಿ ಪಶ್ಚಾತ್ತಾಪಗಳೆಂಬ ನಾನಾ ಭಾವನೆಗಳ ಪಾಕವೂ ಆಯಿತು ಮನಸ್ಸಿನಲ್ಲಿ.

ಓಲೆಯ ಚಾಪೆಯನ್ನು ಒಯ್ದುಕೊಂಡು ಬಂದನು ಆ ಹುಡುಗ. ಆ ಮೇಲೆ ಅದರ ಒಂದು ಕಡೆಯನ್ನು ಹಿಡಿದುಕೊಂಡು ಇನ್ನೊಂದನ್ನು ನೆಲಕ್ಕೆ ತಳ್ಳಿದನು. ಆದರೆ, ಅದು, ಮಕ್ಕಳ ಅರಿಗಂಟಿನ ಮನಸ್ಸಿನಂತೆ ಪುನಃ ಮಡಿಚುತ್ತಿತ್ತು. ಕೋಪದಿಂದ ಅದಕ್ಕೊಂದು ಒದೆದು ಮುಂದಣ ತುದಿಯನ್ನು ಬಿಡಿಸುತ್ತಾ ಹೋದನು. ಅಷ್ಟರಲ್ಲಿ ಹಿಂದಣದು ಮಡಿಚುತ್ತಾ ಬಂದಿತು. ಒಮ್ಮೆ ಅತ್ತ, ಒಮ್ಮೆ ಇತ್ತ ಬಿಡಿಸಿಬಿಡಿಸಿ ಹುಡುಗನಿಗೆ ಸಾಕು ಸಾಕಾಯಿತು. ಕೈಕಾಲುಮೋರೆಗಳನ್ನು ತೊಳೆಯಲಿಕ್ಕಾಗಿ ನೀರನ್ನು ತಂದಿಟ್ಟು ದೋಪಿ ಹುಡುಗನ ಈ ಕೆಲಸವನ್ನು ನೋಡುತ್ತಾ ನಿಂತುಕೊಂಡಳು. "ಯಾವ ಮುಮ್ಮಾತನ್ನೆತ್ತುವುದು? ಹೇಗೆ?" ಎಂಬುದಾಗಿ

ಮುಂದೋರದೆ ಮನಸ್ಸು ಅಲೆಯುತಿದ್ದ ಅವರ ಕಣ್ಣುಗಳಿಗೆ ಹುಡುಗನ ಕೆಲಸವನ್ನು ನೋಡುವುದೊಂದು ಕೆಲಸವಾಯಿತು. ಬಿಡಿಸಿ ಬಿಡಿಸಿ ನೆಲೆ ಗಾಣದ ಕಿಟ್ಟುವಿನ ಕೈಗಳು ಹಸೆಯನ್ನು ಬಿಟ್ಟುವು. ಮೋರೆ ಬಾಡಿತು. ಕಣ್ಣಿನ ಕರೆ ಸುಕ್ಕಿತು. ಹಿಂಬೆರಳಿನಿಂದ ಕಣ್ಣನ್ನೊರಸುತ್ತಾ ಅಳತೊಡಗಿದನು. ಆಗ ಆಗಂತುಕನು ಮಗುವನ್ನೆತ್ತಿಕೊಂಡು 'ಕಿಟ್ಟೂ ಇಂಥ ಹಸೆಯನ್ನು ಬಿಡಿಸುವುದು ಹೇಗೆಂದು ನಿನಗೆ ಗೊತ್ತಾಗದಿದ್ದುದು ದೊಡ್ಡದೆ? ನನಗೆ ಗೊತ್ತಾದುದೇ ಮೊನ್ನೆ ಮೊನ್ನೆ.' ಎನ್ನುತ್ತಾ ಮುಂಡಾಡಿದನು. ಆ ಮಾತಿನ ತಾತ್ಪರ್ಯವೇನೆಂಬುದು ಮಗುವಿಗೆ ಹೇಗೆ ಗೊತ್ತಾದೀತು? ಅದಕ್ಕಾಗಿ ಅವನು ಹೇಳಿದುದೂ ಅಲ್ಲ. ದೋಪಿಯೊಡನೆ ಆಡಲಿಕ್ಕಿರುವ ಮಾತಿಗೊಂದು ಮುನ್ನುಡಿಯದು. ಎಸೆದಗುರಿ ನೇರಾಗಿ ಮುಟ್ಟಿತು. ತಮ್ಮನಾದ ಶಿವರಾಯನ ಮನಸ್ಸು ಒಂದಿಷ್ಟು ಬದಲಾದಂತೆ ತೋರೀತು ಆ ಮಾತಿನ ಮುಖದಿಂದ. ಆಶ್ಚರ್ಯಾನಂದಗಳೊಡನೆ ಅದರ ಅಡಿಯನ್ನರಿಯಬೇಕೆಂಬ ಕುತೂಹಲವೂ ಆಯಿತವಳಿಗೆ. ಆದರೆ, ಫಕ್ಕನೆ ಕೇಳಿ ಬಿಡುವುದು ಹೇಗೆ? ಒಂದೇ ಹೊಟ್ಟೆಯಲ್ಲಿ ಮಲಗಿದ ತಮ್ಮನೇನೋ ಹೌದು. ಆದರೂ, ಕೆಲಗಾಲದಿಂದಿತ್ತ ಅಗಳಿನಿಂದಾಚೆಯ ಕರೆಯಲ್ಲೆ ಇದ್ದವನಲ್ಲವೆ ಶಿವರಾಯನೆಂದರೆ? ತಮ್ಮನಾದರೂ ತಮ್ಮವನಾಗಿದ್ದಾನೋ ಎಂಬುದನ್ನು ಬಗೆಹರಿಯುವಂತೆ ನೆಲೆಗೊಳಿಸಲಾರದಾದಳು. "ಕಾಗೆಗೆ ಕಾಲಿದ್ದರೆ ಹಾರುವಾಗ ಗೊತ್ತಾಗುವುದಷ್ಟೇ" ಎಂದುಕೊಂಡು "ಹೇಗೆ, ಮನೆಯಲ್ಲೆಲ್ಲ ಸೌಖ್ಯವೇ?" ಎಂದು ಕೇಳಿದಳು.

**ಶಿವ:**—ವಿಶೇಷವೇನೂ ಇಲ್ಲ. ಭಾವನವರಿಗೆ ಆಪತ್ತು ಸ್ವಲ್ಪ ಕೈಮೀರಿದೆಯೆಂದು ಯಾರೋ ಹೇಳಿದರು. ಹೇಗಿದೆ?

**ದೋಪಿ:**—ಹಾಗೇ ಇದೆ. ಮೊದಮೊದಲು ಇಷ್ಟರ ಮಟ್ಟಿಗೆ ಏರೀತೆಂಬ ಸುಳಿವೂ ಇರಲಿಲ್ಲ.

**ಶಿವ:**—ರೋಗವೇನು?

**ದೋಪಿ:**—ಬರಿಯ ಒಳಜ್ವರವಷ್ಟೆ ಇತ್ತು ಮೊದಲು. ದಿನಗಳೆದಂತೆ ಕಫ ಕೆಮ್ಮುಗಳ ಬದ್ದಿಯೂ ಕೂಡಿತು. ಮೈ ಬಚ್ಚಿ ಕಣೆಯಂತಾಗಿದೆ.

**ಶಿವ:**—ಮೆಲ್ಲನೆ ತಿರುಗಾಡುತ್ತಾರೆಯೆ?

**ದೋಪಿ:**—"ಇಲ್ಲ; ಕೆಲದಿನಗಳಿಂದಿತ್ತ ಎಲ್ಲವೂ ಮಲಗಿದಲ್ಲೆ. ಕಾಲು ಮೋರೆಗಳಲ್ಲಿ ಸ್ವಲ್ಪ ನೀರು ಬಂದಂತೆಯೂ ತೋರುತ್ತದೆ" ಎನ್ನು ವಾಗ ಕಣ್ಣಿನಲ್ಲಿ ನೀರೂರ ತೊಡಗಿತು. ಎರಗಿದ ದಾರವಂದದ ಒಳಗಡೆಗೆ ಮೋರೆಯನ್ನು ತಿರುಗಿಸಿದಳು. ಸೆರಗಿನಿಂದ ಸುರಿಯುವ ಕಣ್ಣೀರನ್ನೊರಸಿ ಕೊಂಡಳು. ಆ ಮೇಲೆ "ಮಾಡುವುದೇನು? ಎಡವಿದ ಬೆರಳಿಗೇ ಎಡಹು ತ್ತಿದೆ. ಕಾಲಗತಿ ಹಾಗೆಯೇ. ಇರಲಿ. ಕೈಕಾಲು ತೊಳೆದುಕೋ" ಎಂದಳು.

**ಶಿವ:**—ಮದ್ದು ಯಾರದು?

**ದೋಪಿ:**—ಹಳೆ ಮನೆಯ ಪಂಡಿತರದು.

**ಶಿವ:**—ಅವರೇನು ಹೇಳುತ್ತಾರೆ.

**ದೋಪಿ:**—ಅವರ ಹೇಳಿಕೆಯೆಂದರೆ ಗೋಡೆಯ ಮೇಲಿಟ್ಟ ತೆಂಗಿನ ಕಾಯಿ; ಅತ್ತಲಾಗಿ ಹೊರಳಲೂ ಬಹುದು, ಇತ್ತಲಾಗಿ ಉರುಳಲೂ ಬಹುದು. ಕಡುಪಥ್ಯದಲ್ಲಿರಬೇಕು, ಸರಿಯಾಗಿ ಮದ್ದುಮಾಡುತ್ತಾ ಬರಬೇಕು; ಹಾಗಾದರೆ ಗುಣವಾಗಬಹುದು; ಎನ್ನುತ್ತಾರೆ. ನಿನ್ನೆಯೂ ಬಂದಿದ್ದರು. ಹೊರಡುವಾಗ ಹೊರಗಿನ ವರೆಗೆ ಬಂದು ಕೇಳಿದೆ ರೋಗ ಸ್ಥಿತಿ ಹೇಗಿದೆ ಎಂದು. "ಏನಮ್ಮಾ, ಸಾಮಾನ್ಯರಾದ ಹೆಂಗುಸರಂತೆ ಕಂಗಾ ಲಾಗುತ್ತಿ? ರೋಗವು ಇನ್ನು ಮೇಲೇರುವಂತಿಲ್ಲ; ನಾನು ಈ ಹೊತ್ತು ಕೊಟ್ಟ ಮದ್ದೆಂದರೆ ಅಂಥದು. ಉಗುರೆಡೆಯಲ್ಲಿ ಆಯುಸ್ಸಿದ್ದರೆ ಸಾಕು; ಗುಣ ವಾದೀತು" ಎಂದು ಹೇಳಿದರು.

**ಶಿವ:**—ಅವರೆನ್ನುವುದು ಯಾವ ರೋಗವೆಂದು?

**ದೋಪಿ:**—ಕಾಮಲೆಯೆಂದು. ಮೂರು ನಾಲ್ಕು ದಿನದ ಕಫ ದಲ್ಲಿ ಸ್ವಲ್ಪ ನೆತ್ತರಿರುವುದನ್ನು ನೋಡಿ ಸಂಶಯವಾಯಿತು. ಅದೇನೆಂದು ಕೇಳಿದೆ ವೈದ್ಯರೊಡನೆ. ಒಂದಿಷ್ಟು ಎಣಿಸಿ "ಗಂಟಲೊಡೆದುದಾಗಿರಬೇಕು" ಎಂದು ಮರು ನುಡಿದು ಹೊರಟು ಹೋದರು.

ತಲೆಗೆ ಹೊಡೆದಂತಾಯಿತು ಶಿವರಾಯನಿಗೆ. ಒಂದಿಷ್ಟು ಕಳೆದು "ಭಾವನವರಿಗೆ ಎಚ್ಚರವಿದೆಯೆ?" ಎಂದು ಕೇಳಿದನು. "ಇದೆ; ಮೊದಲು ಕೈಕಾಲು ತೊಳೆದು ಕೋ" ಎಂದಳು ದೋಪಿ. "ಹುಂ" ಎಂದು ಶಿವ ರಾಯನು ಅಂಗಳಕ್ಕಿಳಿದನು. ಮಣ್ಣಿನ ಮಡಿಕೆಯಲ್ಲಿಟ್ಟ ನೀರನ್ನು ಕಂಡನು. ಅಕ್ಕನೊಡನೆ ಬಂದು ಹತ್ತಿಪ್ಪತ್ತು ದಿವಸವಿದ್ದು ಸೊಬಗಿನ ಸುಗ್ಗಿ ಯನ್ನು ಮೂಗಿನವರೆಗುಂಡ ಮನೆ; ಕರಕೊಂಡು ಹೋಗಲಿಕ್ಕೆಂದು ಮನೆ ಯಿಂದ ಬಂದ ಆಳು ಹೊರಟು ತಲೆಕುಡಿ ಮೂಸುವ ವರೆಗೂ ಹೊಟ್ಟೆ ನೋವನ್ನು ಹಿಡಿಯಿಸಿ ಹಾಸಿಗೆಯಲ್ಲಿ ತನ್ನನ್ನು ಹೊರಳಾಡಿಸುತ್ತಿದ್ದ ಮನೆ; ಬೆಳ್ಳಿಯ ಬಟ್ಟಲಲ್ಲುಂಡು ಚೆಂಬಿನ ಪಾತ್ರಗಳನ್ನು ಚೆಂಡಾಡುತ್ತಿದ್ದ ಮನೆ. ಅದೇ ಮನೆಯಲ್ಲಿ ಅಕ್ಕನೀಗ ಮಣ್ಣಿನ ಮಡಿಕೆಯಲ್ಲಿ ನೀರನ್ನಿಟ್ಟಿದ್ದಾಳೆ. ಅದನ್ನು ಎತ್ತಿದನು. ಉಕ್ಕಿದ ಕಣ್ಣೀರ ಕಿರುಹೊನಲು ಬಿದ್ದು ಆ ಮಡಿಕೆಯು ನೀರಲ್ಲಿ ಒಂದಾಯಿತು. "ಇಂಥ ಮನೆಗೆ ಈಯವಸ್ಥೆ ಒದಗುವವರೆಗೆ ಕಣ್ಮುಚ್ಚಿ ಕುಳಿತ ತನ್ನ ಜೀವನವನ್ನು ಸುಡು" ಎಂದುಕೊಂಡನು. ಕೈಕಾಲು ಮೋರೆಗಳನ್ನು ತೊಳೆದು ಬಂದು ಹಸೆಯಲ್ಲಿ ಕುಳಿತನು. ಕವುಳಿಗೆಯಲ್ಲಿ ನೀರು, ಗಿಣ್ಣಿಲಲ್ಲಿ ಬೆಲ್ಲಗಳನ್ನು ತಂದಿಟ್ಟಿದ್ದಳು ದೋಪಿ. ಹತ್ತಿರದಲ್ಲಿ ಕುಳಿ ತಿದ್ದ ಗೌರಿ (ಕಿಟ್ಟುವಿನ ತಂಗಿ) ಆ ಬೆಲ್ಲವನ್ನೇ ನೋಡುತ್ತಿದ್ದುದು ಶಿವರಾಯ ನಿಗೆ ಗೊತ್ತಾಗಿರಲಿಲ್ಲ. ಮಾವನಲ್ಲಿ ಬಳಕೆ ಇಲ್ಲದ ಕಾರಣ ಹುಡುಗಿ ಮಾತನ್ನೂ ಎತ್ತಿರಲಿಲ್ಲ. ಆದರೆ, ನೋಟದ ಇಕ್ಕುಳಿನಿಂದ ಆ ಬೆಲ್ಲದ ತುಂಡನ್ನು ಬಿಗಿದು ಹಿಡಿದುಕೊಂಡಿದ್ದಳು. ಶಿವರಾಯನು ಅದನ್ನು ಮುಟ್ಟಿ ದನು; ಅವನ ಕೈ ಬೆರಳನ್ನು ಅವುಕಿಕೊಂಡಿತು ಆ ಇಕ್ಕುಳು. ಬೆಲ್ಲವನ್ನು ಎತ್ತಿದನವನು; ಬಿಗಿಹಿಡಿದ ಇಕ್ಕುಳೂ ಒಡನೆ ಏರಿತು. ಶಿವರಾಯನು ಅದನ್ನು ಬಾಯೊಳಗಿಕ್ಕಿದನು; ಇಕ್ಕುಳಿನ ಹಿಡಿತವು ಸಡಿಲಿಹೋಯಿತು. ಅವನ ದವಡೆಯೊಳಗೆ ಸಿಕ್ಕಿ ಹೊರಳುತ್ತಿರುವ ಆ ಬೆಲ್ಲದ ಅವಸ್ಥೆಯನ್ನು ನೋಡುತ್ತಾ ಇದ್ದು ಕಡೆಗೆ ನಿರಾಶವಾದ ಮಗುವಿನ ಕಣ್ಣು—ಪುನಃ ಗಿಣ್ಣಿ ಲಿನ ಬಳಿಗಿಳಿಯಿತು. ತೊಡುವಿನ ಅನುಭಾವಗಳನ್ನರಿತ ತಾಯಿ, ಇನ್ನೊಂದು ಬೆಲ್ಲದ ಅಚ್ಚನ್ನು ತಂದು ಮಗುವಿನ ಕಯ್ಯಲ್ಲಿಟ್ಟಳು. ಆಗಲೆ ಶಿವರಾಯನಿಗೆ, ಈ ಉಪಕಥೆಯ ಹೊಲಬು ಗೊತ್ತಾದುದು. ಮೊದಲು

ಕರುಣದ ಕಾಲುವೆಯನ್ನು ಕಟ್ಟಿಕೊಂಡಿದ್ದನಷ್ಟೆ. ಈ ಹೊಸ ಹೊನಲಿನಿಂದಾಗಿ ಆ ಕಟ್ಟದ ತೂಬು ಸಡಿಲಾಯಿತು. ಮಗುವನ್ನೆತ್ತಿಕೊಂಡು ಮುದ್ದಿಟ್ಟನು; ಅಕ್ಕನೊಡನೆ ಒಳಗೆಯ್ದಿದನು. ಬಂದುದು ಶಿವರಾಯನೆಂದು ಭೀಮಯ್ಯನಿಗೆ ಆ ಮೊದಲೇ ಗೊತ್ತಾಗಿತ್ತೆಂಬುದನ್ನು ಹೇಳಬೇಕಾಗಿಲ್ಲ. ಅಲ್ಲವಾದರೆ ಅವನ ಮನಸ್ಸು ಎಲ್ಲೆಲ್ಲಿ ಸಂಚರಿಸುತ್ತಿತ್ತೊ? ಎಷ್ಟೆಷ್ಟು ಮಾತಿನ ಮುಡಿಕೆಗಳನ್ನು ಬಿಚ್ಚುತ್ತಿತ್ತೊ? ಬಂದವನು ಶಿವರಾಯನೆಂದರಿತುದರಿಂದಲೇ ಮನಸ್ಸೀಗ ಅಲೆದಾಟವನ್ನು ಬಿಟ್ಟಿದೆ. ಅವನ ಅಂತರಂಗವನ್ನು ತಿಳಿಯಬೇಕೆಂಬುದರಲ್ಲೆ ಏಕಾಗ್ರವಾಗಿದೆ. ಹತ್ತಿರಕ್ಕೆ ಹೋದನು ಶಿವರಾಯನು. ಗುಡಿಹಾಕಿ ಕೊಂಡಿದ್ದನು ಭೀಮಯ್ಯ. "ಭಾವ" ಎಂಬ ಶಬ್ದವು ಕೇಳಿತು ಅದರೊಳಗೆ. "ಯಾರದು ಶಿವರಾಯನೊ?" ಎಂದು ಕೇಳುವಾಗ ಬಂತು ಮಿತಿಮೀರಿದ ಕೆಮ್ಮು. ಮೈಯ್ಯೆಲ್ಲ ಬೆವರಿತು. ಎರಡು ಮೂರು ನಿಮಿಷಗಳು ಕಳೆದ ಮೇಲೆ "ಹೂಂ, ನಿನ್ನನ್ನೊಮ್ಮೆ ನೋಡಬೇಕೆಂದಿತ್ತು. ಅದೂ ಆಯಿತು" ಎಂದನು.

**ಶಿವ:**—ಭಾವ ಹೇಗಿದೆ ಈಗ?

**ಭೀಮ:**—ಇರುವುದು ಹೇಗೆ? ಮರಕ್ಕೆ ಹಿಡಿದ ಬಂದಣಿಕೆ. (**ದೋಪಿಯನ್ನು ನೋಡಿ**) ಒಂದು ಹಸೆ ಬಿಡಿಸು.

**ಶಿವ:**—"ಒಂದೂ ಬೇಡ" ಎನ್ನುತ್ತಾ ಅವನ ಹಾಸಿಗೆಯ ಬಳಿಯಲ್ಲೆ ಕುಳಿತುಕೊಂಡು "ನಿನಗೆ ಸೌಖ್ಯವಿಲ್ಲವೆಂಬುದನ್ನರಿತು ದಿನವೇಳೆಂಟಾಯಿತು. ಒಮ್ಮೆ ಹೋಗಿ ನೋಡಿಕೊಂಡು ಬರಬೇಕು ಎಂದು ಅವಳು ಒತ್ತಾಯಿಸುತ್ತಲೇ ಇದ್ದಳು.. ಒಬ್ಬಂಟಿಗನಾದವನ ಅಡಚಣಿಯನ್ನು ಹೇಳಬೇಕೆ? ಒಂದರ ಹಿಂದೆ ಮತ್ತೊಂದರಂತೆ ಕೆಲಸವು ತಯಾರಾಗುತ್ತಲೇ ಇದೆ. ಈ ತೆರೆಗಳೆಲ್ಲ ನಿಂತ ಮೇಲೆ ಮೀಯುವುದಸಾಧ್ಯವೆಂದು ಈ ಹೊತ್ತು ಎಚ್ಚರಿಸಿದಳು. ಹೌದೆಂದು ನನಗೂ ತೋರಿತು; ಹೊರಟು ಬಿಟ್ಟೆ. ಏನು ನನ್ನಲ್ಲಿ ಮಾತಾಡಬೇಕಾದುದು ಏನಾದರೂ ಇದೆಯೇ?"

**ಭೀಮ:**—ಅಂಥದೇನೂ ಇಲ್ಲ. ಹೊತ್ತು ಹೋಗದುದಕ್ಕಾಗಿ ಏನೋನೋ ಮಾತಾಡುತ್ತಿದ್ದೆವು. ಅದರಲ್ಲಿ ನಿನ್ನ ಸುದ್ದಿಯೂ ಸುಳಿಯಿತು.

ಕರೆದವನು ಬಂದಂತೆ ನೀನೂ ಬಂದೆ ಅಷ್ಟರಲ್ಲಿ. ಅದರಿಂದ ಒಳಗಿನ "ಭಾವನೆ" ಬಂದು ಎದುರಲ್ಲಿ ಕುಳಿತ "ಭಾವನೆ ಆಯಿತು" ಎಂದು ಒಂದಿಷ್ಟು ನಕ್ಕನು.

**ಶಿವ:**—"ಸರಿ; ಕೋಲುಗಡಿದರೆ ತುಂಡಾದೀತು; ನೀರುಗಡಿದರೆ ತುಂಡಾದೀತೆ?" ಅದಿರಲಿ.

**ಭೀಮ:**—"ನಿನ್ನನ್ನೊಮ್ಮೆ ಕಂಡು ಮಾತಾಡಬೇಕೆಂಬ ಎಣಿಕೆ ಇತ್ತು. ಮಾಡುವುದೇನು? ಹಾರುತ್ತಿದ್ದ ಗಿಳಿ, ಈಗ ಪಂಜರದ ಗಿಳಿಯಾಗಿ ಬಿಟ್ಟಿದೆ. ದೈವವು ಈ ಜನಕ್ಕೆ ಕುಳಿತ ಪಟ್ಟದ ಮೇಲೆ ಮಲಗಿದ ಪಟ್ಟವನ್ನೂ ಕಟ್ಟಿದೆ. ಯಾರನ್ನಾದರೂ ಕಳುಹಿಸುವ, ಎಂದರೆ ಮಾಡುವುದೇನು? ಇಲ್ಲಿಗೀಗ ಕೆಲಸದ ಆಳುಗಳೂ ಸುಳಿದು ಮೆಟ್ಟುವುದಿಲ್ಲ. ಈ ವ್ಯಕ್ತಿಯೆಂದರೆ ನೆತ್ತರಾರಿದ ಎತ್ತಾಗಿದೆ. ಇದರಲ್ಲಿ ಉಣುಗುಗಳಿಗೇನು ಕೆಲಸ? ಅಲ್ಲವೆ?

**ಶಿವ:**—ಹೌದು, ಬಿಡಲಾರದ ಬಂಧುಗಳೆಂಬವರ ಸ್ಥಿತಿಯೆ ಈ ವರೆಗೆ ಹಾಗಾಗಿರುವಾಗ ಆಳುಗಳ ಸಂಗತಿಯನ್ನೇನು ಹೇಳುವುದು? ಕಳೆದ ವಿಷಯವಂತಿರಲಿ; ನಿನ್ನ ಅಭಿಪ್ರಾಯವೇನೆಂಬುದನ್ನು ಹೇಳಿಬಿಡು.

**ಭೀಮ:**—"ಹೇಳಿಬಿಡು" ಎಂಬುದಕ್ಕೆ ಸರಿಯಾದ ಅರ್ಥವಾಗಲಿಲ್ಲ. ಒಬ್ಬನು ಹೇಳಿದುದನ್ನು ಇನ್ನೊಬ್ಬನು ಒಂದು ಕಿವಿಯಲ್ಲಿ ಕೇಳಿ ಮತ್ತೊಂದರಲ್ಲಿ ಬಿಟ್ಟರೆ ಅದೂ "ಹೇಳಿಬಿಡು"ವ ಮಾತಾದೀತು. ಹಾಗಾಗುವ ಸಂದರ್ಭವಿದ್ದರೆ ನಾನದನ್ನು ಹೇಳುವುದೇ ಇಲ್ಲ. ನನ್ನೆದೆಯಲ್ಲೇ ಇದ್ದು ಸಹಗಮನಗೊಳ್ಳಲಿ.

**ಶಿವ:**—"ನಿನಗೆ ಅಂಥ ಸಂದೇಹವಾಗಲಿಕ್ಕೆ ಎಡೆ ಇದೆ ಭಾವ. ಅದಕ್ಕೆ ಕಾರಣವೆಂದರೆ ನನ್ನ ಈ ವರೆಗಿನ ವರ್ತನವೇ. ಅವಳು ಹೇಳುತ್ತಲೇ ಇದ್ದಳು "ಮರದ ಕೊಡಿಗೇರಿ ಬುಡವನ್ನು ಕಡಿಯುತ್ತೀರಿ ನೀವು" ಎಂದು. ನಾಗಪ್ಪಯ್ಯ ರಾಮಯ್ಯರ ತಂತ್ರಕ್ಕೊಳಗಾಗಿ ಈ ವರೆಗಿನ ಜೀವನವನ್ನು ವೃಥಾ ಸವೆಯಿಸಿದೆನು. ಆದರೀಗ ಅದೆಲ್ಲ ಆ ನಾಗಪ್ಪಯ್ಯನ ಬಕಸನ್ಯಾಸದ ಪ್ರತಿಫಲವೆಂದು ಮುಂದಟ್ಟಾಗಿದೆ. ಇನ್ನು ಮುಂದೆ ಅಂಥ ತಪ್ಪಿನಲ್ಲಿ

ಬೀಳಲಾರೆನು. ನೀನು ಆ ಸಂಶಯವನ್ನು ಬಿಡದಿದ್ದರೆ ನನ್ನ ಜೀವನ ವೆಂಬುದು ನಿರರ್ಥಕವೆಂದೆ ಭಾವಿಸುತ್ತೇನೆ, ಬೇಕಾದರೆ ನನ್ನೆರಡು ಮಕ್ಕಳ ತಲೆ ಮೇಲೆ ಕಯ್ಯಿಟ್ಟು ಹೇಳುತ್ತೇನೆ." ಎನ್ನುವಾಗ ಕರುಣದ ಆವೇಗದಿಂದಾಗಿ ಮಾತು ತಡೆದುಹೋಯಿತು.

**ಭೀಮ:**—ಶಿವ, ನೀನು ಹಾಗೆಲ್ಲ ಹೇಳಬಾರದು. ಸಂದೇಹ ವೆಂದರೆ ಇರ್ತಲೆಯ ಹಾವಲ್ಲವೆ? ಅದರಿಂದಾಗಿ ಒಂದಿಷ್ಟು ಮನಸ್ಸು ಚಂಚಲವಾಗಿ ಹಾಗೆ ಹೇಳಿಬಿಟ್ಟೆ. ಆದರೆ ನೋಡು, ಮಕ್ಕಳನ್ನು ಪಣ ವಾಗಿಡುವ ಮಾತನ್ನೆಂದೂ ಎತ್ತಬಾರದು. ಸಂಸಾರದ ನಮ್ಮ ಪ್ರಯತ್ನವೆಲ್ಲ ಮುಂದಿನ ಮಕ್ಕಳ ಏಳ್ಗೆಗಾಗಿ. ಅವರೇ ನಮ್ಮ ಬಾಳಿನ ಸೊತ್ತು. ಅಂಥ ವರನ್ನು ಇಂಥ ವಿಷಯಕ್ಕೆ ಮನಸ್ಸಿನ ಮರುಕದಿಂದ ಪಣವಾಗಿಸಬಹುದೆ? ನಿನ್ನ ಮಾತನ್ನು ಕೇಳಿದೊಡನೆ ನಮ್ಮ ಅಣ್ಣಾಜಿಯು ನೆನಪಾಗುತ್ತದೆ. ಅವ ನೊಬ್ಬನಿರುತ್ತಿದ್ದರೆ ನನ್ನ ಮನಸ್ಸು ಹೀಗೆಲ್ಲ ಅಲೆಯಬೇಕಾಗಿತ್ತೆ? ಗೃಹ ಭಾರದೊಡನೆ ಅವನ ಎದೆಯಲ್ಲಿ ಈ ಮೆಯ್ಯನ್ನೂ ಎರಗಿಸುತ್ತಿದ್ದೆನು. ನಿಮ್ಮೆ ಲ್ಲರ ಎದುರಿನಲ್ಲಿ (ಮೆಯ್ಯನ್ನು ಮುಟ್ಟಿ ಆಕಾಶವನ್ನು ತೋರಿ) ಈ ಮನೆ ಯಿಂದ ಆ ಮನೆಗೆ ಒಕ್ಕಲು ಹೋಗುತ್ತಿದ್ದೆನು. ಪಡೆದುಕೊಂಡು ಬಂದವ ರಿಗಲ್ಲವೆ ಆ ಪುಣ್ಯವು ಸಿಕ್ಕುವುದು? ಅದಿರಲಿ; ಇನ್ನು ಅಂಥ ಮಾತನ್ನೆತ್ತ ಬೇಡ.

**ಶಿವ:**—ಇಲ್ಲ; ಎತ್ತುವುದಿಲ್ಲ. 'ನಮ್ಮ ಅಣ್ಣಾಜಿ ಗೋಕರ್ಣ ದಲ್ಲಿದ್ದಾನೆ' ಎಂಬಸುದ್ದಿ ಇತ್ತಲ್ಲ?

**ದೋಪಿ:**—ಹೌದು, ಆ ಸುದ್ದಿಯ ಮೇಲೆ ಸುದ್ದಿಗಳು ಸುಳಿಯು ತ್ತಲೆ ಇವೆ. ಯಾವ ಮಾತನ್ನು ನಂಬುವುದು? ಅವನನ್ನು ಕರಕೊಂಡು ಹೋದ ವಿನಾಯಕ ಭಟ್ಟರು ಆಗಲೆ ತೀರಿಹೋಗಿದ್ದರಂತೆ.

**ಶಿವ:**—ಸುದ್ದಿಗಳೇನೆಂದು?

**ದೋಪಿ:**—ಅವುಗಳೊಳಗೆ ಎಲ್ಲಾ ಇದೆ. 'ವಿನಾಯಕಭಟ್ಟರು ತೀರಿಹೋದ ಮೇಲೆ ಅಣ್ಣಾಜಿ ಕಾರ್ವಾರಕ್ಕೆ ಹೋಗಿದ್ದ'ನೆಂದು ಒಬ್ಬರ ಹೇಳಿಕೆ. 'ತೀರ್ಥದ ಅಮವಾಸೆಯದಿನ ಸ್ನಾನಕ್ಕೆ ಹೋದವನು ಸಮುದ್ರ ದಲ್ಲಿ ಮುಳುಗಿಹೋದ'ನೆಂದು ಇನ್ನೊಬ್ಬರು ಹೇಳಿಬಿಟ್ಟರು. ಅದನ್ನು ಕೇಳಿ

ಎರಡು ದಿನಗಳ ವರೆಗೆ ನಮಗೆ ಊಟನಿಾಹಗಳೆರಡೂ ಬೇಡವಾಗಿತ್ತು. ಆ ಸುದ್ದಿಗೇಳಿ ನಮ್ಮ ಮರಿಯಾ ಜೋಯಿಸರು ಬಂದರು. "ಏನಮ್ಮಾ ಇಂಥ ಗಾಳಿಮಾತಿಗೆ ಭಯಪಡುತ್ತೀಯೆ? ಅಣ್ಣಾಜಿ ಹುಟ್ಟಿದ ಸಮಯ ದಲ್ಲಿ ನಾನೇ ಇಲ್ಲಿದ್ದೆನಲ್ಲ ಕಲ್ಲಿನಂತೆ. ಅದರಿಂದ, ಹೊತ್ತುವೇಳೆ ತಪ್ಪಿ ಹೋಗಿತ್ತೋ ಎಂದು ಭಾವಿಸಲಿಕ್ಕೂ ಎಡೆ ಇಲ್ಲ. ಆ ಮೇಲೆ, ಗ್ರಹಬಲ ಅಂಶಕಾದಿಗಳನ್ನೆಲ್ಲ ಗುಣಿಸಿ ಜಾತಕಮಾಡಿದವನೂ ನಾನೆ. ಕಲ್ಲು ಹೊತ್ತುಹಾಕಿದರೂ ಅಣ್ಣಾಜಿಗೆ ಅಕಾಲಮರಣವಾಗಲಿಕ್ಕಿಲ್ಲ. ಹಾಗಾಗಿ ಬಿಟ್ಟಿತೆಂದರೆ ಇದೋ ಇನ್ನು ಮುಂದೆ ಕವುಡೆಚೀಲವನ್ನು ಮುಟ್ಟುವುದಿಲ್ಲ. ಏನು ಆ ಭಟ್ಟನೊಬ್ಬನು ಹೇಳಿಬಿಟ್ಟನೆಂದು ಅಂಥ ಆಯುರ್ಬಲದ ಜಾತಕಕ್ಕೆ ಒರಲೆಹಿಡಿದೀತೆ?" ಎಂದು ಹೇಳುತ್ತಿದ್ದರು. ಆಗಲೆ, ಶಕುನ ಹೇಳಿದಂತೆ ಬಂದರು ಗೋಕರ್ಣದ ಶಂಕರಭಟ್ಟರು. "ಸಮುದ್ರದಲ್ಲಿ ಮುಳುಗಿ ಹೋದುದು ಹೌದು; ಆದರೆ ಅದು ಸಾಗರದಿಂದ ಬಂದು ವಿನಾಯಕ ಭಟ್ಟ ರಲ್ಲಿ ಇದ್ದ ಮತ್ತೊಬ್ಬ ಹುಡುಗನು. ಇಬ್ಬರ ಹೆಸರೂ ಒಂದೆ ಆದುದ ರಿಂದ ಸುದ್ದಿ ಪಲ್ಲಟವಾಗಿ ಹಬ್ಬಿತು. ಕಾರ್ವಾರದಲ್ಲಿ ಕಲೆಕ್ಟರಾಗಿದ್ದ ಶ್ರೀನಿವಾಸ ನಾಯಕರೆಂಬವರು ನಿಮ್ಮ ಮಗನನ್ನು ಕರಕೊಂಡು ಹೋದರು. ಅವರಿಗೀಗ ಧಾರವಾಡಕ್ಕೆ ವರ್ಗವಾಗಿದೆ. ನಿಮ್ಮ ಹುಡುಗನೂ ಒಟ್ಟಿಗೆ ಹೋಗಿರಬೇಕು" ಎಂದರು. "ಹೇಗೆ ನಾನು ಹೇಳಿದುದು" ಎಂದು ಮರಿಯಾ ಜೋಯಿಸರು ಆನಂದದಿಂದ ಹೊರಟು ಹೋದರು. ಆದರೇನು? 'ಹುಟ್ಟು ಗುರುಡನಿಂದ ಒಕ್ಕಣ್ಣನೇ ವಾಸಿ' ಎಂಬಂತೆ ಈ ಸುದ್ದಿ. ಎಷ್ಟಾದರೂ ಸುದ್ದಿಯೆಂಬುದು ಸುದ್ದಿಯೆ ಅಲ್ಲವೆ?

**ಶಿವ:—** ಯಾಕೆ? ಶಂಕರಭಟ್ಟರ ಮಾತು ಸಕಾರಣವಾಗಿದೆ. ಎಷ್ಟಾದರೂ ಭಟ್ಟರೆಂದರೆ ಕ್ಷೇತ್ರವಾಸಿಗಳು. "ಬಲಗಯ್ಯಲ್ಲಿ ದೋಸೆ, ಎಡಗಯ್ಯಲ್ಲಿ ಕಾಸು" ಎಂಬಂತೆ ಅವರ ಉದ್ದೇಶ. ಹಾಗೆ ಮಾಡಿ ಯಾದರೂ ಮನೆ ಮಂದಿಯನ್ನು ಸಾಕುತ್ತಾರಲ್ಲವೆ ಅವರು? ಇಂಥ ಸಂದ ರ್ಭದಲ್ಲಿ ಅಂಥವರಲ್ಲಿ ಕೇಳಿದ ಮಾತ್ರದಿಂದ ಕೆಲಸವಾಗದು. ಹಣ್ಣು ಬೇಕಾದರೆ ಮರಹತ್ತಬೇಕು; ಕೊಕ್ಕೆಗೆ ಕತ್ತಿಗಟ್ಟಿ ನಿಲುಕಿಸಿದರೆ ಗುರಿ ಮುಟ್ಟುವುದೆನ್ನಲಾಗುವುದಿಲ್ಲ.

**ದೋಪಿ:**—ಮಾಡುವುದೇನು? ಒಂದು ಕಯ್ಯಲ್ಲಿ ಮೂರು ತೆಂಗಿನ ಕಾಯಿಗಳನ್ನು ಹಿಡಿದಿದ್ದೇವೆ ನಾವು.

**ಶಿವ:**—ಹೌದು; ಈ ಎಲ್ಲ ದುರವಸ್ಥೆಗೂ ನನ್ನ ಅಸಡ್ಡೆಯೇ ಕಾರಣ.

**ಭೀಮ:**—"ಅದಿರಲಿ. ನನಗೇನೋ ಅಣ್ಣಾಜಿಯ ಆಸೆಯೆಂಬುದು ನೂರರೊಳಗೆ ತೊಂಬತ್ತೊಂಬತ್ತೂ ಮುಂದಿನ ಸೊನ್ನೆಗಳಂತೆ "ನಾಸ್ತಿ ನಾಸ್ತಿ" ಎನ್ನುತ್ತಿದೆ; ಹಿಂದಿನ ಒಂದಂಕೆಯಂತಿರುವ ಆಸೆಯೊಂದು ಮಾತ್ರ ಈ ಉಸಿರಿನಂತೆ ಒಳಗೆ ಹೊರಗೆ ಅಲೆದಾಡುತ್ತಿದೆ." ಎಂದು ದೋಪಿ ಯನ್ನು ನೋಡಿ "ಇದೇನು ನನ್ನ ಕಣ್ಣಿಗೆ ಮಾತ್ರವೇ ಕವಿವ ಕತ್ತಲೆಯೊ? ನಿಜವಾಗಿಯೂ ಕತ್ತಲೆಯಾಗುತ್ತಾ ಬಂತೊ?" ಎಂದು ಕೇಳಿದನು.

**ದೋಪಿ:**—ಹೌದು ಸಂಜೆಯಾಗುತ್ತಾ ಬಂತು.

**ಭೀಮ:**—ಹಾಗಾದರೊಂದು ದೀಪವನ್ನು ಕತ್ತಿಸಬೇಡವೆ? "ಮುತ್ತೈದೆಯ ಮೋರೆಗೊಂದು ಬೊಟ್ಟು; ಮುಚ್ಚಂಜೆಯ ಮೋರೆಗೊಂದು ದೀಪ" ಎಂದು ತಾಯಮ್ಮನವರು ಆಗಾಗ ಹೇಳುತ್ತಿದ್ದರು.

**ದೋಪಿ:**—"ಹೌದು, ತರುತ್ತೇನೆ" ಎಂದು ಹೋದಳು.

**ಶಿವ:**—"ಮಾತಿನ ಮೇಲೆ ಮಾತಾಗಿ, ಆಡಬೇಕೆಂದಿದ್ದ ಮಾತು ಹಿಂದುಳಿಯಿತು." ಎನ್ನುವಷ್ಟರಲ್ಲಿ ದೋಪಿ ಒಂದು ದೀಪವನ್ನು ತಂದಿಟ್ಟಳು. ಭೀಮಯ್ಯನು ದೀಪನಮಸ್ಕಾರವನ್ನು ಮಾಡಿ ಒಂದು ನಿಮಿಷ ಅದನ್ನೆ ನೋಡುತ್ತಿದ್ದು ಆ ಮೇಲೆ ಮಾತೆತ್ತಿದನು. "ಶಿವ, ಮುಸುಕು ಮುಯಂಕರಿಸುತ್ತಿದ್ದಾಗ ವಿಾಸಲಾದ ನುಡಿಯನ್ನೆತ್ತುವುದು ಸುಲಕ್ಷಣ ವಲ್ಲವಂತೆ. ಅದರಿಂದ ಈ ವರೆಗೆ ತಡೆದೆನು. ಸರಿಯಾಗಿ ನೋಡೀ ದೀಪ ವನ್ನು. ಮೊದಲು ಹಣತಿಗೆ ಎಣ್ಣೆ ಬತ್ತಿಗಳು ಸ್ವಚ್ಛವಾಗಿದ್ದುವು. ಈಗ ಹಣತಿಗೆ ಕೊಳೆಗೊಂಡಿದೆ; ಎಣ್ಣೆ ಮಾಳುಗಟ್ಟಿದೆ; ಬತ್ತಿ ಚಿಂದಿಯಾಗಿದೆ. ಅದರಿಂದ ಚಿರಿಚಿರಿಗುಟ್ಟಿ ಗರಿಕುವ ದೀಪದ ಅಡಿಯನ್ನು ಮಾತ್ರವಲ್ಲ; ಮೈಯನ್ನೂ, ಏಳೂವರೆ ಶನಿಯಂತೆ ಹಿಡಿದು ಕತ್ತಲೆ ಔಕಿಬಿಟ್ಟಿದೆ. ದೀಪ

ವಿದು ಕತ್ತಲೆಯನ್ನೋಡಿಸುವುದಲ್ಲ; ಕತ್ತಲೆಯ ಸೆರೆಮನೆಯಲ್ಲಿ ಕಟ್ಟಲ್ಪಟ್ಟಿದೆ. ಆದರೂ ಹುಟ್ಟುಗುಣವನ್ನು ಬಿಡುವುದಿಲ್ಲ; ತನ್ನ ಮಟ್ಟಿಗೆ ಜ್ವಲಿಸುತ್ತಿದೆ. ಎಷ್ಟರ ವರೆಗೆ? ಹಣತಿಗೆಯ ಆ ಎಣ್ಣೆ ಆರುವಷ್ಟರ ವರೆಗೆ. ಆ ಮೇಲೆ ಇದಕ್ಕೆ ದೀಪವೆಂಬ ಹೆಸರಾದರೂ ಇದ್ದೀತೆ? ಈ ದೀಪದ ಅವಸ್ಥೆ ನಮ್ಮ ಮನೆಗೂ ಒದಗುತ್ತಾ ಬಂದಿದೆ.''

**ಶಿವ:**—ನಾವು ಮಾಡತಕ್ಕ ಪುರುಷಪ್ರಯತ್ನವು ಹಿಂದೆ ಬಿತ್ತು; ಕಾಲಗತಿಯ ಕೈ ಬಲವಾಯಿತು.

**ಭೀಮ:**—ಅದೂ ಅದೃಷ್ಟವೇ. ಈ ವರೆಗೆ ಯಾರಿಗೂ ತಲೆ ಬಗ್ಗಿಸಿ ನಡೆದವನಲ್ಲ ನಾನು. ಅದು ಸ್ವಾರ್ಜಿತವಲ್ಲ; ಪಿತ್ರಾರ್ಜಿತವಾಗಿ ಬಂದ ಹಕ್ಕಿನದು. ಆದರೆ, ಅಂದಿಗೆ ಅದು ಚಂದ. ಆಸ್ತಿಪಾಸ್ತಿಯೆಲ್ಲ ನಾಸ್ತಿಯಾದ ಇಂದಿಗೆ ಅದು ಚಂದವಾಗಿ ತೋರುವುದೆ ಲೋಕಕ್ಕೆ? ಇಲ್ಲ; ತಲೆಗಿಂತ ದೊಡ್ಡ ಮುಂಡಾಸಾಗಿ ತೋರುತ್ತದೆ. ಆಗ ಆನೆಯ ಬೇಟೆಯನ್ನಾಡಿದವನು ನಾನು; ಈಗ ಆಡಿನ ಏಟಿಗೆ ಮುಗ್ಗರಿಸಿ ಬೀಳುವಂತಾಗಿದ್ದೇನೆ. ನಾಗಪ್ಪಯ್ಯನ ತಂದೆಯೆಂದರೆ ಊಟಕ್ಕೆ ಗತಿ ಇಲ್ಲದೆ ತಂದೆಯವರನ್ನಾಶ್ರಯಿಸಿದನು. ಒಟ್ಟಿಗೆ ಉಂಡು ಬಳೆದವನೆಂದು ನಾನೂ ನಂಬಿದೆ ನಾಗಪ್ಪಯ್ಯನನ್ನು. ಆದರೆ ''ಆ ನಾಗನಿಗೆ ಎಡೆಗೊಡಬೇಡಿರಿ'' ಎಂದು ನಿನ್ನಕ್ಕ ಹೇಳುತ್ತಲೇ ಇದ್ದಳು. ತಲೆ ಬರಹವು ತಿರುಗಿ ಬರುತ್ತಿದ್ದಾಗಲಲ್ಲವೆ? ಹಿತ ಸೂಚನೆಯೂ ಕನ್ನಡಿ ಬರಹದಂತೆ ತಿರುಗು ಮುರುಗಾಗಿಯೆ ತೋರಿತು. ಉಂಡ ಮನೆಯ ಗಳವನ್ನೆಣಿಸುತ್ತಲೆ ಇದ್ದನವನು. ಆ ಮೇಲೆ ನಿನ್ನ ರಾಮಯ್ಯನಿಗೆ ಸಾರಥಿಯಾದನು. ರಾಮಯ್ಯನಿಗೆ ಸಲಬೇಕಾದ ಪ್ರತಿ ವರ್ಷದ ಬಡ್ಡಿಯನ್ನೂ ನಾಗಪ್ಪಯ್ಯನಲ್ಲಿ ಕೊಟ್ಟು ಕಳುಹಿದ್ದೇನೆ. ರಾಮಯ್ಯನೂ ಬಂದಿದೆಯೆಂದೊಪ್ಪಿದುದು ನಿನಗೂ ಗೊತ್ತಿದೆಯಷ್ಟೆ. ಬಂದ ಬಡ್ಡಿಗೂ ಕೂಡಿ ಕೈಫೇತು ಮಾಡಿದನು. ಆಸ್ತಿ ಏಲಮ್ಮೂ ಆಯಿತು. ಹೋಗಲಿ; ರಾಮಯ್ಯನ ಮಕ್ಕಳು ಅನುಭವಿಸಲಿ. ಕೈ ಕಾಲಾದರೂ ಗಟ್ಟಿಯಾಗಿರುತ್ತಿದ್ದರೆ ಈ ಅವಸ್ಥೆಗೆ ಕಂಗಾಲಾಗುತ್ತಿದ್ದಿಲ್ಲ ನಾನು. ಇದೆಲ್ಲ ಆಕಾಶ ಪುರಾಣ! ಆದರೇನು ಹೃದಯಾಕಾಶದಲ್ಲಿ ತುಂಬಿದೆ. ಇದನ್ನು

ಬೇರೆಯಾರಲ್ಲಿ ಹೇಳಲಿ? ನಿನ್ನಲ್ಲಿ ಹೇಳಿ ಉಬ್ಬರಿಸಿದ ಎದೆಯ ಭಾರ ವನ್ನೊಮ್ಮೆ ಕಡಿಮೆಮಾಡಬೇಕೆಂದೆಣಿಸಿದ್ದೆನು. ಅದೂ ಆಯಿತು.

**ಶಿವ**:—ಹಗೆಗಾರರ ಪಂಗಡದಲ್ಲಿದ್ದರೂ ಕೂಡ ನನ್ನಲ್ಲಿ ನಿನಗಿರುವ ನಂಬುಗೆಯನ್ನು ಕಂಡು ಬೆರಗಾಗಿ ಹೋದೆನು. "ಮೂವತ್ತರ ಮೇಲೆ ಮುನ್ನೋಟ"ವೆನ್ನುತ್ತಾರಲ್ಲ. ಅದು ನನ್ನಲ್ಲಿ ಸಫಲವಾಯಿತು. ದೋಪಿ ಯನ್ನು ನೋಡಿ "ಅಕ್ಕ ಬೇಸರಗೊಳ್ಳಬೇಡ" ನಿನ್ನ ನಡತೆ "ಹಾಗೆ ಹೀಗೆ" ಎಂದು ನಾಗಪ್ಪಯ್ಯನು ಮೆಲ್ಲನೆ ನನ್ನೆದೆಯನ್ನು ಸುರಿಯ ತೊಡಗಿದನು. ಅದರಿಂದ ನನ್ನ "ಹುಡುಗ ಬುದ್ಧಿ, ಎಡವಿ ಬಿದ್ದಿತು." ಅವನ ಸೂಜಿ ದಾರಗಳ ಸುರಿತವೆಲ್ಲ ನನಗೆ ಗೊತ್ತಾದುದು ಮೊನ್ನೆ ಮೊನ್ನೆ.

**ದೋಪಿ**:—ನನಗೇನು ಬೇಸರ? ಈ ಕಿವಿಯಲ್ಲಿ ಏನೆಲ್ಲ ಕೇಳ ಬೇಕೆಂದು ದೇವರು ಕಲ್ಪಿಸಿದ್ದಾನೋ ಅದನ್ನೆಲ್ಲ ಕೇಳಲೆಬೇಕು. ಹೇಳೆನು ಎನ್ನಬಹುದು, ಕೇಳೆನೆನ್ನುವುದು ಹೇಗೆ? ಅವನು ಹೇಳುವುದು ಏನು, ಯಾಕೆ, ಎಂಬುದೆಲ್ಲ ನನಗೆ ಗೊತ್ತಿದೆ. ಅಂಥ ಅತ್ತೆಯವರೆದೆಯಲ್ಲಿ ಒರೆದು ಬೆಲೆಗೊಂಡ ನಡತೆಗೆ ಈ ಬಿಕಾರಿ ಬೆಲೆಗಟ್ಟುವವನೇ?

**ಭೀಮ**:—ಆ ಪಿಶಾಚಿ ನನ್ನೆದುರಲ್ಲಿ ತಲೆದೋರಿಸುವುದೆ ಇಲ್ಲವಲ್ಲ. ಕೈಕಾಲು ಬಲವಿರುತ್ತಿದ್ದರೆ ಅವನಿದ್ದಲ್ಲಿಗಾದರೂ ಹೋಗಿ ಕೇಳುತ್ತಿದ್ದೆ 'ನಾಗಪ್ಪಯ್ಯ, ನಿನಗೆ ಉಂಡ ಅನ್ನ ತಲೆಗೇರಿತೋ?' ಎಂದು. ಈಗಲಾ ದರೂ ಏನು? ನನ್ನೆದುರಲ್ಲಿ ಅವನು ಮರುಮಾತೆತ್ತುವಂತಿಲ್ಲ. ಬಲ ಗಯ್ಯನ್ನೆಡಗಯ್ಯಲ್ಲಿಟ್ಟು ತಿರುಗಿಸುತ್ತ ಹಲ್ಲುಗಿಸಿದು "ಹಾಗಣ್ಣ, ಹೀಗಣ್ಣ" ಎಂದು ಮೆಲ್ಲನೆ ತಲೆಮರಸುವನು. ಇರಲಿ, ಅವನಿಗೆ ದೇವರೆ ಬುದ್ಧಿ ಗಲಿಸಬೇಕಷ್ಟೆ.

**ಶಿವ**:—ಅಷ್ಟೆ; ಹೋಗಲಿ.

**ಭೀಮ**:—ಅವನ ಮಾತು ಸುಳ್ಳೆಂದು ಹೇಗೆ ಗೊತ್ತಾಯಿತು ನಿನಗೆ?

**ಶಿವ:**—ರಾಮಯ್ಯನ ಹೆಂಡತಿ ಲಕ್ಷ್ಮಮ್ಮ ಹೇಳಿದಳು "ಇದೆಲ್ಲ ನಿನ್ನನ್ನು ಭೀಮಣ್ಣನಿಂದ ಅಗಲಿಸುವುದಕ್ಕಾಗಿ ಆ ನಾಗಪ್ಪಯ್ಯನು ಮಾಡಿದ ಮಾಟ" ಎಂದು. ಲಕ್ಷ್ಮಮ್ಮನೆಂದರೆ ಭಾಗ್ಯಲಕ್ಷ್ಮಿ.

**ಭೀಮ:**—ಹಾಗೋ? ಆದರೆ ಅವಳು ಮೊದಲೆ ನಿನ್ನೊಡನೆ ಯಾಕೆ ಹೇಳಲಿಲ್ಲ?

**ಶಿವ:**—ಅವಳಿಗೂ ಅಂಜಿಕೆ, ನಾನೆಂದರೆ ಈ ಪಿಶಾಚಿಗಳೆರಡರ ಕೂಟದ ಮೂರನೆಯ ಪಿಶಾಚಿಯೋ ಎಂದು. ಮೊನ್ನೆ ಮಾತಾಡುವಾಗ ಈ ಪಿಶಾಚಿಗಳಿಬ್ಬರ ಹಂಚಿಕೆಯನ್ನೂ ನಡತೆಯನ್ನೂ ಹೇಳಿ ಹೋಯಿತವಳಿಗೆ. ಆ ಮೇಲೆ "ಅಣ್ಣಾ ಅವರೊಡನೆ ಹೇಳಬೇಡ" ಎಂದು ಕಣ್ಣೀರು ಸುರಿಸಿದಳು. ಅವಳಿಗಾಗಲಿ ಮಕ್ಕಳಿಗಾಗಲಿ ರಾಮಯ್ಯನ ನಡತೆಯೆಂದರೆ ಕಿವಿಯಲ್ಲಿ ಕೈ.

**ಭೀಮ:**—ಹಾಗಾದರೆ ಈ ರಾಮಯ್ಯನ ಪ್ರಯತ್ನವೆಲ್ಲ ಯಾವ ಗುರಿಗಾಗಿ?

**ಶಿವ:**—ರಾಮಯ್ಯನ ಸ್ಥಿತಿಯೆಂಬುದು ನಿನಗಿನ್ನೂ ಗೊತ್ತಾಗಿಲ್ಲ. ಅವನೆಂದರೆ ಒಬ್ಬ ಮನುಷ್ಯನೇ ಅಲ್ಲ; ಬಲಿಯೊಡನೆ ಹೊರಡುವ ಭೇತಾಳನು. ಆ ಭೇತಾಳನ ಗಮನಾಗಮನ ಭಾವಭಂಗಿಗಳಿಗೆಲ್ಲ ಒಳಹೊಕ್ಕು ನಡೆಯಿಸುವ ಈ ನಾಗಪ್ಪಯ್ಯನೆ ಕಾರಣ. ಈ ನಿಮ್ಮ ಆಸ್ತಿಯನ್ನು ಏಲಮ್ ಮಾಡಿಸಿದ ಉದ್ದೇಶವಾದರೂ ನಾಗಪ್ಪಯ್ಯನಿಗಾಗಿಯೆ. ಅದನ್ನೆಲ್ಲ ಆ ಮೇಲೆ ನೋಡಿಕೊಳ್ಳುವ. ನಾನೂ ಇದ್ದೇನಲ್ಲ. ಈ ಶಿವರಾಯನು ಇನ್ನು ಇರುಳು ಕಂಡ ಬಾವಿಗೆ ಹಗಲು ಬೀಳುವಂತಿಲ್ಲ.

**ಭೀಮ:**—(ದೋಷಿಯನ್ನೀಕ್ಷಿಸಿ) ನೋಡು, ಆ ಆನೆ(ಮಾವನ)ಯ ಹೊಟ್ಟೆಯಲ್ಲಿ ಆಡು ಹುಟ್ಟುವುದೇ? ಅದರಿಂದಲೆ "ಶಿವರಾಯನನ್ನೊಮ್ಮೆ ಕಂಡು ಮಾತಾಡಬೇಕಿತ್ತು" ಎಂದೆನು.

ಹೀಗೆ ಮಾತಿನ ಮೇಲೆ ಮಾತು ಮೊಳಹಾಕುತ್ತ ಹೋಯಿತು. ಆದರೂ ಆ ಬಟ್ಟೆ ಮುಗಿವಂತಿರಲಿಲ್ಲ. ರೋಗಿಯೊಡನೆ ಹೆಚ್ಚಾಗಿ

ಮಾತಾಡಕೂಡದೆಂದು ಶಿವರಾಯನ ಎಣಿಕೆ ಇತ್ತು. ಅದರಿಂದ ಮಾತಿನ ಹೂಗೊಡುವಲ್ಲಿ ಹೂವಿನ ಎಸಳನ್ನೆ ಕೊಟ್ಟಿದ್ದನು. ತನ್ನ ತಪ್ಪನ್ನು ಆಗಲೆ ಹೇಳಿ ತೊಳೆದುಕೊಳ್ಳದಿದ್ದರೆ ಮತ್ತೆ ಪಶ್ಚಾತ್ತಾಪಕ್ಕೆಡೆಯಾದೀತೆಂದೆ ಅಷ್ಟಾದರೂ ಮಾತನ್ನಾಡಿದುದು. ಅದೂ ಇಷ್ಟುದ್ದದ ಮಾಲೆಯಾಯಿತು. ಈ ಮಾತುಗಳಿಗೆ ಕಿವಿಗೊಡುತ್ತಾ ರಾತ್ರಿ ನಿಂತುಕೊಳ್ಳುವುದೇ? ಹನ್ನೊಂದು ಗಂಟೆಯೂ ಕಳೆದಿತ್ತು. ದೋಪಿ ನೀರನ್ನು ತಂದಿಟ್ಟು "ತಡವಾಯಿತು; ಊಟಕ್ಕೇಳು" ಎಂದಳು. ಆ ಮೊದಲೇ ಊಟ ಮಾಡಿ ಮಕ್ಕಳು ಮಲಗಿದ್ದರು. ಸಂಧ್ಯಾವಂದನೆಯನ್ನು ತೀರಿಸಿ ಊಟಕ್ಕೆಂದು ಕೂತಿದ್ದನು ಶಿವರಾಯ. ಆ ಯೆಡೆಯಲ್ಲಿ ಭೀಮಯ್ಯನ ಊಟದ ಶಾಸ್ತ್ರವೂ ಮುಗಿಯಿತು. ಎರಡು ತುತ್ತನ್ನಾದರೂ ಸರಿ; ಎದ್ದು ಕುಳಿತು ತನ್ನ ಕಯ್ಯಿಂದಲೆ ಉಂಡಿದ್ದನು ಮಧ್ಯಾಹ್ನದಲ್ಲಿ. ಈಗ ಅಷ್ಟೂ ಸಾಗಲಿಲ್ಲ. "ಮಾತಾಡುವಾಗ ಗೊತ್ತಾಗಲಿಲ್ಲ; ಈಗ ಮಿತಿಮೀರಿದ ಆಯಾಸವಾಗುತ್ತಿದೆ" ಎಂದನು ಭೀಮಯ್ಯ. "ನಾನಾಗಲೇ ಊಹಿಸಿದೆ" ಎಂದು ಮಲಗಿದಲ್ಲಿಗೆ ಒಂದೆರಡು ತುತ್ತನ್ನಿತ್ತಳು ದೋಪಿ. ಮತ್ತಿನದಕ್ಕೆ ಕಯ್ಯೆತ್ತಿದಾಗ ಸುರುವಾಯಿತು ಗುಡುಗಿನಂಥ ಕೆಮ್ಮು. ಕೆಮ್ಮು ನಿಲ್ಲುವಾಗ ಬಾಯಲ್ಲಿದ್ದುದಂತಿರಲಿ; ಉಂಡುದೂ ಉಗುಳಿಹೋಯಿತು. ಅದರಿಂದಲೆ "ಊಟದ ಶಾಸ್ತ್ರ"ವೆಂದು ಹೇಳಿದುದು. ಆ ಮೇಲೆ ದೋಪಿ ಶಿವರಾಯನಿಗೆ ಇಕ್ಕುತಿದ್ದಳು.

**ಭೀಮ:**—(ದೋಪಿಯನ್ನು ಕರೆದು) ಈಗಿನ ಆಯಾಸವು ಎಂದಿನಂತಲ್ಲ.

**ದೋಪಿ:**—ಎಡೆಗಡಿಯದೆ ಮಾತಾಡಿದಿರಿ ಸುಮಾರು ಹೊತ್ತಿನವರೆಗೆ. ಪಂಡಿತರು ಹೇಳಿದುದಲ್ಲವೆ ಹೆಚ್ಚು ಮಾತಾಡಬಾರದೆಂದು?

**ಭೀಮ:**—(ಕೋಪದಿಂದ) ಅವನಿಗೆ ಗೊತ್ತಿದೆ ಬದನೆಕಾಯಿ. ತನ್ನಿಂದ ಸಾಗದುದನ್ನು ನನ್ನ ತಲೆಮೇಲೆ ಹಾಕುತ್ತಾನೆ. ಹೊರಿಸಿದುದನ್ನೆಲ್ಲ ಹೊರುತ್ತದೆ ಈ ಹೇರೆತ್ತು. ಏನು, ದೈವವೇ ಕಳುಹಿಸಿಕೊಟ್ಟ ಶಿವರಾಯನಲ್ಲಿ ಈಗಳೆ ಮಾತಾಡಿಕೊಳ್ಳಬೇಡವೆ? "ನಾಳೆನಾಡಿದು ಮಾತಾಡಿ

ಕೊಳ್ಳಬಹುದೆಂದು ಪಂಡಿತನು ಹೇಳಿದ್ದಾನೆ'' ಎಂದರೆ ಅಲ್ಲಿಯವರು (ಆಕಾಶಕ್ಕೆ ಕೈದೋರಿಸಿ) ಬರಲಿಕ್ಕೆ ಬಿಡುವರೇನು? ಮಾಡುವುದೇನು? ಅವನಿಗೆ ಮತಿ ಇಲ್ಲ; ನನಗೆ ಗತಿ ಇಲ್ಲ. ನಾಯಿಹುಣ್ಣಿಗೆ ಬೂದಿಯೇ ಮದ್ದು.

ಅದನ್ನು ಕೇಳಿ ಶಿವರಾಯನು ಚಕಿತನಾದನು. ಮೂಗು ಬಾಯಿಗಳಲ್ಲೊಂದು ಕೈದೊಳೆದು ಬಂದನು. ಮೆದುಮಾತುಗಳಿಂದ ಮೆಲ್ಲನೆ ಭೀಮಯ್ಯನೆದೆಯನ್ನು ಹದಗೊಳಿಸಿದನು. "ಹೌದು ಶಿವ, ಹೌದು. ಸಿಟ್ಟಿನಂಥ ಹಗೆ ಮತ್ತೊಂದಿಲ್ಲವೆಂಬುದನ್ನು ಬಲ್ಲೆ. ಮಾಡುವುದೇನು? ಸಿಡುಕೆಂಬುದು ಮೂಗಿನ ತುದಿಯಲ್ಲಿರುವುದು ಮೊದಲೆ ನನ್ನ ಹುಟ್ಟುಗುಣ. ಅದಕ್ಕೆ ಈ ರೋಗವೂ ಕೈಗೊಟ್ಟಿದೆ. ಬೆಳಗಾತ ಕೇಳಿದರೆ ತನ್ನ ಕುಡಿಕತನವನ್ನು ಆ ಕುಡಿಕನೆ ಹಳಿವುದಿಲ್ಲವೆ? ಹಾಗಾಗಿದೆ ನನ್ನ ಅವಸ್ಥೆ. ಹಬ್ಬಾ'' ಎಂದು ಭೀಮಯ್ಯನು ಉಬ್ಬಸಬಿಟ್ಟನು. ಅದರೊಡನೆ ತಲೆದೋರಿತು ಮತ್ತೊಂದು ಕೆಮ್ಮು. ಕಡೆಗೆ ಉಗುಳುತ್ತಾ "ಕಫದ ಗಟ್ಟಿ ಎದೆಯನ್ನಂಟಿಕೊಂಡಿದೆ. ಇದೇನು ಕೆಮ್ಮಿನ ಕಾಲವೋ, ಕಾಲದ ಕೆಮ್ಮೋ, ಗೊತ್ತಾಗುವುದಿಲ್ಲ'' ಎಂದನು.

**ಶಿವ:**—ಏನೂ ಇಲ್ಲ. ಕಂಗಾಲಾಗಬೇಡಿರಿ. ಮಾತಾಡುತ್ತಿದ್ದುದರಿಂದ ಆದ ಅಶಕ್ತಿ ಅದು. ಸುಮ್ಮನೆ ಮಲಗಿರಿ.

**ಭೀಮ:**—ಇಲ್ಲ, ಕಂಗಾಲಾಗುವುದಿಲ್ಲ. ನಿನ್ನನ್ನೊಮ್ಮೆ ಕಂಡು ಮಾತಾಡಬೇಕೆಂದಿತ್ತು. ಪುಣ್ಯಶೇಷದಿಂದಾಗಿ ಅದೂ ಆಯಿತು. ಇನ್ನೂ ಕಂಗಾಲಾಗುವೆನೆ? ಎಂದೂ ಇಲ್ಲ. ಇನ್ನು ಸುಮ್ಮನೆ ಮಲಗುತ್ತೇನೆ. ಅದಕ್ಕೂ ಸಮಯವಾಗುತ್ತಾ ಬರುತ್ತಿದೆ.

ಎನ್ನುವಷ್ಟರಲ್ಲಿ ಉಕ್ಕಿತು ಮತ್ತೊಂದು ಕೆಮ್ಮು. ಉಗುಳಿದ ಕಫವನ್ನು ನೋಡಿದ ಶಿವರಾಯನ ಕಣ್ಣು ದೋಪಿಯ, ದೋಪಿಯ ಕಣ್ಣು ಶಿವರಾಯನ ಕಡೆಗೆ ತಿರುಗಿದುವು. ಒಡೆಯಲಿಕ್ಕಾದ ಹಡಗಿನಲ್ಲಿದ್ದ ವ್ಯಕ್ತಿಯಂತಿತ್ತು ದೋಪಿಯ ನೋಟ. ರಕ್ಷಣೆಗಾಗಿ ಧಾವಿಸಿಬಂದ ಹಡಗಿನ ನಾವಿಕನಂತಿತ್ತು ಶಿವರಾಯನ ದೃಷ್ಟಿ. ಆಕೆಯ ಕಣ್ಣಿನಲ್ಲಿ ನೀರು ಸುರಿಯು

ತೊಡಗಿತು. ಶಿವರಾಯನ ಮೋರೆ, ತೆಳ್ಳಗಾಗಿ ಮುಗಿಲು ಮುಸುಕಿದ ಆಕಾಶದಂತೆ ಸದ್ದಿಲ್ಲದೆ ಗಂಭೀರವಾಗಿತ್ತು. ಎಲ್ಲ ಭಾರಕ್ಕೂ ತನ್ನ ತಲೆಯನ್ನೆ ಕೊಡಬೇಕಾಗುತ್ತಿದ್ದರೆ ವಿಚಾರವತಿಯಾದ ಆಕೆ ಅಳುತ್ತಿದ್ದಿಲ್ಲ. ಅತ್ತರೆ ಕಾನನರೋದನವಾಗುತ್ತಿತ್ತದು. ಈಗ ಹಾಗಲ್ಲ; ಅದರಿಂದಲೆ ಕಣ್ಣೀರು.

**ಭೀಮು:**—(ಉಬ್ಬುಸವನ್ನು ಬಿಡುತ್ತಾ) ಹೇಳಿದುದಲ್ಲವೆ ಅಳಬೇಡವೆಂದು? ಹುಟ್ಟಿದವನು ಸಾಯಲೇಬೇಕೆಂದು ಪ್ರಕೃತಿ. ಅದಕ್ಕೆ ವಿರೋಧವಾಗಿ ಒಬ್ಬ ಮನುಷ್ಯನು ಸಾಯದಿದ್ದರೆ ಅಳಬೇಕು. ಸಾವು ಎಂಬ ಫಲಕ್ಕೆ ಹುಟ್ಟೆಂಬುದೇ ಬಿತ್ತು. ವೈದ್ಯರು ಸಮರ್ಥರಾಗಿದ್ದರೆ ರೋಗವನ್ನು ಗುಣಪಡಿಸಬಹುದು. ಸಾವನ್ನು ತಪ್ಪಿಸಿದ ವೈದ್ಯರುಂಟೆ? ಇದನ್ನೆಲ್ಲ ತಿಳಿಯದವಳಲ್ಲ ನೀನು. ನಡತೆಯಲ್ಲಿ ಪ್ರತ್ಯಕ್ಷವಾಗದಿದ್ದರೆ ಆ ತಿಳಿವು ತಿಳಿವಲ್ಲ. ಅಳಬೇಡ; ನನ್ನಾಣೆಯಾಗಿಯೂ ಅಳಬೇಡ.

**ದೋಪಿ:**—(ಕಣ್ಣೀರನ್ನೊರಸಿ) ನಾನು ಅಳಲಿಲ್ಲ; ಅದು ತಾನಾಗಿ ಬಂದು ಹೋಯಿತು.

**ಭೀಮು:**—ಹೌದು; ಕಣ್ಣೀರಿನಿಂದ ಮರುಕವು ತೊಳೆದು ಹೋಗಿ ಸುಖವಾಗುವುದೆನ್ನುತ್ತಾರೆ. ನನ್ನೆಣಿಕೆ ಹಾಗಿಲ್ಲ. ಹಾಲು ಕುದಿದು ಒಕ್ಕರೆ ನಿಷ್ಫಲವಾಗುವುದು. ಹಾಗೆಯೇ ಕಣ್ಣೀರಿನ ರೂಪವಾಗಿ ಒಕ್ಕ ಪ್ರೇಮವೂ ಬಂಜೆಯಾದೀತು. ನಿನಗೆ ನನ್ನಲ್ಲಿರುವ ಪ್ರೇಮವೆಂಥದೆಂಬುದರಲ್ಲಿ ಸಂದೇಹವಿಲ್ಲ. ಅದನ್ನು ಕಣ್ಣೀರಿನ ರೂಪವಾಗಿ ಚೆಲ್ಲಿ ಬಿಡಬೇಡ. ಅಂತಃಕರಣ ಪಾತ್ರದಲ್ಲಿ ತುಂಬಿಸಿಕೊಂಡ ಆ ಹಾಲಿನಿಂದ ಈ ಮಕ್ಕಳನ್ನು ಬೆಳೆಯಿಸು. ಬರಿಯ ಪಿಂಡತಿಲೋದಕಾದಿಗಳು ಗುರಿಮುಟ್ಟವು. ಅಂಥ ಪ್ರೇಮವೇ ಭೀಮಯ್ಯನಿಗೂ ಸಲುತ್ತಾ ಇದ್ದೀತು.

**ದೋಪಿ:**—ಆಯಿತು; ಇನ್ನು ಅಳುವುದಿಲ್ಲ.

"ಹಾಗಾದರೆ ಆ ಕಯ್ಯನಿತ್ತ ನೀಡು" ಎಂದನು ಭೀಮಯ್ಯ. ನೀಡಿದಳು ದೋಪಿ. ಮೆಲ್ಲನೆ ಆಕೆಯ ಕಯ್ಯನ್ನು ಹಿಡಿದುಕೊಂಡು "ಶಿವ,

ಇದು ಈ ಹೊತ್ತು ಹಿಡಿದ ಕಯ್ಯಲ್ಲ; ಆ ಹೊತ್ತು ಹಿಡಿದು ಈ ಹೊತ್ತು ಸಡಿಲಿ ಹೋಗುವ ಕೈ. ಹೊರಗಿನದು ಸಡಿಲಿ ಹೋದರೂ ಒಳಗಿನದು ಬಿಗಿವಿಡಿದುಕೊಂಡೇ ಇರುವುದೆಂಬುದನ್ನು ತಿಳಿಸಲಿಕ್ಕಾಗಿ ಹಿಡಿದ ಕೈ. (ದೋಪಿಯನ್ನೀಕ್ಷಿಸಿ) ಸಾಂಸಾರಿಕ ದೃಶ್ಯಗಳಿಂದ ಮುಗ್ಧನಾದ ನಾನು, ನಿನ್ನ ಹಿತಾಭಿನಯಗಳ ಹುರುಳನ್ನರಿಯದಾದೆನು. ಕಡೆಬುಡವಿಲ್ಲದ ಕಷ್ಟಗಳಿಗೆ ಇಡೀ ಸಂಸಾರವನ್ನು ಈಡಾಗಿಸಿದೆನು. ಹೇಳಿ ಫಲವಿಲ್ಲ; ಮರಳನ್ನು ಗಾಣದಲ್ಲಿ ತಿರುಗಿಸಿದರೂ ಎಣ್ಣೆಯೊಸರುವಂತಿಲ್ಲ. ಆಗುವುದಾಗಿ ಹೋಯಿತು. ಆದರೂ ನಿನ್ನೆದೆಯೊಳಗಿನ ಬೆದೆಯನ್ನು ನಾನೇ ತಿಳಿದಿರುವಂತೆ ನನ್ನದನ್ನು ನೀನೊಬ್ಬಳೆ ಬಲ್ಲವಳು. ನನ್ನ ತಪ್ಪುಗಳೇನಿದ್ದರೂ ಮರೆತುಬಿಡು" ಎಂದನು.

**ದೋಪಿ:**—ನಿಮ್ಮ ಮಾತುಗೆಲಸಗಳೆಲ್ಲವನ್ನೂ ದೈವ ಪ್ರೇರಿತವೆಂದೆ ಭಾವಿಸುತ್ತಿದ್ದೆನು. ಅದು ತಪ್ಪು, ಇದು ಒಪ್ಪು, ಎಂದು ವಿಂಗಡಿಸಲೇ ಇಲ್ಲ.

**ಭೀಮ:**—ಸರಿ; ಈ ಪ್ರಪಂಚದಲ್ಲಿ ಅಲೆದಾಡಿದುದಕ್ಕೆ ಅದೊಂದಾದರೂ ಫಲವಾಯಿತು. ಶಿವ, ಅಗ್ನಿಸಾಕ್ಷಿಕವಾಗಿ ಹಿಡಿದೆನು ನಿನ್ನಕ್ಕನ ಕೈಯನ್ನು. ಇವಳನ್ನೀಗ ನಡುಗಾಡಲ್ಲಿ ಬಿಟ್ಟು ಮಾಯವಾಗಬೇಕಾಗಿದೆ. ಆದರೇನು? ದಮಯಂತಿಯನ್ನು ಗೊಂಡಾರಣ್ಯದಲ್ಲಿ ಬಿಟ್ಟೋಡಿದ ಆ ನಳ ಮಹಾರಾಜನಿಗಿಂತಲೂ ಈ ನಳನು ಪುಣ್ಯಾತ್ಮನಲ್ಲವೆ? ಭೀಮಕರಾಜನ ಮಗನ ಕಯ್ಯಲ್ಲೆ ಅಕ್ಕನನ್ನು ಒಪ್ಪಿಸುತ್ತಾನೆ ಈ ನಳಮಹಾರಾಜನು. ಅದಿರಲಿ, ಹೊಕ್ಕಮನೆ ಬರಡಾದ ಹೆಂಗುಸಿಗೆ ಹೊರಟಮನೆಯೆ ಗತಿ. ಇವಳು ಹೇಗೂ ನಿನ್ನವಳು; ಈ ಮರಿಗಳು ರೆಕ್ಕೆ ಬಲಿತ ಮೇಲೆ ಹಾರಾಡಿ ಜೀವಿಸಿಕೊಳ್ಳುವುವು. ಅಷ್ಟರ ವರೆಗೆ ಕಣ್ಣಿಟ್ಟುಕೋ.

ಭೀಮಯ್ಯನ ಮಾತು ಮುಗಿಯಲಿಲ್ಲ; ಆದರೆ, ಬರೆವಂತಿರಲಿಲ್ಲವದು. ಮೊದಮೊದಲು ಒಂದು ಮಾತನ್ನೆತ್ತಿ ಮತ್ತೊಂದರಲ್ಲಿ ಕೊನೆಗೊಳ್ಳತೊಡಗಿತು. ಆ ಮೇಲೆ ಮುಮ್ಮಾತು ವ್ಯಕ್ತವಾಗಿ ಹಿಮ್ಮಾತು ಅವ್ಯಕ್ತವಾಗಲಾರಂಭಿಸಿತು. "ತಡೆಯಿರಿ ಬರುತ್ತೇನೆ. ನಮ್ಮ ಅಣ್ಣಾಜಿ ಬಂದಿ

ಡ್ಡಾ ನೆ. ಒಮ್ಮೆ ಮೋ ರೆ ಯು ನಾ ದ ರೂ ” ಎಂದನು. ತದನಂತರ ಒಂದರ ಹಿಂದೆ ಮತ್ತೊಂದರಂತೆ ವ್ಯಂಜನಾಕ್ಷರಗಳು ಮಾಸತೊಡಗಿದುವು. ಮತ್ತೆ ವ್ಯಂಜನವೇನೂ ಇಲ್ಲದ ಅಚ್ಚು ಮಾತ್ರವಾಯಿತು. ಬರಿಯ ಅಚ್ಚಿನಲ್ಲಿ ಮಾತು ಅಚ್ಚಾಗುವುದೆ? ಕಡೆಗೆ ಸಂಧ್ಯಕ್ಷರಗಳು ವಿಸಂಧಿಗಳಾಗುತ್ತ ಬಂದುವು. ಅಕಾರದಿಂದೇರಿದ ಸ್ವರವು ಆ ಅಕಾರಕ್ಕೇ ಇಳಿಯಿತು. ಆಗ ಎಣ್ಣೆಯಾರಿದ ದೀಪದಂತಿತ್ತು ಮುಖಕಾಂತಿ. ಆ ದೀಪಜ್ವಾಲೆ ಪೊಂಗಿ ಹಿಂಗುವಂತಿತ್ತು ಕಣ್ಣು. ತಿದಿಯೊತ್ತಿದಂತೆ ಒಂದು ಉಬ್ಬಸವೆದ್ದಿತು. ಗಾಳಿಗೆ ಹಿಡಿದ ದೀಪದಂತೆ ಕಣ್ಣಿನ ಕಾಂತಿಯೂ, ಉಬ್ಬಸದ ಸ್ವರದೊಡನೆ ಆ ಅಕಾರಸ್ವರವೂ “ಉಸ್ಸೆಂ”ದು ಹಾರಿಹೋಯಿತು. ಭೀಮಯ್ಯನ ಆತ್ಮವು ಆಕಾಶದಲ್ಲಿ, ಮಲಗಿದ ಕಿರುಮಕ್ಕಳವು ನಿದ್ರಾದೇವಿಯ ಮಡಿಲಲ್ಲಿ, ಸುಖವಾಗಿ ತೇಲಾಡುತ್ತಿದ್ದುವು. ಶಿವರಾಯನು ಸಂಸಾರಾವಸ್ಥೆಯ ಎಣಿಕೆಯಲ್ಲಿ ಮಗ್ನನಾಗಿದ್ದನು. ದೋಪಿ ಭೀಮಯ್ಯನ ಮುಖವನ್ನೇ ನೋಡುತ್ತಾ ಮೈಮರೆತು ಹೋಗಿದ್ದಳು. ನಿಶ್ಶಬ್ದದ ಆಡಳಿತವು ನೆಲೆಗೊಂಡಿತ್ತು ಸ್ವಲ್ಪ ಕಾಲ. ಆ ಶಾಂತತೆಗೆ ಭಂಗವನ್ನುಂಟುಮಾಡುವಂತೆ “ಕೊಕ್ಕೋ ಕ್ಕೋ” ಎಂದು ಕೂಗಿತು ಕೋಳಿ. ಅದರೊಡನೆ ಹೊರಗಣಿಂದ ಒಂದು ಪಿಸು ಮಾತೂ ಕೇಳಿತು.

---

೨.

ಮೇಲು ನಾಡಿನ ಬಯಲಲ್ಲಿ ಪಳಗಿದ ಕಣ್ಣಿಗೆ ಈ ಕೆಳನಾಡಿನ ನೋಟವು, ಮೊದಮೊದಲು ಕುತೂಹಲದಾಯಕವಾಗಬಹುದು; ಕಡೆಕಡೆಗೆ ಬೇಸರಿಕೆಯನ್ನೊದಗಿಸಬಹುದು. ನೋಟವು ಒಂದರಂತಲ್ಲವಿನ್ನೊಂದು; ಅದರಿಂದ ಕುತೂಹಲ. ಹತ್ತಬೇಕು ಇಳಿಯಬೇಕು, ನಿಲುಕಬೇಕು ನುಸುಳಬೇಕು; ಅದರಿಂದ ಬೇಸರ. ಮೊತ್ತಮೊದಲೊಮ್ಮೆ ಕಡಲಿನ ಬಿಡಾರವಾಗಿತ್ತಂತೆ ಈ ನಾಡು. ವಜ್ರಾಘಾತಕ್ಕೆ ಹೆದರಿ ಪರ್ವತಗಳ ಪಿಳ್ಳೆ ಮರಿಗಳೆಲ್ಲ ಈ ಕಡಲಿನಲ್ಲೆಡೆಗೊಂಡುವು; ಮಲಯಾಚಲದ ಸಾಲೊಂದು ಪೂರ್ವದಿಕ್ಕಿನಲ್ಲಿ ರಕ್ಷಣೆಯ ಆಳ್ವೇಲಿಯಾಗಿ ನಿಂತು, ಇಂದ್ರಾಯುಧ ದಿಂದ ರೆಕ್ಕೆಯಳಿದು ಅಲ್ಲೆ ಸ್ತಬ್ಧವಾಯಿತು. ಆ ಮೇಲೆ ಪರಶುರಾಮ ನಿಂದ ಕಡಲು ಹಿಂಜರಿದ ಈ ಕ್ಷೇತ್ರದಲ್ಲಿ ದಟ್ಟವಾಗಿ ನೆಲೆಗೊಂಡ ಗಟ್ಟ ಗುಡ್ಡಗಳು, ಕುದುರುದಿಣ್ಣೆಗಳು ಎಂದರೆ ಅಂದು ಒಳಹೊಕ್ಕ ಮಲಯಾಚ ಲದ ಆ ಪಿಳ್ಳೆಗಳೇ. ಬಹುಕಾಲದ ಜಲವಾಸದಿಂದ ಚಳಿಹಿಡಿದು, ರೆಕ್ಕೆಗಳಿ ದ್ದರೂ ಸ್ತಬ್ಧವಾಗಿವೆ, ಎನ್ನಬಹುದು ಪೌರಾಣಿಕರು.

ಪರಶುರಾಮಕ್ಷೇತ್ರದೊಳಗೆ ಕಾರ್ವಾರದಿಂದ ಚಂದ್ರಗಿರಿಯ ವರೆಗೆ ಕನ್ನಡನಾಡು. ಇದರೊಳಗೆ ಕಲ್ಯಾಣಪುರದಿಂದ ತೆಂಕಣದು ತುಳು ನಾಡಾದರೂ ಅದೂ ಕನ್ನಡದಲ್ಲೆ ಸಂಗಮವಾಗಿದೆ. ತುಳುವ ಸಂಸ್ಕೃತಿ ಇಲ್ಲಿಯ ಕನ್ನಡ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿದೆ. ಕನ್ನಡದ ಈ ತೆಂಕನಾಡಿನಲ್ಲಿ ಮಂಜೇಶ್ವರವೆಂಬುದೊಂದು ಕರಾವಳಿಯ ಊರು. ಅಲ್ಲಿಂದ ಘಟ್ಟಾವಳಿಗೆ ಹರಿಯುತ್ತಿದೆ ಹೆದ್ದಾರಿ. ಒಂಬತ್ತು ಹತ್ತು ಮೈಲು ಮುಂಬರಿವಾಗ ಸಿಕ್ಕುತ್ತಿದೆ ಆನೆಕಲ್ಲೆಂಬ ಹಳ್ಳಿ. ಆನೆಕಲ್ಲಿನ ಹೊಳೆಯಿಂದಲೆ ಮೇಲೇರಿ ಹಬ್ಬಿದೆ "ಕಳಂಜಿಮಲೆ" ಎಂಬ ಗುಡ್ಡ. "ಆನೆಕಲ್ಲಿನಿಂದ ಏನೆಕಲ್ಲ ಮಲೆವರೆಗೆ" ಎಂಬ ಹಳ್ಳಿಗರ ಮಾತಿನಿಂದ ಈ ಕಳಂಜಿಮಲೆಯ ವ್ಯಾಪ್ತಿಯೆಷ್ಟೆಂಬುದನ್ನರಿತುಕೊಳ್ಳಬಹುದು. "ಏನೆ ಕಲ್ಲು" ಎಂದರೆ ಮಲಯಾದ್ರಿಯ ಒಂದು ಶಿಖರವೆಂಬುದನ್ನು ಮರೆಯ

ಬಾರದು. ತಂತಮ್ಮ ನಾಡುಗಳೊಳಗೆ ಹಾದುಹೋಗುವ ಈ ಸಾಲ್ಮಲೆಯ ಪ್ರಾಂತಗಳನ್ನು ಆಯಾ ನಾಡವರು ಬೇರೆ ಬೇರೆ ಹೆಸರಿಟ್ಟು ಕರೆಯುತ್ತಾರೆ. ಇದರ ತೆಂಕಣ ತಪ್ಪಲಲ್ಲಿ ಆನೆಕಲ್ಲಿನಿಂದ ಹರಿಯುವ ಬೀದಿ, ಕಾಸರ ಗೋಡಿನಿಂದ ಬರುವ ಬೀದಿಯೊಡನೆ ಉಕ್ಕಡವೆಂಬಲ್ಲಿ ಸಾಯುಜ್ಯ ವನ್ನೊಂದುತ್ತಿದೆ. ಒಂದಾದ ಹೆದ್ದಾರಿ ಕಳಂಜಿಮಲೆಯ ಕಣಿವೆಯ ಮೂಲಕವಾಗಿ ವಿಟ್ಟಲಕ್ಕಯ್ದುವುದು. ಆ ಎಡೆಯಲ್ಲಿ ಮೊದಲಿನ ವಿಟ್ಟಲದರಸರ ಪೌಜಿನ ಠಾಣಯವಿದ್ದುದರಿಂದಲೇ ಅದಕ್ಕೆ ಉಕ್ಕಡ ವೆಂಬ ಹೆಸರಾಗಿದೆ. ಈಗ ಅಲ್ಲೊಂದು 'ಗುತ್ತಿಗೆ' ಮಾತ್ರ ಇದೆ. ಸಂಧ್ಯಾಕಾಲದಲ್ಲಿ ಆ ಗುತ್ತಿಗೆಯಲ್ಲಿ ಕೂಡುವ ಅದೊಂದು ಪೌಜು ಮಾತ್ರವೆ ಹಳೆಗಾಲದ "ಉಕ್ಕಡ"ವೆಂಬ ಹೆಸರನ್ನು ಹೇಳಿಸುತ್ತಿದೆ. ಮುಂದಿನ ಅದೇ ಮಲೆಸಾಲನ್ನು "ಕೊಚ್ಚಿ ಗುಡ್ಡೆ" ಎನ್ನುತ್ತಾರೆ ಆ ನಾಡ ವರು. ವಿಟ್ಟಲಸೀಮೆಯೆಂಬ ಹಿಂದುಸ್ಥಾನಕ್ಕೆ ಕಳಂಜಿಮಲೆ ಎಂಬುದೊಂದು ವಿಂಧ್ಯಾಚಲವೆಂದರೂ ಸಲ್ಲುವುದು. ಇದು ಮಲೆಮಾತ್ರವೆ ಅಲ್ಲ; ತೆಂಕ ಬಡಗಣ ನಾಡುಗಳಿಗೆ "ತಾಯ್ಮೊಲೆ" ಎಂದರೂ ತಪ್ಪಾಗದು. ಇದರ ಅಲ್ಲಲ್ಲಿಯ ಶಿಖರಗಳಿಂದ ಇಕ್ಕಡೆಗೆ ಎಡೆಬಿಡದೆ ಹರಿದುಬರುವ ಆ ತಿಳಿ ನೀರಿಲ್ಲದಿರುತ್ತಿದ್ದರೆ ಆಯಾಪ್ರಾಂತಗಳೆಂದರೆ, ತಾಯಿಲ್ಲದ ತಬ್ಬಿಲಿಗಳಾಗು ತ್ತಿದ್ದುವು. ಹೀಗೆಂದರೆ, ಆಲಂಕಾರಿಕವಚನವಾಗುವುದಾದರೆ ಮರು ಭೂಮಿಗಳಾಗುತ್ತಿದ್ದುವು ಎನ್ನುವ.

ಕಡಲಕರೆಯಿಂದ ನೋಡಿರಿ ಮೂಡಣ ದಿಕ್ಕನ್ನು. ಪ್ರಕೃತಿದೇವಿ ಒರಗುವ ಮಣೆಯಲ್ಲಿ ಮಂಡಿಸಿದ್ದಾಳೆ. ಮಲಯಾಚಲವೆಂಬ ಮೋರೆ, ಅಪಾರಸಾಗರದ ನೆಡುನೋಟದಲ್ಲಿ ಮಗ್ನವಾಗಿದೆ. ಉಟ್ಟ ಹಸುರು ಹಚ್ಚೆಯ ಕಾಂಗಿನ ಸೆರಗು ತಂಗಾಳಿಯ ತೀಟದಿಂದ ಕುಣಿದಾಡುತ್ತಿದೆ. ಅವಳ ನಿಸರ್ಗವಾದ ಶರೀರ ಗಂಧದಿಂದಾಗಿಯೆ ಮಲಯಮಾರುತನು ಕವಿಗಳ ಮನ್ನಣೆಗೆಡೆಯಾದುದು. ಆಕೆಯ ಕಾಲ ನಿರ್ಮಲವಾದ ಅಡಿಯನ್ನು ಮಾತ್ರ ಕಾಣಬಹುದು ಸಮುದ್ರತೀರದ ಮರಳಿನಲ್ಲಿ. ನೆರೆ ನೊರೆಗಳಿಂದೊಡವೆರೆದ ತೆರೆ, ಆಕೆಯ ಕಾಲ ಮಣಿಗಂಟಿಗೆ ಕಡಗವಾಗ ಬೇಕೆಂದು ಎಡೆಬಿಡದೆ ಹೆಣಗುತ್ತಿದೆ. ಆದರೇನು? ಸ್ವಭಾವ ಸುಂದರ

ವಾದ ಆ ಪಾದಕ್ಕೆ ತೊಡಿಸಲರ್ಹವಾದ ತೊಡವಾವುದು? ತೊಡಿಗೆಯಾಗುತ್ತೇನೆಂಬ ಆನಂದದಿಂದುಕ್ಕಿ ಬಂದರೂ, ಆ ಕಾಲನ್ನು ಮುಟ್ಟಿದೊಡನೆ ತನ್ನ ಅನರ್ಹತೆಗೆ ತಾನೇ ನಾಚಿ ಹಿಂಜರಿಯುತ್ತಿದೆ ಆ ತೆರೆ. "ಒಂದಲ್ಲವಾದರೆ ಮತ್ತೊಂದು ತೆರೆ; ತೆರೆದು ನೋಡುವ" ಎಂದಾಗಿರಬಹುದು ಆ ಕಡಲೆಂಬ ಸೊನ್ನೆಗಾರನ ನೆಡುನಂಬುಗೆ. ಅಲ್ಲ; ಕಾಲನ್ನು ಅಲಂಕರಿಸಲಿಕ್ಕಾಗಿ ಹೆಣಗುವುದಲ್ಲವದು. ಪ್ರಕೃತಿದೇವಿಯ ಕಾಲನ್ನು ಸುತ್ತಿ ಮೆಯ್ಯನ್ನೂ ಗಿಳಂಕರಿಸಲಿಕ್ಕೆಂದು ಬರುವ ನಾಗನ ಬಾಯ್ದೆರೆಯಾಗಿರಬೇಕು. ಅಂಥ ಮರೆ ಮೋಸಕ್ಕೆ ಪ್ರಕೃತಿದೇವಿ ಪಕ್ಕಾಗುವಳೆ? ನೋಡಿರಿ, ಅವಳ ಪಾದಾಘಾತದಿಂದ ಛಿನ್ನವಿಚ್ಛಿನ್ನವಾಗುತ್ತಿದೆ ತೆರೆಯೆಲ್ಲ.

ಮೊದಲೆ ಚಳಿಗಾಲ; ಚಳಿಗಾಲಕ್ಕೆ ಕೈ ಗೊಟ್ಟಿದೆ ರಾತ್ರಿ; ರಾತ್ರಿಗೆ ಒಪ್ಪವಿಟ್ಟಿದೆ ಹುಣ್ಣಿಮೆ. ಹಾಗೆಂದ ಮೇಲೆ ಕೇಳುವುದೇನು? ಸೂರ್ಯನು ಮುಳುಗಿದರೂ ಕತ್ತಲೆಗೆ ತನ್ನ ಕರಿದಲೆಯನ್ನೆತ್ತಲಿಕ್ಕೆ ಎಡೆಯೆ ಒದಗಲಿಲ್ಲ. ಚಪ್ಪರಕ್ಕೆ ಕಟ್ಟಿದ ಮಡಿಬಟ್ಟೆಯ ಮೇಲ್ಹಾಪಿನಂತೆ ಬಾನನ್ನು ಮುಸುಕಿದ ಬಿಳಿ ಮುಗಿಲು. ಎಡೆಯೆಡೆಯ ಬಿಡುಬಿಡುಗಳಲ್ಲಿ ಕತ್ತಿಸಿದ ವಿದ್ಯುದ್ದೀಪಗಳಂತಿರುವ ಚುಕ್ಕಿಗಳು. ತಂತಿಯಿಂದ ಸೆಳೆಯುತ್ತಿರುವ ಹೆಜ್ಜೊಡರೆಂಬಂತೆ ಚಂದ್ರಮಂಡಲವು ಪಡುಗಡೆಗೆ ಸರಿಯುತ್ತಾ ಕಡಲಿನಿಂದ ಒಂದೆರಡು ಮಾರು ಎತ್ತರದಲ್ಲಿ ನೇತಾಡುತ್ತಿದೆ. ಬೆಳ್ಮುಗಿಲು ಅತ್ತಿತ್ತ ಸರಿವಾಗ ಮರೆಗೊಳ್ಳುವ ನಕ್ಷತ್ರಗಳು, ಆರಿದ ವಿದ್ಯುದ್ದೀಪಿಕೆಗಳನ್ನು, ಹುರುಪುಗೊಳಿಸಲಿಕ್ಕಾಗಿ ಒಳಗೊಯ್ಯುವಂತೆ ತೋರುತ್ತಿದ್ದುವು. ಆಕಾಶದಿಂದ ನೆಲ ಮಟ್ಟದ ವರೆಗೆ ಎತ್ತೆತ್ತಲೂ, ಹಾಲೆರೆದಂತೆ ಹರಿದು ಪಸರಿಸಿದ ತಿಂಗಳ ಬೆಳಕೇ ಬೆಳಕು. ಹೌದು, ಧೃತಿ ಗೆಡದೆ ತಿಂಗಳ ವರೆಗಾದರೂ ಹೆಣಗಿದ ಕಯ್ಮಲ್ಲವೇ ಅದರದು? ಅದರಿಂದಲೇ ಎನ್ನಬಹುದು; "ತಿಂಗಳು" ಎಂದೆನ್ನಿಸಿ ಸ್ವಾತಂತ್ರ್ಯವನ್ನನುಭವಿಸುವುದು. ಗಿಡುಮರ ಬಳ್ಳಿಗಳೆಲ್ಲ ಮಂಜಿನ ಕಾರಂಜಿಯಲ್ಲಿ ಮಿಂದು ಪರಿಶುದ್ಧವಾಗಿವೆ. ಬೆಳ್ಳಿಯ ಅರಳೆಲೆ ಕಿಕ್ಕಿರಿದ ತೇರಿನಂತೆ ತಂಗಾಳಿಗೆ ಒಲೆದಾಡುವ ಎಲೆಗಳಿಂದ ಮಿರುಗುವ ಅರಳಿಯ ಮರವೊಂದು ಕಳಕಳಿಸುತ್ತಿದೆ. ಆದರೇನು? ಈ ಪರಿಶುದ್ಧತೆಯ ಆಡಂಬರವೆಲ್ಲ ಮೇಲಿಂದ ಮೇಲೆ ಮಾತ್ರವೆ; ಕಳಂಜಿ ಮಲೆಯು ಕಾಡಿನೊಳಗೆ ಮಾತ್ರ ಯಾವಾಗಲೂ

ಕಣ್ಣುಗುತ್ತಿರೂ ಕಾಣದ ಕಗ್ಗತ್ತಲೆ, ರಾಜನ ಕಟ್ಟಾಣತಿಯಿಂದ ಊರು ಬಿಟ್ಟೋಡಿದ ದಂಗೆಗಾರರಂತೆ ನೆಲೆಯಾಗಿತ್ತು. "ನಗೆ ಮೋರೆಯಲ್ಲಿ, ದಗೆ ಮನಸ್ಸಿನಲ್ಲಿ" ಎಂಬ ದುಷ್ಟರಿಗೆ ಗುರುವಾಗಿತ್ತು ಈ ಮಲೆಯೆಂದರೆ ಹೆಚ್ಚಾಗದು.

ಆಗ ಆ ಕಳಂಜಿಮಲೆಯ ತೆಂಕಣ ಪಕ್ಕದಲ್ಲಿ ಮೇಲೇರುತ್ತಿತ್ತು ವ್ಯಕ್ತಿಯೊಂದು. ಅದರ ಸೌಂದರ್ಯವನ್ನು ಬಣ್ಣಿಸಲಳವಲ್ಲ. ನವ ಬ್ರಹ್ಮರಿದ್ದಾರೆಂಬ ಪೌರಾಣಿಕರ ಹೇಳಿಕೆಯಲ್ಲಿ ಸ್ವಲ್ಪ ಅರ್ಥ ವ್ಯತ್ಯಾಸವಾಗಿದೆಯೆಂದು ತೋರುತ್ತದೆ. ನವಬ್ರಹ್ಮರಲ್ಲ; ನವಬ್ರಹ್ಮನೆಂದಾಗಿರಬಹುದು. ಲೋಕವನ್ನೆಲ್ಲ ಸೃಷ್ಟಿಸಿದವನೇ ಬ್ರಹ್ಮದೇವನು; ಇಂಥ ವ್ಯಕ್ತಿಗಳನ್ನುಂಟು ಮಾಡಿದವನೆ ಆ ನವಬ್ರಹ್ಮನು. ಅದಲ್ಲವಾದರೆ ಈ ವಿಲಕ್ಷಣ ವ್ಯಕ್ತಿಯ ನಿರ್ಮಾಣವಾಗುವುದೆ? ತುತ್ತೂರಿಯಂತೆ ಕೊರಳು; ಪಸುಂಬೆಯಂತೆ ಮೈ, ಕೊಕ್ಕರೆಯಂತೆ ಕಾಲು, ಈ ತ್ರಿಭಂಗಿಯಿಂದ ಅದೊಂದು ಮಧುರಾಕೃತಿಗೊಂಡುದು ಆ ವ್ಯಕ್ತಿ. ಇನ್ನು ಅದರ ಸಂಪೂರ್ಣಸೌಂದರ್ಯವನ್ನು ನೋಡಬೇಕಾದರೆ ಚೆನ್ನಾಗಿ ಬೆಳಗಾಗಲಿ; ತಾನಾಗಿ ತೋರುವುದು. ಆ ಕಾಡು, ಕತ್ತಲೆಯ ತವರೂರೆಂಬುದನ್ನು ಮೊದಲೆ ಹೇಳಿದೆವು. ದಾರಿಯಾದರೂ ಸರಿಯಾಗಿದೆಯೋ? ಇತ್ತ ಅಂಕಾದರೆ ಅತ್ತ ಡೊಂಕು; ಒಂದೆಡೆ ಹಾವುಗಳ ಹಾಸಾದರೆ, ಮತ್ತೊಂದೆಡೆ ಹುಲಿಗಳ ಹೊಕ್ಕು. ಕಾಲಿಟ್ಟುದು ಕುಳಿಯಾದರೆ, ಕಾಲ್ದೆಗೆಯಬೇಕಾದುದು ಕುಂಪೆ. ಆದರೂ ಆ ವ್ಯಕ್ತಿಯ ಕಣ್ಣಿಗೆ ಅದು ಕನ್ನಡಿಯಾಗಿತ್ತು. ಬೆಕ್ಕಿಗೆ ಇರುಳ್ಗಣ್ಣನೆಂದೇ ಬಿರುದಲ್ಲವೆ?

ನಸುಕು ಹರಿದು ಬೆಳಗಾಯಿತು. ಬಂಗಾರದ ಬಟ್ಟಲಿನಂತೆ ಸೂರ್ಯಬಿಂಬವು ಮೇಲೇರಿದರೆ, ಬೆಳ್ಳಿಯ ಬಟ್ಟಲಿನಂತೆ ಚಂದ್ರಬಿಂಬವು ಇಳಿಯಿತು. ಅದರಿಂದ, ತೂಗಿಕೊಡುವ ವ್ಯಾಪಾರಿಯ ಸಮದೂಕದ ತ್ರಾಸಿನಂತಾಯಿತು ಆಕಾಶಮಂಡಲ. ಅಷ್ಟರಲ್ಲಿ ಆ ವ್ಯಕ್ತಿಯೂ ಮಲೆಯ ಮೇಲಿನ ಮೈದಾನಿನ ಮಟ್ಟವನ್ನು ಮುಟ್ಟಿತು. ಎದೆಯುದ್ದಕ್ಕೆ ಬೆಳೆದ ಮುಳಿಹುಲ್ಲು, ಚಳಿಗಾಳಿಯ ತೀಟದಿಂದ ಅಡ್ಡ ತಿಟ್ಟಾಗಿ ಬಿದ್ದು ದಾರಿಯ ಹೊಲಬೆ ತೋರುತ್ತಿದ್ದಿಲ್ಲ. ಆದರೇನು? ಮೈದಾನಿನ ನಡುವಣ ಗೋಳಿ ಮರದ ಅಡಿಗೆ, ನೂಲು ಹಿಡಿದಂತೆ ಹೋಯಿತು ಆ ವ್ಯಕ್ತಿ. ಯಾರಾದರೂ ಬರುತ್ತಾರೋ ಎಂದು

ಒಂದೆರಡು ನಿಮಿಷಗಳ ವರೆಗೆ ನಿರೀಕ್ಷಿಸಿತು. ಬರುವಂತಿಲ್ಲವೆಂಬುದನ್ನರಿ ತೊಡನೆ ಆ ವ್ಯಕ್ತಿ ಭಾವನಾತರಂಗದಲ್ಲಿ ಮಗ್ನವಾಯಿತು; ಮೈಮರೆತವನ ಬಾಯಿಂದ ಮಾತುಗಳು ಹೊರಡಲಾರಂಭಿಸಿದುವು.

"ಅಯ್ಯಬ್ಬ! ಈ ವರೆಗೆ ತಲೆದುರಿಸಲಿಕ್ಕೆ ಎಡೆಯೆ ಇದ್ದಿಲ್ಲ. ಹೇಗಿರ ಬೇಕು? ಆ ಪಿಶಾಚಿ ಬಿಡುತ್ತಿದೆಯೆ? ಇನ್ನೊಬ್ಬನಾಗಿರುತಿದ್ದರೆ ಅದರಿಂದಾಗಿ ಉಳಿಗಾಲವೆ ಇರುತ್ತಿದ್ದಿಲ್ಲ. ಎಂಥೆಂಥ ಮಂತ್ರತಂತ್ರಗಳನ್ನು ಹೂಡ ಬೇಕಾಯಿತು. ಉದ್ದೇಶಸಿದ್ಧಿಯ ಬಾನಿಗೆ ಮೂರೆ ಮೊಳವೆಂದು ತೋರು ತ್ತಿತ್ತು ಹಲವು ಬಾರಿ. ಫಲವೇನು? ಆ ಪಿಶಾಚಿಯ ಗಾಳಿಯಿಂದ, ಆಗಾಗಲೆ ತೋರಿದುದೆಲ್ಲ ತೂರಿಹೋಗುತ್ತಿತ್ತು. ಹೋದಲ್ಲಿ ಬಿಡವ ಹೊಲೆಯರ ದೆವ್ವವದು. ಇರಲಿ; ತಲೆಯ ಹೊರೆ ಹೆಗಲಿಗೆ ಇಳಿಯಿತಷ್ಟೆ. ಆದರೆ, ಈ ವರೆಗಣ ಹೆಣಗಾಟವನ್ನೆಣಿಸಿದರೆ ನನಗೆ ನನ್ನಲ್ಲೆ ಸಂದೇಹ ವಾಗುತ್ತಿದೆ. ಆ ಭೀಮಯ್ಯನೆಂದರೆ ಹೆಬ್ಬುಲಿಯಲ್ಲವೆ? ಅವನ ಮುಖ ವನ್ನು ನೋಡಿದರೆ, ಮಾತನ್ನು ಕೇಳಿದರೆ ನನ್ನ ಎದೆಯೆ ನಡುಗುತ್ತಿತ್ತು. ಹೇಗಾದರೂ ಗೂಡಿನಲ್ಲಿ ಬಿತ್ತು. ರಾಮಯ್ಯನ ಕೈಫೇತಿಗಾದ ತೀರ್ಪಿ ನಂತೆ ಭೀಮಯ್ಯನ ಆಸ್ತಿ ಏಲಮ್ಮೂ ಆಯಿತು. ಇನ್ನೊಂದು ತಿಂಗಳೊಳಗೆ ಅವನು ಹಣಗಟ್ಟುವುದೆಂಬ ಮಾತು ಹಾಗಿರಲಿ. ಹಸೆಹಿಡಿದು ಮಲಗಿ ದವನು ಹಣಗಟ್ಟುವುದಲ್ಲ; ಹೆಣಗಟ್ಟುವುದು. ಆದರೆ ಅವನ ಕಣ್ಣು ಬೇಗನೆ ಮುಚ್ಚಲೂಬಾರದು; ತೆರೆಯಲೂಬಾರದು. ಮುಚ್ಚಿದರೆ ದಿಕ್ಕಿ ಲ್ಲದ ಅಕ್ಕಮಕ್ಕಳ ಸಂಕಷ್ಟವನ್ನು ಸಹಿಸಲಾರದೆ ಶಿವರಾಯನ ಮನಸ್ಸು ತಿರುಗಬಹುದು; ತೆರೆದರೆ ಆ ಭೀಮಯ್ಯನು ಏನಾದರೂ ಮಾಡಿ ಹಣ ವನ್ನು ಕಟ್ಟಿಬಿಡಲೂ ಬಹುದು. ಅದರಿಂದ ಅವನು ಕತ್ತರಿಯ ಇಲಿ ಯಾಗಿರಬೇಕು ಮಲಗಿದಲ್ಲೆ. ಅದಕ್ಕೂ ಪ್ರಯತ್ನವನ್ನೇನೋ ಮಾಡಿ ದ್ದೇನೆ. ಆದರೆ ಆ ದಡ್ಡ ವೈದ್ಯನೇನು ಮಾಡಿಬಿಡುತ್ತಾನೆಯೊ? ಇರಲಿ; ಅಷ್ಟಾಗುವಾಗ ಇಳಿದೀತು ಆ ದೋಷಿಯ ತಲೆಗೇರಿದ ಪಿತ್ತ. ನಾನವ ಳನ್ನು ಬಯ್ದೆನೆ, ಭಂಗಪಡಿಸಿದೆನೆ? ಬಹಳ ಗುಟ್ಟಾಗಿ ಆ ಒಂದು ಮಾತನ್ನು ಕೇಳಿಬಿಟ್ಟೆ. ಅದಕ್ಕೆ ಅಷ್ಟೊಂದು ಬಯ್ಯಬೇಕೆ? ಮನಸ್ಸಿಲ್ಲವಾದರೆ ಸುಮ್ಮನೆ ಹೋಗುತ್ತಿದ್ದೆನಲ್ಲ. ಹೋಗಲಿ. ಏನು ಮೈಸಾಲದ ಹಣಕ್ಕೆ

ವಾರಾಂಟು ತೆಗೆದು ಪೇದೆಯನ್ನು ಕಳುಹಿದ್ದೇನಲ್ಲ. ಆ ಸಿದ್ದಯ್ಯ ಇನ್ನೂ ಬರಲಿಲ್ಲವೇಕೆ?'' ಎಂದೆಣಿಸುವಾಗ ''ಸ್ವಾಮಿ'' ಎಂಬ ಮಾತು ಕೇಳಿತು. ಕಂದೆರೆದು ನೋಡಿದನು. ಅವನೆ ಇವನು. ''ಇದೇನು ಸಿದ್ದಯ್ಯ, ತಡವಾಯಿತು.'' ಎಂದು ಕೇಳಿದನು.

**ಸಿದ್ದ**:—ಹೋದ ಮೇಲಲ್ಲವೇ ನಾಗಪ್ಪಯ್ಯನವರೆ,? ಕೆಲವು ಬಾರಿ ತಡವೂ ಆಗಿಬಿಡುತ್ತದೆ.

**ನಾಗ**:—ಆಗಲಿ, ಇದೇನು ಒಬ್ಬನೆ ಬಂದೆ?

**ಸಿದ್ದ**:—ಮತ್ತೇನು ಮಾಡುವುದು ಸ್ವಾಮಿ?

**ನಾಗ**:—ಏನು ಆಸಾಮಿ ಸಿಕ್ಕಲಿಲ್ಲವೆ?

**ಸಿದ್ದ**:—ಇಲ್ಲ.

**ನಾಗ**:—ಹುಂ, ಇರಲಿ; ಎಷ್ಟು ಹೊತ್ತಿಗೆ ಕಾಡೂರಿಗೆ ಮುಟ್ಟಿದಿರಿ?

**ಸಿದ್ದ**:—ಸುಮಾರು ಬೆಳಗಾತ ಐದು ಗಂಟೆಗೇ ಮುಟ್ಟಿದ್ದೆವು.

**ನಾಗ**:—ವಾರಾಂಟಿನ ಗುಟ್ಟು ಬಯಲಾಗಿದೆಯೆಂದು ತೋರುತ್ತಿದೆ.

**ಸಿದ್ದ**:—ಬಹುಶಃ ಹಾಗೆಯೆ ಆಗಿರಬೇಕು ಸ್ವಾಮಿ.

**ನಾಗ**:—ಅದು ಹೇಗೆ ಗೊತ್ತಾಯಿತು?

**ಸಿದ್ದ**:—ಒಳಗಿನ ಮಾತುಕತೆಗಳಿಂದ.

**ನಾಗ**:—ಏನೇನು ಮಾತಾಡುತ್ತಿದ್ದರು?

**ಸಿದ್ದ**:—ಒಂದೂ ಸ್ಪಷ್ಟವಾಗುತ್ತಿದ್ದಿಲ್ಲ. ಅಳುವಿನೆಡೆಯಲ್ಲಿ, ವಾರಾಂಟಿನ ಹೊಲಬು ತೋರುತ್ತಿತ್ತು.

**ನಾಗ**:—ಅಳುತ್ತಿದ್ದುದಾದರೂ ಯಾರೆಂದು ಗೊತ್ತಾಯಿತೆ?

**ಸಿದ್ದ**:—ಹೆಂಗುಸಿನ ಸ್ವರದಿಂದಾಗಿ ಭೀಮಯ್ಯನವರ ಹೆಂಡತಿಯಾಗಿರಬೇಕೆಂದು ಭಾವಿಸಿದೆ.

**ನಾಗ**:—ಅಳುವಾಗ ಹೊರಟ ಮಾತುಗಳ ಕಡೆ ಕುಡಿಯೊಂದೂ ಗೊತ್ತಾಗಿಲ್ಲವೆ?

**ಸಿದ್ದ:**—ಸರಿಯಾಗಿ ಗೊತ್ತಾಗಲಿಲ್ಲ. ಒಮ್ಮೆ ಮಾತ್ರ "ಆ ನಾಗ ನಲ್ಲಿ ಸುಮ್ಮನೆ ಹಗೆ ಗಟ್ಟಿ" ಎಂದು ಕೇಳಿದಂತಾಯಿತು.

**ನಾಗ:**—ಆಹಾ! ಏನು ಇನ್ನೂ "ಆ ನಾಗ" ಎನ್ನುತ್ತಾಳೆಯೊ? ಹೌದು. ನಾಗನ ಹಗೆಯ ಬೆಲೆ ಈಗಲಾದರೂ ಗೊತ್ತಾಯಿತೇನು? ಇರಲಿ. ಮಾತುಗಳು ಸ್ಪಷ್ಟವಾಗದಿದ್ದರೆ, ಸ್ವರದಿಂದಾದರೂ ಯಾರೆಂದು ಗೊತ್ತಾಗಲಿಲ್ಲವೆ?

**ಸಿದ್ದ:**—ಒಂದು ಸ್ವರವು ಭೀಮಯ್ಯನವರದೇ. ರೋಗದ ಅಶಕ್ತಿ ಯಿಂದ ಕೊರಗಿ ಹೋದರೂ, ನುಡಿಗಟ್ಟುಗಳಿಂದ ಅವರದೆ ಮಾತೆಂಬು ದನ್ನು ಊಹಿಸಬಹುದಾಗಿತ್ತು.

**ನಾಗ:**—ಹಾಗಾದರೆ ಭೀಮಯ್ಯನು ಒಳಗೇ ಇದ್ದನೆಂದಾ ಯಿತು!

**ಸಿದ್ದ:**—ಸಂದೇಹವೇನು? ಒಳಗೇ ಇದ್ದರು.

**ನಾಗ:**—ಆಸಾಮಿ ಸಿಕ್ಕಲಿಲ್ಲವೆಂದು ಹೇಳಿದೆಯಲ್ಲ!

**ಸಿದ್ದ**—ಹೌದು; ಹೇಳಿದೆ.

**ನಾಗ:**—ನಿನ್ನ ಮಾತಿಗೆ ಅರ್ಥವೇ ಆಗುವುದಿಲ್ಲವಲ್ಲ. ಅಸ್ವಸ್ಥ ವಾಗಿದ್ದನು; ಒಳಗೇ ಇದ್ದನು; ಎಂದು ನೀನೇ ಹೇಳುತ್ತಿ. ಆ ಮೇಲೆ ಸಿಕ್ಕಲಿಲ್ಲವೆಂದರೆ? ಪಠೇಲರು ತಿಳಿಸಿದೊಡನೆ ಬರುತ್ತೇನೆಂದಿದ್ದಾರಷ್ಟೆ. ಬರಿಸಿ ಒಳಹೊಕ್ಕು ಹಿಡಿಯಬೇಕಿತ್ತಲ್ಲವೆ?

**ಸಿದ್ದ:**—ಭೀಮಯ್ಯನವರು ಹಾಗೆ ಮಾಯವಾಗುವಾಗ ಪಠೇಲ ರಲ್ಲ; ಯಾರು ಬಂದರೂ ಮಾಡುವುದೇನು?

**ನಾಗ:**—ನಮ್ಮ ಆಳುಗಳೆಲ್ಲ ಎಲ್ಲಿದ್ದರು?

**ಸಿದ್ದ:**—ಮನೆಯ ಸುತ್ತಮುತ್ತಲೂ ನಿಂತಿದ್ದರು.

**ನಾಗ:**—ಹಾಗೆ ಜಾಗ್ರತರಾಗಿದ್ದ ನಿಮಗೆಲ್ಲ ಕಾಣದಂತೆ ಮಾಯ ವಾದನೆ?

**ಸಿದ್ದ:**—ಹೌದು ಸ್ವಾಮಿ. ಮಾಯಕವೆಂದರೆ ಮಯಾಸುರನದ ಕ್ಕಿಂತಲೂ ಒಂದು ತೂಕ ಹೆಚ್ಚಿನದು.

**ನಾಗ:**—ನಿಮಗಾರಿಗೂ ಕಾಣದಂತೆ ಓಡಿಹೋದನೋ, ನಿಮ್ಮೆದುರಿನಲ್ಲೆ ಪರಾರಿಯಾದನೊ?

**ಸಿದ್ದ:**—ಆರಿಗೂ ಕಾಣದಂತೆ.

**ನಾಗ:**—ಸಿದ್ದಯ್ಯ, ನಿನ್ನ ತಮಾಷೆಯನ್ನೆಲ್ಲ ಬದಿಗಿಟ್ಟು ಮಾತಾಡು. ಭೀಮಯ್ಯನು ಕ್ಷಯರೋಗದಿಂದ ಮಲಗಿದಲ್ಲೆ ಆಗಿದ್ದಾನೆ. ಒಳಗೇ ಇದ್ದನೆಂದು ನೀನೂ ಒಪ್ಪುತ್ತಿ. ಅಂಥವನು ತಲೆದಪ್ಪಿಸಿ ಬಿಟ್ಟನೆಂದು ಮಕ್ಕಳನ್ನು ಮಂಕಾಡಿಸುವಂತೆ ಆಡುತ್ತಿಯಲ್ಲ.

**ಸಿದ್ದ:**—(ಸ್ವಲ್ಪ ನಕ್ಕು) ಇಲ್ಲ ಸ್ವಾಮಿ, ತಲೆಯನ್ನು ತಪ್ಪಿಸಲಿಲ್ಲ. ಒಳಗಿಂದೊಳಗೇ ಮಾಯವಾದರೆಂದು ನಾನು ಹೇಳಿದುದು.

**ನಾಗ:**—(ಕೋಪದಿಂದ) ಗೊತ್ತಾಯಿತೊ ಸಿದ್ದಯ್ಯ. ಭೀಮಯ್ಯ ಸ್ವಲ್ಪ ಕೈ ಬೆಚ್ಚಗೆ ಮಾಡಿದ್ದಾನೆಯಲ್ಲವೆ?

**ಸಿದ್ದ:**—ಈಗ ಅವರಿರುವಲ್ಲಿಗೆ ಹೋದರೆ ಕೈಮಾತ್ರವೆಂದೇನು? ಇಡೀ ಮೈಯ್ಯೆ ಬೆಚ್ಚಗಾದೀತು.

**ನಾಗ:**—ನಿನ್ನ ಪುರಾಣವನ್ನೆಲ್ಲ ಕಟ್ಟಿಡು. ನಮ್ಮ ಆಳುಗಳೆಲ್ಲಿದ್ದಾರೆ?

**ಸಿದ್ದ:**—ಹೊಸ ಮನೆಯಲ್ಲಿದ್ದಾರೆ.

**ನಾಗ:**—ಮಾಯವಾದ ಭೀಮಯ್ಯನನ್ನು ಕಾಯುತ್ತಾ ಇದ್ದಾರೇನು?

**ಸಿದ್ದ:**—ಇನ್ನು ಕಾಯುವುದೇಕೆ? ಈಗ ಕಾಯಿಸಿಯೂ ಮುಗಿದಿರಬಹುದು.

**ನಾಗ:**—ಯಾವುದನ್ನು ಕಾಯಿಸಿ?

**ಸಿದ್ದ:**—ಭೀಮಯ್ಯನವರ ಹೆಣವನ್ನು.

**ನಾಗ:**—ಏನು ಭೀಮಯ್ಯ ಸತ್ತನೆ?

**ಸಿದ್ದ:**—ಹೌದು ಸ್ವಾಮಿ.

**ನಾಗ:**—ಈ ಮೊದಲೇ ಹೇಳಿದೆಯಲ್ಲ. ಭೀಮಯ್ಯ ಒಳಗಿಂದೊಳಗೆ ಮಾಯವಾದನೆಂದು?

**ಸಿದ್ದ:**—ಸಾಯುವುದೆಂದರೆ ಒಳಗಿಂದೊಳಗೆ ಮಾಯವಾಗುವುದಲ್ಲವೆ?

**ನಾಗ:**—ಹುಂ, ನೀನು ಮಾತುಬಲ್ಲವ; ನನಗೆ ಗೊತ್ತಿದೆ. ಆದರೆ ಇದಕ್ಕೆ ಈ ದ್ರಾವಿಡ ಪ್ರಾಣಾಯಾಮವೇಕೆ? ಭೀಮಯ್ಯ ಸತ್ತನೆಂದು ಹೇಳಿ ಬಿಡಬಹುದಿತ್ತಲ್ಲ.

**ಸಿದ್ದ:**—ಹೇಳಬಹುದಿತ್ತು. ಆದರೆ ನೀವು ಒಂದರ ಮೇಲೊಂದರಂತೆ ಪ್ರಶ್ನೆಯನ್ನು ಕೇಳುತ್ತಾ ಬಂದಿರಿ. ಅದಕ್ಕೆಲ್ಲ ಸರಿಯಾಗಿ ಉತ್ತರವನ್ನು ಹೇಳುತ್ತಾ ಬರಬೇಕಲ್ಲವೆ?

**ನಾಗ:**—ಹಾಗೆ ಉತ್ತರಗೊಡಲಿಕ್ಕೆ ಇದು ಕೋರ್ಟೇನು?

**ಸಿದ್ದ:**—ಅಲ್ಲ; ಆದರೂ ಅದೆ ಅಭ್ಯಾಸವಲ್ಲವೆ ನಮಗೆ?

**ನಾಗ:**—ಅದಿರಲಿ; ಭೀಮಯ್ಯ ಸತ್ತು ಹೋದನೆಂದು ಮನೆಯವರು ಹೇಳಿದುದು ಮಾತ್ರವೋ ನೀನೆ ಕಂಡಿದ್ದೀಯೊ?

**ಸಿದ್ದ:**—ಗಿಳಿಬಾಗಿಲೆಡೆಯಲ್ಲಿ ಕಂಡಿದ್ದೇನೆ ಸ್ವಾಮಿ, ಮುಸುಕು ಹಾಕಿ ಮಲಗಿಸಿದುದನ್ನು.

**ನಾಗ:**—ಹೂಂ, ಬರಲಿ; ಅದು ಶವವೆಂದು ಹೇಗೆ ಗೊತ್ತಾಯಿತು?

**ಸಿದ್ದ:**—ತಲೆಯ ಮೇಲ್ಗಡೆ ಕಡಿಗಾಯಿಯ ದೀಪವೆರಡು ಉರಿಯುತ್ತಿತ್ತು ಸ್ವಾಮಿ.

**ನಾಗ:**—ಅಷ್ಟರಿಂದಲೆ ಅವನು ಯಮಲೋಕವನ್ನು ಮುಟ್ಟಿದನೆಂದು ಭಾವಿಸಿದೆಯೊ?

**ಸಿದ್ದ:**—ಹೌದು. ಸತ್ತಮೇಲಲ್ಲವೆ ಹಾಗೆ ದೀಪಗತ್ತಿಸುವುದು?

**ನಾಗ:**—ಹುಂ, ಅಲ್ಲಿದೆ ಗುಟ್ಟು. ನಿನ್ನಂಥವನ ಕಿವಿಗೆ ಕರಟಗಟ್ಟುವುದೂ ಆ ದೋಪಿಗೊಂದು ದೊಡ್ಡ ಕೆಲಸವೆ?

**ಸಿದ್ದ:**—ಏನು ಸ್ವಾಮಿ, ಹೀಗೆಲ್ಲ ಹೇಳುತ್ತೀರಿ?

**ನಾಗ:**—ಹೇಳುವುದಲ್ಲ; ನೀನು ಮಾಡಿದುದು ಹಾಗೆ. ಆ ತೆಂಗಿನ ಕಾಯನ್ನು ನಿನಗಾದರೂ ಕೊಟ್ಟು "ದಮ್ಮಯ್ಯ" ಎನ್ನಲಿಲ್ಲ ಆಕೆ. ಅದನ್ನೂ ಉಳಿಸಿಕೊಂಡು ಬರಿಗಯ್ಯಲ್ಲಿ ಮೊಳಹಾಕಿದಳು.

**ಸಿದ್ದ:**—ಗಂಡ ತೀರಿಹೋದರೆಂದು ಹಾಗೆ ನಟಿಸಿದುದರಿಂದ ಅವರಿಗೆ ಒದಗಬಹುದಾದ ಲಾಭವಾದರೂ ಏನು?

**ನಾಗ:**—ಲಾಭವೆ? ನೀನು ತಲೆಗೆ ಕಯ್ಯಿಟ್ಟುಕೊಂಡು, ಬಂದ ಹಾಗೆ ಹೋಗುವುದೇ ಲಾಭ. ಈ ಹೊತ್ತು ಕಳೆದುದು ಅವಳ ದಿನ.

**ಸಿದ್ದ:**—ಹಾಗಾದರೆ ನಾನೇನು ಮಾಡಬೇಕಿತ್ತೆಂದು ನೀವು ಹೇಳುವುದು?

**ನಾಗ:**—ಮತ್ತೇನು? ಉಸಿರಾಡುತ್ತಿದೆಯೋ ಇಲ್ಲವೋ ಎಂದು ಸರಿಯಾಗಿ ನೋಡಬೇಕಿತ್ತು.

**ಸಿದ್ದ:**—ಈ ಸಿದ್ದಯ್ಯನು ಬ್ರಾಹ್ಮಣಶವದ ಮುಸುಕನ್ನು ತೆಗೆದು ನೋಡಬೇಕಿತ್ತೆ?

**ನಾಗ:**—ಯಾವ ಶವವಾದರೇನು? ನೀನು ಕೋರ್ಟಿನ ಹುಕುಮಿನ ಮೇಲೆ ಹೋದವನಲ್ಲವೆ?

**ಸಿದ್ದ:**—ಹಾಗೆಲ್ಲ ಮಾಡಿದರೆ ಅವೆ ಕೋರ್ಟಿನ ಹುಕುಮಿನಂತೆ ಜೈಲಿಗೆ ಹೋಗಬೇಕಾಗುವುದೂ ನಾನೇ.

**ನಾಗ:**—ನೀನೀಗ "ಭೀಮಯ್ಯ ತೀರಿಹೋದ"ನೆಂದು ರಿಪೋರ್ಟು ಬರೆಯುತ್ತಿ. ಅದೇ ಭೀಮಯ್ಯನು ಜೀವಂತನಾಗಿದ್ದಾನೆಂದು ಭಾವಿಸುವ. ಹಾಗಾದರೂ ನಿನ್ನ ಅವಸ್ಥೆ ಕುಂತೀ ಮಕ್ಕಳದೆ ಅಲ್ಲವೆ?

**ಸಿದ್ದ:**—ಭೀಮಯ್ಯನವರು ಜೀವಂತರಾಗಿದ್ದಾರೆಂದು ಋಜುಪಡಿಸುವ ಆ ಮಹನೀಯರಾರು? ಮತ್ತು ಹೇಗೆ?

**ನಾಗ:**—ಯಾರೋ ಹೇಗೋ, ಎಲ್ಲ ಮತ್ತೆ ಗೊತ್ತಾದೀತು. ಅದೆಲ್ಲ ಇರಲಿ. ಮರೆತುಹೋಯಿತು; ನಮ್ಮ ಆಳುಗಳು ಅಲ್ಲಿ ಯಾಕೆ ಕುಳಿತಿದ್ದಾರೆ?

**ಸಿದ್ದ:**—ಕಟ್ಟಿಗೆ ಮೊದಲಾದುವನ್ನು ತಯಾರಿಸುತ್ತಿದ್ದರು. ಈಗ ಬರಲಿಕ್ಕೂ ಆಯಿತು.

**ನಾಗ:**—(ಕೋಪದಿಂದ) ಏನು ನನ್ನ ಆಳುಗಳನ್ನು ಆ ಕೆಲಸಕ್ಕೆ ಒಪ್ಪಿಸಿಬಂದೆಯೊ?

**ಸಿದ್ದ:**—ಏನು ನನ್ನ ಆಳುಗಳೆನ್ನುತ್ತೀರಿ? ಅವರು ರಾಮಯ್ಯನವರ ಒಕ್ಕಲುಗಳಲ್ಲವೆ?

**ನಾಗ:**—ಆಗಲಿ, ರಾಮಯ್ಯನವರ ಒಕ್ಕಲುಗಳ ಆಚಾರವಿಚಾರ ವೆಲ್ಲ ನಿನ್ನ ಕಯ್ಯೊಳಗಿನದೊ?

**ಸಿದ್ದ:**—ಆ ಹಕ್ಕು ನಮಗಿಬ್ಬರಿಗೂ ಸಮಾನವೆಂದು ನನಗೆ ಗೊತ್ತಿವೆ ಸ್ವಾಮಿ.

**ನಾಗ:**—ನಿನ್ನ ಮಾತಿನ ಕೊಂಕೆಲ್ಲ ನನಗೆ ಗೊತ್ತಾಗುವುದಿಲ್ಲ ವೆಂದೆಣಿಸಬೇಡ. ಆದರೆ ಕಳುಹಿದವನು ನಾನಲ್ಲವೆ?

**ಸಿದ್ದ:**—ಮಾತಿನ ಹುರುಳನ್ನರಿಯುಬಲ್ಲವರಾದ ಕಾರಣವೆ ಹಾಗೆ ಮಾತಾಡಿದೆನು. ಘೋರ್ಕಲ್ಲಾದರೆ ಸುಮ್ಮನೆ ನೀರೆರೆಯುತ್ತಿದ್ದೆನೆ? ಆಳು ಗಳನ್ನು ಕಳುಹಿದುದು ನೀವಾದರೆ ನಿಲ್ಲಿಸಬಲ್ಲವರು ನಿಲ್ಲಿಸಿಕೊಂಡರು. ನಾನೇನು ಮಾಡಲಿ?

**ನಾಗ:**—ಅದಾರು ನಿಲ್ಲಿಸಬಲ್ಲವರೆಂದರೆ?

**ಸಿದ್ದ:**—ಶಿವರಾಯರು.

**ನಾಗ:**—(ಆಶ್ಚರ್ಯದಿಂದ) ಯಾವ ಶಿವರಾಯ?

**ಸಿದ್ದ:**—ಅವರ ಗುರುತೂ ಮರೆತುಹೋಯಿತೆ? ಭೀಮಯ್ಯನವರ ಹೆಂಡತಿಯ ತಮ್ಮ. ನಿಮ್ಮ ರಾಮಯ್ಯನವರ ತಂಗಿಯ ಗಂಡ. ಈಗ ಲಾದರೂ ಗೊತ್ತಾಯಿತೆ?

ಶಿವರಾಯನು ಭೀಮಯ್ಯನಲ್ಲಿದ್ದಾನೆಂಬುದನ್ನು ಕೇಳಿದೊಡನೆ ನಾಗಪ್ಪಯ್ಯನ ತಲೆಗೆ ಸಿಡಿಲೇ ಬಡಿದಂತಾಯಿತು. ಜಲಮಟ್ಟದಿಂದೇರಿ ನೆಲೆಗೊಂಡ ಕಗ್ಗಲ್ಲ ಕಟ್ಟೋಣವಾದರೂ ಭೂಕಂಪಕ್ಕಿದಿರಾಗುವುದೆ?

ನಿಮಿಷದೊಳಗೆ ಅಸ್ತವ್ಯಸ್ತವಾಗುವುದು. ಹಾಗೆಂದ ಮೇಲೆ ನಾಗಪ್ಪಯ್ಯನ ಮಾನಸಿಕವಾದ ಅರಮನೆ ಈ ಭೂಕಂಪಕ್ಕೆ ಕುಗ್ಗದಿರುವುದೆಂತು? ವಿಶ್ವ ಪ್ರಯತ್ನವನ್ನು ಮಾಡಿ ಭೀಮಯ್ಯನಲ್ಲಿ ಶಿವರಾಯನಿಗೆ ಬೇಸರವನ್ನು ನೆಲೆಗೊಳಿಸಿದುದರಿಂದಲೆ ತನ್ನ ಸೂಜಿ ಇಷ್ಟರ ವರೆಗೆ ಹೊಲಿದುದು. ಆ ಶಿವರಾಯನೆ ಈಗ ಭೀಮಯ್ಯನಲ್ಲಿದ್ದಾನೆ ಎಂದಾದ ಮೇಲೆ ಎಲ್ಲ ಬಣ್ಣಕ್ಕೂ ಮಸಿ ಬಳಿದಂತಾಗಲಿಲ್ಲವೆ? ಇಂಥ ತೊಡಕಿನ ವಿಚಾರವು ಬಂದೊಡನೆ ಆಲೋಚನಾಸಮಾಧಿಯಲ್ಲಿ ಮಗ್ನನಾಗುವುದು ಅವನ ಸ್ವಭಾವ. ಆ ಸಮಯದಲ್ಲಿ ಬಾಹ್ಯವಿಷಯಗಳೆಲ್ಲ ಅವನ ಮನಸ್ಸಿಗೆ ಮರೆಯಾಗಿ ಗೂಢವಾದ ಅಂತರ್ಗತಗಳು ಬಾಯಿಂದ ಹೊರಸೂಸಿ ಮೊಸಲಾದ ಗುಟ್ಟುಗಳು ರಟ್ಟಾಗಿ ಹೋದ ದೃಷ್ಟಾಂತಗಳೆಷ್ಟೋ ಉಂಟು. ಅದರಿಂದ ನಾಗಪ್ಪಯ್ಯನು ಇನ್ನೊಬ್ಬರಿದಿರಿನಲ್ಲಿ ಅಂಥ ಸಮಾಧಿಗೆ ಎಡೆ ಗೊಡುತ್ತಿದ್ದಿಲ್ಲ. ಆದರೇನು? ಹಾಗಿಲ್ಲವಾದರೆ ಯಾವ ಎಣಿಕೆಯ ನೆಲೆ ಗಟ್ಟೂ ಇಲ್ಲದೆ ಕುರುಡನಂತಾಗುತ್ತಿದ್ದನು. ಆ ಅವಸ್ಥೆ ಒದಗಿತ್ತು ನಾಗಪ್ಪಯ್ಯನಿಗೆ; ಹೊತ್ತೇರುತ್ತಾ ಬಂದುದರಿಂದ ಹೊರಡುವ ಎಣಿಕೆ ಯಾಗಿತ್ತು ಸಿದ್ದಯ್ಯನಿಗೆ.

"ಸ್ವಾಮಿ, ಹೊತ್ತೇರಿತು" ಎಂದನು ಪೇದೆ. "ಹೌದು, ಇನ್ನೊಮ್ಮೆ ಕಾಣುವ" ಎಂದನು ನಾಗಪ್ಪಯ್ಯ. "ಅದೇನು ಸ್ವಾಮಿ, ಮಾತೆತ್ತುವ ಮೊದಲೆ "ಇನ್ನೊಮ್ಮೆ ಕಾಣುವ" ಎನ್ನುತ್ತೀರಿ?" ಎಂದು ಪ್ರಶ್ನೆ. "ಬೇರೇನು ಮಾಡುವುದು? ನಿನಗೂ ದೂರವಿದೆ" ಎಂದು ಉತ್ತರ. "ದೂರವಿದೆ ಯೆಂಬುದು ನನಗೆ ಗೊತ್ತಿದೆ. ಹೋಗಬೇಕಾದುದು ನನ್ನ ಕೆಲಸವಲ್ಲವೆ? ನಿಮ್ಮ ಕೆಲಸವನ್ನು ಮಾತ್ರ ಬೇಗನೆ ಮಾಡಿಬಿಡಿರಿ" ಇದು ಮುಮ್ಮಾತು. "ಹೇಳದೆ ಕೇಳದೆ, ನಾನು ಕಳುಹಿದ ಆಳುಗಳನ್ನೂ ಅಲ್ಲಿ ಬಿಟ್ಟು ಬರಿ ಗಯ್ಯಲ್ಲಿ ಬಂದು ಇನ್ನೂ "ನಿಮ್ಮ ಕೆಲಸ"ವೆನ್ನುತ್ತೀಯಾ? ಈ ಬೇಳೆ ಇಲ್ಲಿ ಬೇಯಲಿಕ್ಕಿಲ್ಲ. "ಬಂದ ದಾರಿಗೆ ಸುಂಕವಿಲ್ಲ" ಎಂಬುದೆ ನನ್ನ ಕೆಲಸ" ಇದು ಹಿಮ್ಮಾತು. "ಆಳುಗಳನ್ನು ಬಿಟ್ಟುದೇಕೆಂದು ಮೊದಲೆ ಹೇಳಿದ್ದೇನೆ. ನೀವು ಕೊಡುತ್ತೇನೆಂದುದನ್ನು ಕೊಟ್ಟುಬಿಡಿರಿ" ಇದು ಮುನ್ನುಡಿ. "ಕಳುಹಿದ ಆಳುಗಳನ್ನು ನನ್ನಲ್ಲಿ ಕೇಳದೆ ಬಿಟ್ಟು ಬರುವಾಗ

ದುಡ್ಡನ್ನೂ ಆ ನಿಲ್ಲಿಸಿಕೊಂಡವನಲ್ಲಿ ಕೇಳಬೇಕಿತ್ತು. ಏನು ಪುತ್ತೂರ ಪೇದೆಗಳಿಗೆಲ್ಲ ದಾನದಕ್ಷಿಣೆಗೊಡುತ್ತೇನೆಂದು ಹರಕೆ ಹೊತ್ತುಕೊಂಡಿದ್ದೇನೆಯೆ?'' ಇದು ಹಿನ್ನುಡಿ. ''ಹರಕೆ ಹೊತ್ತುಕೊಳ್ಳಲಿಕ್ಕೆ ನಾನು ದೈವವಲ್ಲ, ದೇವರಲ್ಲ. ಪುತ್ತೂರ ಪೇದೆಗಳಿಗೆಲ್ಲ ಕೊಡಬೇಕೆಂದು ನಾನು ಹೇಳಲೂ ಇಲ್ಲ. ನನಗೆ ಕೊಡುತ್ತೇನೆಂದುದನ್ನು ಮಾತ್ರ ಕೇಳಿದುದು'' ಎಂಬುದು ಪೇದೆಯ ಮಾತಾದರೆ ''ಏನು ನಾನೆಂದುದು ಮಾತ್ರ ಶಿಲಾಶಾಸನ; ನೀನು ಹೇಳಿದುದು ನೀರಲ್ಲಿ ಬರೆದ ಬರಹವೆ?'' ಎಂಬುದು ನಾಗಪ್ಪಯ್ಯನ ಮಾತು. ''ಯಾಕೆ? ಹೇಳಿದಂತೆ ವಾರಾಂಟು ತೆಗೆದುಕೊಂಡು ಹೋದೆನಲ್ಲವೆ?'' ಎಂಬ ಪ್ರಶ್ನೆಗೆ ''ಯಾವ ಪೇದೆಯಾದರೂ ಹೋಗುವುದು ಹೋಗಲೇಬೇಕು; ಹೇಳಿದಂತೆ ಭೀಮಯ್ಯನನ್ನು ಹಿಡಿದು ತಾರದೆ ಷೋಡಶದವರಂತೆ ಕೈನೀಡುತ್ತಿಯಲ್ಲ'' ಎಂದು ಉತ್ತರ. ''ಸತ್ತುಹೋದವರನ್ನು ತರುವುದೆಂದರೇನು ಸ್ವಾಮಿ?'' ಎಂಬ ಕೇಳಿಕೆಗೆ ''ವಾರಾಂಟು ಹೊರಟು ಮೂರು ನಾಲ್ಕು ದಿನವಾಯಿತಲ್ಲ. ಈ ವರೆಗೂ ನಿದ್ದೆಮಾಡಿದ ನಿನಗೆ ಕೋಳಿ ಕೂಗುವಾಗ ಮಾತ್ರವೇ ಎಚ್ಚರವಾಯಿತಲ್ಲವೆ?'' ಎಂಬುದು ಹೇಳಿಕೆ. ''ನಿನ್ನೆಯೆ ಹೇಳಿದೆನಲ್ಲ ಮನೆಯಲ್ಲಿ ಅಸೌಖ್ಯವಾಗಿತ್ತೆಂದು? ಕೂಡಲೆ ಬರುತ್ತಿದ್ದರೂ ಆಗಬಹುದಾದ ಫಲವೇನು? ಜೈಲಿನಲ್ಲಿ ಅವರ ಪ್ರಾಣ ಹೋಗುತ್ತಿತ್ತು'' ಎಂದನು ಸಿದ್ದಯ್ಯ. ''ಆ ಫಲವನ್ನು ನೀನೇನು ಬಲ್ಲೆ. ಜೈಲಿನಲ್ಲಿ ಕಣ್ಮುಚ್ಚುತ್ತಿದ್ದರೆ ಎರಡಷ್ಟು ಕೊಡುತ್ತಿದ್ದೆ'' ಎಂದನು ನಾಗಪ್ಪಯ್ಯ.

ಮಾತಿಗೆ ಮಾತಾಗಿ ಮಾತು ಮಸೆಯಿತು. ಶಾಂತನಾಗಿದ್ದುದರಿಂದ ಸಿದ್ದಯ್ಯನ ಮಾತು ಹರಿತವಾಗಿ ಹರಿಯುತ್ತಿತ್ತು. ಕೋಪವೇರುತ್ತಿದ್ದುದರಿಂದ ನಾಗಪ್ಪಯ್ಯನದು ಮೊಂಡಾಗುತ್ತ ಬಂತು.

**ಸಿದ್ದ:**—(ನಕ್ಕು) ಹೌದು ಸ್ವಾಮಿ, ಹೌದು. ನಾನು ಮೊದಲಿನಿಂದಲೂ ನಿಮ್ಮನ್ನು ಬಲ್ಲವನಲ್ಲವೆ? ಜೈಲಿನಲ್ಲಿ ಸಾಯುವಂತೆ ಮಾಡುತ್ತಿದ್ದರೆ ಮಾತ್ರವೆ ನೀವು ಭೀಮಯ್ಯನವರಲ್ಲಿ ಉಂಡ ಉಪ್ಪಿನ ಋಣವಾದರೂ ಸಲ್ಲುತ್ತಿತ್ತು. ಅದು ನನ್ನಿಂದ ತಪ್ಪಿಹೋಯಿತು. ಕ್ಷಮಿಸಬೇಕು ಸ್ವಾಮಿ.

**ನಾಗ:**—(ಕೋಪದಿಂದ) ಇದೋ, ಆ ಹಿಂದಿನ ನಮ್ಮ ರಿಕಾರ್ಡು ಗಳಿಗೆಲ್ಲ ಕೈಹಾಕಬೇಡ; ಜಾಗ್ರತೆ.

**ಸಿದ್ದ:**—ನಿಮ್ಮಂಥ ಹಲವರ ಬಾಯಲ್ಲಿ ಹೊಕ್ಕು ಮೂಗಿನಲ್ಲಿ ಹೊರಟವನು ಸ್ವಾಮಿ ಈ ಸಿದ್ದಯ್ಯನೆಂದರೆ. ನೀವು ಕೋಪಿಸಿಕೊಂಡು ಬಯ್ಯುವುದಿರಲಿ; ಹೊಡೆದರೂ ನನಗೆ ಬೇಸರವಿಲ್ಲ. ಆದರೆ ಒಂದು ಮಾತನ್ನು ಮಾತ್ರ ಹೇಳುತ್ತೇನೆ. ದಯವಿಟ್ಟು ಕೇಳಬೇಕು.

**ನಾಗ:**—ಏನದು, ಹೇಳಿಬಿಡು.

**ಸಿದ್ದ:**—ನಾನೆಂದರೆ ಬಡವನಾಗಿ ಹುಟ್ಟಿ ಪೇದೆಯ ಕೆಲಸಕ್ಕೆ ಸೇರಿ ಹೊಟ್ಟೆ ಹೊರೆಯುತ್ತಿರುವವನು. ಅಷ್ಟು ಮಾತ್ರವಲ್ಲ, ಶೂದ್ರನು. ನಿಮ್ಮಂಥ ಬ್ರಾಹ್ಮಣರಿಗೆ ಹೇಳುವ ಯೋಗ್ಯತೆ ನನ್ನಲ್ಲಿಲ್ಲ. ಆದರೆ ನಿಮ್ಮನ್ನು ನೋಡಿ ಇಷ್ಟು ಮಾತ್ರ ಸೂಚಿಸಬೇಕೆಂದು ತೋರುತ್ತದೆ. ನಾನು ಕೇಳಿದುದು ದುಡ್ಡಿನ ಆಸೆಯಿಂದೆಂದು ಭಾವಿಸಬೇಡಿರಿ. ಈ ಸಂದ ರ್ಭದಲ್ಲಿ ನೀವೆಷ್ಟು ಕೊಡುತ್ತಿದ್ದರೂ ನಾನದನ್ನು ಮುಟ್ಟುತ್ತಿದ್ದಿಲ್ಲ. ಆ ದೇವರಂಥ ಭೀಮಯ್ಯನವರನ್ನು ಹಿಡಿದು ತಿಂದ ಲಂಚವದು ಯಾರಿಗಾ ದರೂ ವಿಷವಾಗಿ ಪರಿಣಮಿಸೀತು. ಇರುವಾಗ ಅವರ ಮನೆಯಲ್ಲಿ ಎಷ್ಟೋ ಸಲ ನಾನು ಹಾಲನ್ನವನ್ನುಂಡಿದ್ದೇನೆ. ಈ ವರೆಗೆ ಈ ವಾರಾಂಟಿಗಾಗಿ ಬರಲಿಕ್ಕಾಗದಂತೆ ಮನೆಯಲ್ಲಿ ಅಸೌಖ್ಯವನ್ನೊದಗಿಸಿದುದಾದರೂ ದೇವರ ದಯವೆಂದೆ ನನ್ನ ಭಾವನೆ. ನೀವು ಏನೇ ಹೇಳಿರಿ; ಆ ದೋಪಮ್ಮನವರೆಂದರೆ ಸಾವಿತ್ರಿಗೆ ಸಮಾನರು. ಅವರ ಹೆಸರನ್ನೆತ್ತಿದ ಮೇಲೆ ಬೇರೆ ಹೆಂಗುಸರ ಹೆಸರ ನ್ನೆತ್ತಬೇಕು ನಾಲಗೆ. ಅನಾಥರಾಗಿದ್ದ ನೀವು ಅವರ ಮನೆಯಲ್ಲೆ ಉಂಡುಟ್ಟು ಬಳೆದವರು. ಅವರಿಗೆ ಇಂಥ ತಪ್ಪನ್ನಾಚರಿಸುತ್ತಿರುವ ನಿಮ್ಮನ್ನು ಸ್ವಾಮಿ ಮೆಚ್ಚಲಿಕ್ಕಿಲ್ಲ, ಭೂಮಿ ಹೊರಲಿಕ್ಕಿಲ್ಲ. ನಾನು ಪೇದೆಯಾದರೂ ಮಾತು ಪೇದೆಯಲ್ಲ. ಇನ್ನಾದರೂ . . . .

**ನಾಗ:**—(ಅತಿ ಕೋಪದಿಂದ) ಮುಚ್ಚು ಬಾಯಿ. ಹೊರಟು ಹೋಗು.

**ಸಿದ್ದ:**—ಅದೇನು ನನ್ನ ಬಾಯಿಯಲ್ಲೂ ನಿಮ್ಮ ಅಧಿಕಾರವೆ? ಇರಲಿ. ಈಗ ಹೋಗುತ್ತೇನೆ. ಸೆರಗಿನಲ್ಲಿ ಗಂಟು ಕಟ್ಟಿಕೊಳ್ಳಿರಿ. ದಿಕ್ಕಿ

ಲ್ಲದೆ ದಾರಿಯಲ್ಲಿ ಬಿದ್ದು ನರಳುವಾಗ ನನ್ನಂಥವನನ್ನೇ "ಬಾ" ಎನ್ನಲಿಕ್ಕಿದೆ.

**ನಾಗ:**—ಆಗಲಿ; ನಡೆಯುತ್ತೀಯೋ ಇಲ್ಲವೊ?

**ಸಿದ್ದ:**—(ಕೋಪದಿಂದ) ನಡೆಯದಿದ್ದರೆ ನೀವು ಮಾಡುವುದೇನು?

**ನಾಗ:**—(ಮಾತಿಲ್ಲ).

**ಸಿದ್ದ:**—(ಪುನಃ ನಗುತ್ತಾ) "ಸ್ವಾಮಿ, ಹಾಗೆ ನರಳಿದರೂ ಏನು? ಹತ್ತಾದರೂ ಹುಳವಾಗದೆ ನೀವು ಪ್ರಾಣಬಿಡಲಿಕ್ಕಿಲ್ಲ" ಎಂದು ಸಿದ್ದಯ್ಯನು ಹೊರಟುಹೋದನು.

---

"ಕಾಕಾಕ್ಷಿ" ಎಂಬುದು ನಾಗಪ್ಪಯ್ಯನ ಒಳಹೆಸರು. ಒಳಹೆಸರೆಂದರೆ ತಾಯಿತಂದೆಗಳಿಟ್ಟುದಲ್ಲವೆಂಬುದನ್ನು ಆ ಹೆಸರಿನಿಂದಲೆ ಭಾವಿಸಿಕೊಳ್ಳಬಹುದು. ಹಿರಿಯರಿಟ್ಟ ಹೆಸರಾದರೆ ಹೆಚ್ಚಾಗಿ ಮುದ್ದಾಗಿರುತ್ತದೆ. ಕಾಕಾಕ್ಷಿಯೆಂದರೆ ಕಾಗೆಯ ಕಣ್ಣಿನಂತೆ ಕಣ್ಣುಳ್ಳವನೆಂದರ್ಥ. ಕಾಗೆ ಒಂದೆಡೆಗೆ ಕಣ್ಣಾಲಿಯನ್ನು ತಿರುಗಿಸಿದಂತೆ ತೋರಿದರೆ, ನೋಟವು ಮತ್ತೊಂದೆಡೆಗೆ ಹರಿಯುವುದು ಪ್ರಕೃತಿ. ಆ ವೈಶಿಷ್ಟ್ಯದಿಂದಾಗಿಯೆ ಊರವರ ಬಗೆಬಾಯಿಗಳಿಂದ·ಒದಗಿದುದು ಆ ಹೆಸರು ನಾಗಪ್ಪಯ್ಯನಿಗೆ. ಅಂಥವರಿಗೆ ಕೆಲವರು ನಮಸ್ಕರಿಸಿ ಪ್ರತಿನಮಸ್ಕಾರವನ್ನೊಂದದೆ ಬೇಸರಗೊಳ್ಳುವುದೂ, ಕೆಲವೇಳೆ ಅಂಥವರೇ ಒಬ್ಬರಿಗೆ ಕೈಮುಗಿದು ಇನ್ನೊಬ್ಬರಿಂದ ಕೈಮುಗಿಸಿಕೊಂಡರೂ ಕಾಣದೆ ಬೇಸರಪಡೆವುದೂ ಉಂಟು. ನಮ್ಮ ನಾಗಪ್ಪಯ್ಯನಿಗೆ ಅಂಥ ಸಂದರ್ಭವು ಮೊದಮೊದಲು ಹೆಚ್ಚಾಗಿರಲಿಲ್ಲ. ದಿನಗಳೆದಂತೆ ಅವನಿಗೂ ಆ ಸಂದರ್ಭವೊದಗುತ್ತಾ ಬಂತು. ಈಗ ಶ್ರೀಮಂತನಾದ ಹೊಸಮನೆ ರಾಮಯ್ಯನ ಬೀಗದಕಯ್ಯ ಭಂಡಾರಿಯೆ ಅವನಾಗಿಬಿಟ್ಟಿದ್ದಾನೆನ್ನಬಹುದು. "ನಿಧಿಗಂಜಬೇಡ, ನಾಗನಿಗಂಜು" ಎಂದಲ್ಲವೆ ಹಿರಿಯರ ಮಾತು? ಅದರಿಂದ ನಾಗಪ್ಪಯ್ಯನ ನಮಸ್ಕಾರ ವಿಷಯದಲ್ಲಿ ಹಲವರು ಜಾಗರೂಕರಾಗಿದ್ದರು. "ಕಾಕಾಕ್ಷಿ" ಎಂಬುದು ಸಾಮಾನ್ಯವಾದುದಾದರೆ "ಜಯಂತ" ಎಂಬುದು ವಿಶೇಷವಾಗಿ ರಸಿಕರಿಟ್ಟ ಹೆಸರು. "ಸೌಂದರ್ಯಶಾಲಿಗಳಾದ ಯುವಕರನ್ನಲ್ಲವೆ "ಕಾಮ ನಳಕೂಬರ ಜಯಂತ"ರೆಂದು ಬಣ್ಣಿಸುವುದು? ಈ "ಕಾಕಾಕ್ಷಿ"ಯನ್ನು ಹಾಗೆ ವರ್ಣಿಸಿ ಅಲಂಕಾರವನ್ನ ಹೊಲಗೆಡಿಸುವುದೆ?" ಎಂದು ಕೇಳಬಹುದು. ಆದರೆ ಇದು ಹಾಗಲ್ಲ. ಗ್ರಾಮ್ಯಾರ್ಥವನ್ನು ಸೂಚಿಸಬೇಕಾದಲ್ಲಿಯೂ ರಸಿಕರ ಬಾಯಲ್ಲಿ ಅಗ್ರಾಮ್ಯವಾದ ಪದವೆ ಹೊರಡುವುದು ಪದ್ಧತಿ. ಪೌರಾಣಿಕ ಚರಿತ್ರೆಯೊಂದರ ಹೋಲಿಕೆಯಿಂದಲೆ ರಸಿಕರು ನಾಗಪ್ಪಯ್ಯನಿಗೆ "ಜಯಂತ" ಎಂಬ ಒಳಹೆಸರನ್ನಿಟ್ಟುದಂತೆ.

ಶ್ರೀರಾಮನೊಡನೆ ಸೀತೆಯೂ ವನವಾಸಿನಿಯಾಗಿದ್ದಳಷ್ಟೆ. ಇಂದ್ರ ಪುತ್ರನಾದ ಜಯಂತನು ಸೀತೆಯನ್ನು ಕಂಡು ಮರುಳಾದನು. ಕಾಗೆಯಾಗಿ ಬಂದು ಗಿಡುವೊಂದರಲ್ಲಿ ಕುಳಿತನು. ಅವಳ ಮುಖವನ್ನೆ ಎಡೆಬಿಡದೆ ನೋಡ ಲಿಕ್ಕೆ ನಾಚಿಕೆಯಾಯಿತಾಪ್ರಾಣಿಗೆ. ತಲೆಬಾಗಿತು; ಎದೆಯುಕ್ಕಿತು. ಸೈಸ ಲಾರದೆ ಆಕೆಯ ಅಂಚೆನಡೆಯ ಅಡಿಯನ್ನು ಕುಕ್ಕಿತು ಆ ಕಾಗೆ. ನೋವಿನಿಂದ ಅತ್ತು ಕಂಗಾಣದಾದಳು ಸೀತೆ. ಅಳುವನ್ನು ಕೇಳಿ ಎಣಿಕೆಯ ಕಂದೆರೆದು ನಸುಮುನಿಸುಗೊಂಡನು ರಾಮನು. ಆ ಮುನಿಸಿನೊಡನೆ ದರ್ಭೆಯ ಕಣೆಯೊಂದನ್ನು ಮಂತ್ರಿಸಿ ಎಸೆದನು. ಕಾಗೆ ಗರಿಯೆತ್ತಿತು; ಮಂತ್ರಾ ಸ್ತ್ರವು ಹಿಂಬಾಲಿಸಿ ಹೊಕ್ಕಲ್ಲಿ ಹೊಕ್ಕು ಹೋದಲ್ಲಿ ಹೋಯಿತು. ಕಡೆಗೆ ದಾರಿಗಾಣದ ಕಾಗೆ "ರಾಮನೇ ಕಾಗೆ" ಎಂದು ಶರಣಾಯಿತು. ಜಯಂತನ ಪ್ರಾಣವೇನೋ ಉಳಿಯಿತು. ಶರಣನಿಗೆ ಮರಣವುಂಟೆ? ಆದರೆ "ರಾಮಬಾಣಕ್ಕೆ ಹುಸಿ ಇಲ್ಲ." ಸೀತೆಯನ್ನು ಕಂಡು ಮರುಳಾದ ಕಣ್ನೋಟಕ್ಕೆ ಮದ್ದೂ ಆಯಿತು. ಅದು ಮೊದಲ್ಗೊಂಡು ಕಾಗೆಗಳ ಸಂತಾನಕ್ಕೇ ಒಂದೆಡೆ ನೋಡಿದರೆ ಮತ್ತೊಂದೆಡೆ ತೋರುವಂತೆ ಕಣ್ಣಾಯಿ ತಂತೆ. ಜಯಂತನನ್ನು ರಾಮನು ಪರ್ಣಶಾಲೆಯಿಂದೋಡಿಸಿದಂತೆ, ಈ ನಾಗಪ್ಪಯ್ಯನನ್ನು ಭೀಮಯ್ಯನು ಮನೆಯಿಂದ ಹೊರಡಿಸಿದ್ದನು. ಕೆಲ ಗಾಲ ಕಳೆದ ಮೇಲೆ ಅವನಿಗೆ "ಜಯಂತ"ನೆಂಬ ಹೆಸರು ಒದಗಿತು. ಅದೇಕೆಂದು ವಾಚಕರೆ ಊಹಿಸಬಹುದು.

"ಕಾಕಾಕ್ಷಿ" ಎಂಬುದು ಸಾಮಾನ್ಯರಿತ್ತ ಹೆಸರಾದುದರಿಂದ ಸರಳ; ಜಯಂತನೆಂಬುದು ರಸಿಕರ ಬಾಯಿಂದ ಹೊರಟುದರಿಂದ ವಕ್ರ. ಅರ್ಥ ದಲ್ಲಿ ಕಣ್ಣಿಟ್ಟರೆ ಎರಡೂ ಒಂದೆ. ಇರಲಿ, ಸಿದ್ದಯ್ಯನಿಗೂ "ಕಾಕಾಕ್ಷಿ"ಗೂ ಮಾತುಗತೆ ನಡೆದು ಮೂರು ನಾಲ್ಕು ದಿನಗಳು ಕಳೆದಿತ್ತು. ಗುರುಗುಮ್ಮ ನಂತೆ ಏನೋ ಗುಣುಗುಟ್ಟುತ್ತಾ ಅವನು ಕಳಂಜಿಮಲೆ ಗುಡ್ಡದಿಂದ ತೆಂಕಣ ಕಡೆಗೆ ಇಳಿಯುತ್ತಿದ್ದನೊಮ್ಮೆ.

ಎರಗುವ ಬೆನ್ನುದಾಂಗಿನಂತೆ ಶಿಖರ; ಕೈಗಳಂತೆ ಇಕ್ಕಡೆಯಲ್ಲಿ ಬಾಗಿದ ತಪ್ಪಲು; ಕುಳಿತುಕೊಳ್ಳುವ ಮಣೆಯಂತೆ ನಡುವಿನ ಕಣಿವೆ; ಹಾಸಿದ ಹಾಸುಗೆಯಂತೆ ಬಳ್ಳಿಗಿಡಗಳಪೊದರು; ಅಡಿಯೊತ್ತಿನಂತೆ

ಮಂಜೇಶ್ವರದಿಂದ ವಿಟ್ಲಲಕ್ಕೆ ಹೋಗುವ ಹೆದ್ದಾರಿ; ಎಡೆಬಿಡದೆ ಕಣಿವೆಯಿಂದ ಆ ಬೀದಿಗಾಗಿ ಹರಿಯುವ ತಿಳಿನೀರ ಕಾಲೆ ಕುಳಿತ ವನದೇವಿಯ ಕಾಲು; ಹೀಗೆಂದ ಮೇಲೆ ಗುಡ್ಡದ ಆ ಎಡೆಯೆಂದರೆ ವನದೇವಿಯ ಆರಾಮಾಸನವೆನ್ನದಿದ್ದರೆ ತಪ್ಪಾದೀತು. ಬೀದಿಯ ಕೆಳಗಡೆ ಹಸುರು ಹಂದರಗಟ್ಟಿದ ಅಡಿಕೆಯತೋಟ. ಅಡಿಕೆಯ ಗಿಡುಗಳೊಳಗೆ ಒಂದನ್ನು ಎಲೆ ಬಳ್ಳಿಯಾದರೆ ಇನ್ನೊಂದನ್ನು ಮೆಣಸಿನ ಬಳ್ಳಿ, ಮತ್ತೊಂದನ್ನು ಕಾನಗಲ್ಲಟೆ ಬಳ್ಳಿ ಸುತ್ತಿಕೊಂಡಿತ್ತು. ಕೊರಳಲ್ಲಿ ಧರಿಸಿದ ಪಚ್ಚೆಮಾಣಿಕಗಳ ಹಾರಗಳಂತೆ ಎಳಅಡಿಕೆ ಹಣ್ಣಡಿಕೆಗಳ ಗೊಂಚಲು. ಶೈತ್ಯೋಪಚಾರಗಳಿಂದ ಅಡಿಯೂಳಿಗವೆಸಗುತ್ತಿರುವ ತೊತ್ತಿಯರಂತೆ ತರತರದ ಬಾಳೆಗಳು. ಕಂಕುಳಲ್ಲಿ ಮಕ್ಕಳನ್ನೆತ್ತಿಕೊಂಡು ಮೇಲುಗೆಲಸಗಳನ್ನು ಆರಯ್ಯುತ್ತಿರುವ ಕುಲವೃದ್ಧೆಯರಂತೆ ತೆಂಗಿನ ಮರಗಳು. ಈ ವನಸ್ಪತಿ ಸಂಸಾರವೆಲ್ಲ ಮೇಲೆ ಹೇಳಿದ ವನದೇವಿಯ ಕಾಲ್ಪಡಿದೆ ಏಳ್ಗೆಗೊಂಡು ಆನಂದದಲ್ಲಿ ಬಾಳುತ್ತಿವೆ. ತೋಟದ ತೆಂಕಣ ಕಡೆಯಲ್ಲಿ ನೋಟದುದ್ದಕ್ಕೂ ಹರಿದಿದೆ ಬಯಲು. ಇಕ್ಕಡೆಯ ಕೆಯ್‌ಗೊಯ್ದು ಮಜಲುಗದ್ದೆ ಹೆತ್ತೆದ್ದ ಬಾಣಂತಿಯರಂತೆ ಬಡವಾಗಿ ತೋರುತ್ತಿವೆ. ನಡುವಿನ ಬೈಲು ಗದ್ದೆಗೆ ಮಾತ್ರ "ಹೆರುವುದು. ಏಳುವುದು" ಎಂಬ ಬಿಡುವೇ ಇಲ್ಲ. "ತಗ್ಗಿದ ಗದ್ದೆಗೆ ಮೂರು ಬೆಳೆ" ಎಂಬ ಸ್ಯೆರಣೆಯ ನಾಣ್ಣುಡಿಯನ್ನು ನಮ್ಮೂರಲ್ಲಿ ನೆಲೆಗೊಳಿಸಿದುವುಗಳೆಂದರೆ ಈ ಗದ್ದೆಗಳು. ಪಡುಗಡೆಯ ಮಜಲು ಗದ್ದೆಯಲ್ಲಿ ಮೂಡುಮೊಗವಾಗಿ ಕಟ್ಟಿದ ಭವ್ಯವಾದ ಮನೆ. ನೋಡಲಿಕ್ಕೆ ಹೊಸತಾದರೂ ಹೆಸರು ಮಾತ್ರ ಹಳೆಮನೆಯೆಂದು ಈ ಮನೆಗೆ. ಹೊಟ್ಟೆಗಿಲ್ಲದ ಹಲವು ಮಂದಿ ಎಳವೆಯಲ್ಲೆ ಹಳಬರಾಗಿ ಹೋಗುತ್ತಾರೆ. ಹೊಟ್ಟೆಬಟ್ಟೆಗಳಿಗಿದ್ದ ಹಳಬರೂ ಎಳೆಯರಾಗಿ ಕಂಗೊಳಿಸುವುದುಂಟು. ಆಗಾಗ ಮಾಡುತ್ತಿದ್ದ ಸಾರಣೆಕಾರಣೆಗಳಿಂದ, ಬಳಿಯುತ್ತಿದ್ದ ಸುಣ್ಣದ ಬಣ್ಣದಿಂದ, ಮಗುಚುತ್ತಿದ್ದ ಹಂಚಿನ ಸಂಚಯದಿಂದ ಮನೆ ಹೊಸತಾಗಿಯೆ ತೋರುತ್ತಿದೆ. ಆದರೂ, ಸುತ್ತು ಮುತ್ತಣವರು "ಹಳೆಮನೆ" ಎನ್ನುತ್ತಾ ಬಂದುದರಿಂದ ಈ ಹೊತ್ತಿಗೂ ಅದು ಹಳೆಮನೆ.

ಗುಡ್ಡವನ್ನಿಳಿದನು, ಬೀದಿಯನ್ನು ದಾಟಿದನು, ತೋಟವನ್ನು ಸುತ್ತಿದನು ನಮ್ಮ ನಾಗಪ್ಪಯ್ಯ. ಮುಂದಿನ ಮಜಲು ಗದ್ದೆಯನ್ನಿಳಿದು ಬೈಲಿನಲ್ಲಿ ಬಂದೂ ಮೇಲೇರಬಹುದು; ಅಲ್ಲವೆ ಹಿಂದಿನ ಹಾಡಿಯಲ್ಲೆ ಹರಿದು ಅಂಗಳಕ್ಕಿಳಿದು ಬರಲೂ ಬಹುದು. ನಾಗಪ್ಪಯ್ಯನಲ್ಲವೆ? ಎದುರಾಗಿ ಬರುವ ಸರಳ ಮಾರ್ಗವು ಅವನಿಗೊಪ್ಪದು. ವಕ್ರವಾದ ಹಿಂದಿನ ದಾರಿಯಲ್ಲೆ ಬಂದನು. ಮನೆಯ ಹಿಂಬದಿಯಲ್ಲಿ ಹತ್ತು ನಿಮಿಷ ನಿಂತು ಕಿವಿಗೊಟ್ಟು ಕೇಳುತ್ತಿದ್ದನು. ಮನೆಯತ್ತಣಿಂದ ಸದ್ದೇನೂ ಕೇಳಿ ಬರಲಿಲ್ಲ. ಮೆಲ್ಲನೆ ಕೆಳಗಿಳಿದು ಬಂದು ಜಗಲಿಗೆ ಹತ್ತಿದನು.

“ಓಹೋ! ಇದೇನು “ಅತ್ತಿಯಹೂ”ವಾಗಿ ಬಿಟ್ಟೆಯಲ್ಲ ನಾಗಪ್ಪಯ್ಯ. ಕಣ್ಣು ಕನವರಿಸುತ್ತಿತ್ತು ನಿನ್ನನ್ನೆ” ಎಂದನು ಬಾಜಿರಹಲಗೆಯಲ್ಲಿ ಕುಳಿತುಕೊಂಡಿದ್ದ ರಾಮಯ್ಯನು. ಮಡಿಚಿದ ಪಂಚಬಳ್ಳಿ ಎಲೆಗಳು ಬೆರಳೆಡೆಯಲ್ಲಿ; ಚಿವುಟಿ ಅಚ್ಚೊತ್ತಿನಿಂತ ಎಲೆಗೊನೆಗಳು ಕೆನ್ನೆಯಲ್ಲಿ; ಜಗಿಯುತ್ತಾ ಪಾಕಗೊಳ್ಳುತ್ತಿದ್ದ ಅಡಿಕೆ ಹೋಳುಗಳು ಬಾಯಲ್ಲಿ; ಅದರಿಂದ ಅಸ್ಪಷ್ಟವಾದ ಆ ನುಡಿಗಳು ರಾಮಯ್ಯನ ನಾಲಗೆಯಿಂದ ಜಗುಳಿದುವು.

“ಕ್ಹಂ, ಕ್ಹಂ” ಎಂಬ ಕೆಮ್ಮು ಸುರುವಾಯಿತು ನಾಗಪ್ಪಯ್ಯನಿಗೆ. ಕಟ್ಟನೆ ಮರುಮಾತು ಮೊಳೆಯದಿದ್ದರೆ ಹಾಗೆ ಕೆಮ್ಮು ತಲೆದೋರುವುದು ಅವನ ಪ್ರಕೃತಿ.

**ರಾಮಯ್ಯ:**—“ಏನಯ್ಯಾ, ಕೆಮ್ಮಿಯೆ ಕಾಲಕ್ಷೇಪವೊ?”

**ನಾಗ:**—(ಮುಗುಳ್ನಗುತ್ತಾ) ಹುಂ, ನಿಮ್ಮಂಥವರಿಗೆ ರಾಮಯ್ಯನವರೆ, ಏನೆಂದರೂ ಸಲ್ಲುವುದು. ಕೆಲಸವೆಲ್ಲ ಈ (ತನ್ನನ್ನು ತೋರಿಸಿಕೊಂಡು) ಯಂತ್ರವನ್ನು ತಿರುಗಿಸಿದೊಡನೆ ನಡೆಯುತ್ತದೆಯಲ್ಲವೆ? ಆದರೆ ಮಿತಿಮೀರಿದ ಕೆಲಸ ಮಾಡಿದರೆ ಯಂತ್ರವಾದರೂ ಕಿರಿಕಿರಿ ಗುಟ್ಟುವುದು. ಆ ಅವಸ್ಥೆಯೆ ಒದಗಿದೆ ಈ ಮನುಷ್ಯ ಯಂತ್ರಕ್ಕೂ.

“ಅಹ್ಹಹ್ಹಾ” ಎಂದು ನಗುತ್ತಾ ರಾಮಯ್ಯನು ಹಿಂದಿನ ಲೋಡಿಗೆರಗಿದನು. ಲೋಡಿದ್ದುದು ಒಂದಿಷ್ಟು ಹಿಂದಾದುದರಿಂದ ತಲೆ ಮಾತ್ರ ಅದ

ರಲ್ಲೆರಗಿ ಕೊರಳ ಮುತ್ತು ಹಲಗೆಯಲ್ಲಾಯಿತು. ಅದರಿಂದ ಹಿಂದೆ ಒಂದು ಲೋಡಾದರೆ ಮುಂದೆ ಇನ್ನೊಂದು ಲೋಡಾಯಿತು ಅವನ ಗೋಳಾಕಾರವಾದ ಹೊಟ್ಟೆ. ನಗೆಯ ವಶವಾಗಿ ಹೋದುದರಿಂದ ಜಗಿಯುತ್ತಿದ್ದ ಅಡಿಕೆ ಹೋಳುಗಳೆಲ್ಲ ಪೊರಗಾಯಿತು. ಇದರೆಡೆಯಲ್ಲಿ "ಪಕ್ಕಾ ಇದ್ದಿ ನಾಗಪ್ಪಯ್ಯ, ಪಕ್ಕಾ" ಎಂದನು ರಾಮಯ್ಯ.

**ನಾಗ:**—ಅದೇನು ರಾಮಯ್ಯನವರೆ, ಹಾಗೆನ್ನುತ್ತೀರಿ?

**ರಾಮ:**—ಏನು ನಾಗಪ್ಪಯ್ಯನೆಂದರೆ ನಮ್ಮದೊಂದು ಯಂತ್ರವೊ?

**ನಾಗ:**—ಅಲ್ಲವೆ ಮತ್ತೆ?

**ರಾಮ:**—ಆಗಲಿ; ಯಂತ್ರದ ಕೆಲಸವೆಲ್ಲ ಹೇಗೆ ನಡೆಯುತ್ತಿದೆ?

**ನಾಗ:**—ನನಗೇನು ಗೊತ್ತು? ಯಂತ್ರವನ್ನು ನಡೆಯಿಸುವ ನಿಮಗೇ ಗೊತ್ತಿರಬೇಕದು.

**ರಾಮ:**—ನಿನ್ನ ಮಾತೆಂದರೆ ಹನುಮಂತನ ಬಾಲ; ಕಟ್ಟಿದಷ್ಟಕ್ಕೆ ಒಂದಡಿ ಏರುವ ಅದನ್ನು ಕಟ್ಟಲಾಗುವುದೆ? ಅದಿರಲಿ, ಯಾಕೆ ನಿಂತು ಕೊಂಡಿದ್ದಿ? ಕುಳಿತುಕೊ. ಏನಿಷ್ಟು ಅಪರೂಪ?

**ನಾಗ:**—(ಕುಳಿತುಕೊಂಡು) ಮತ್ತೇನೂ ಇಲ್ಲ. ನನಗೂ ಒಂದು ಮನೆಯೆಂಬುದು ಉಂಟಲ್ಲವೆ?

**ರಾಮ:**—ಅದೇನು ಈ ಹೊತ್ತಿನ ಹೊಸ ವಿಷಯವೆ?

**ನಾಗ:**—ಹೊಸತೇನೂ ಅಲ್ಲ. ನಮ್ಮ ಊರೆಂದರೆ ಮೊದಲೆ ಕಾಡೂರು. ದನಕರುಗಳಿಗೆ ಮಾತ್ರವಲ್ಲ; ಮನುಷ್ಯರಿಗೂ ಕೂಡ ಅಲ್ಲಿ ಹುಲಿರಾಯನ ಬಾಧೆ ಬಹಳವಾಗಿತ್ತು. ಅದರಿಂದ ಒಂದಿಷ್ಟು ಮಗ್ಗುಲಿಕ್ಕಿ ಮಲಗಲಿಕ್ಕೂ ಎಡೆ ಇರಲಿಲ್ಲ.

**ರಾಮ:**—ನಿಮ್ಮ ಕಾಡೂರಲ್ಲಿ ಎಂದೇನು? ನಮ್ಮ ಈ ನಾಗೂರಲ್ಲಿಯೂ ಅದಿದ್ದೇ ಇದೆ. ತಲೆ ಇರುವಷ್ಟು ಕಾಲ ತಲೆನೋವೂ ಇದೆ ನಾಗಪ್ಪಯ್ಯ.

**ನಾಗ:**—ಅಂಥದಲ್ಲ ರಾಮಯ್ಯನವರೆ ಈ ಹುಲಿಯೆಂದರೆ. ಇದರಿಂದಾಗಿಯೆ ನಮ್ಮ ಕಾಡೂರಿನ ಹೆಸರು ಸಾರ್ಥಕವಾಗಿದ್ದುದು.

**ರಾಮ:**—ಹಾಗೆಂದರೇನು?

**ನಾಗ:**—ಮತ್ತೇನು? ಭೀಮಯ್ಯನೆ ಆ ಹುಲಿರಾಯನೆಂದರೆ.

**ರಾಮ:**—ಓಹೊ! ಆ ಹುಲಿಯನ್ನು ಸೂಚಿಸಲಿಕ್ಕೆ ಇಷ್ಟೊಂದು ದ್ರಾವಿಡಪ್ರಾಣಾಯಾಮ? ಇರಲಿ. ಗೂಡಿನೊಳಗೆ ಬಿದ್ದ ಆ ಹುಲಿ ಅಲ್ಲಿಯೆ ತೀರಿಹೋಯಿತಂತೆ, ಅಲ್ಲವೆ?

**ನಾಗ:** —ಹೌದು.

**ರಾಮ:**—ಎಂದಮೇಲೆ ಇನ್ನದರ ಹೆದರಿಕೆ ಏನು?

**ನಾಗ:**—ಹಳೆ ಹುಲಿ ಹೋದರೇನು? ಹೊಸ ಹುಲಿಯೊಂದು ಕಾಡೂರನ್ನು ಹೊಕ್ಕಿದೆ.

**ರಾಮ:**—ಸರಿಯಾಗಿ ಹೇಳು ನಾಗಪ್ಪಯ್ಯ. ಆ ಹೊಸ ಹುಲಿ ಎಂದರಾವುದು?

**ನಾಗ:**—ನೀವೇನೋ ಕೇಳಿಬಿಡುತ್ತೀರಿ. ಆದರೆ "ನುಂಗುವುದೂ ಅಲ್ಲ, ಉಗುಳುವುದೂ ಅಲ್ಲ" ಎಂಬ ಸಂಕಟವಾಗುವುದು ನನಗೆ. ಏನು ಹೇಳಲಿ; ನಿಮ್ಮ ಶಿವರಾಯನೆ ಭೀಮಯ್ಯನ ಪ್ರತಿನಿಧಿಯಾಗಿ ಬಿಟ್ಟಿದ್ದಾನೆ.

**ರಾಮ:**—ಹಾಗೆಂದರೇನು?

**ನಾಗ:**—ಭೀಮಯ್ಯನ ಕಡೆಗಾಲದಲ್ಲಿ ಶಿವರಾಯನು ಅಲ್ಲೇ ಇದ್ದನು. ಮಾತ್ರವಲ್ಲ, ಸಿದ್ದಯ್ಯನ ಮಾತಿನಿಂದಲೂ ಶಿವರಾಯನ ಮನಸ್ಸು ಆ ಕಡೆಗೆ ಬಾಗಿದಂತೆ ತೋರಿತು.

**ರಾಮ:**—ಒಂದೂ ಇಲ್ಲ. ಅದೆಲ್ಲವೂ ನಿನ್ನ ಮನಸ್ಸಿನ ಬಿಸಿಲ್ಗೊರೆ. ಗಂಡನ ಕಡೆಗಾಲದಲ್ಲಿ ದೋಪಿ ತಮ್ಮನಿಗೆ ಹೇಳಿ ಕಳುಹಿರಬಹುದು. ಕೊಚ್ಚಿ ಕಡಿದ ಹಗೆತನವೇನಾದರೂ ಉಂಟೆ ಅವರೊಳಗೆ? ಇಲ್ಲ. ಒಳಜಗಳವೆಷ್ಟಿದ್ದರೂ ಒಡಹುಟ್ಟಿದ ಅಕ್ಕನೆ ಹೇಳಿ ಕಳುಹಿಸಿದರೆ ಹೋಗದಿರುವುದು ಹೇಗೆ? ಆಲೋಚಿಸು; ನಾವೂ ಸಾಂಸಾರಿಕರಲ್ಲವೆ?

**ನಾಗ:**—ರಾಮಯ್ಯನವರೆ, ನೀವೆಂದರೆ ಬೆಳ್ಳಗಿದ್ದುದೆಲ್ಲ ಸಕ್ಕರೆ ಯೆನ್ನುವಷ್ಟು ಸರಳ ಮನಸ್ಕರು. ಬೆಳ್ಳಗೆ ತೋರುವುದಿದು ಸಕ್ಕರೆಯಲ್ಲ; ಉಪ್ಪು.

**ರಾಮ:**—ಏನು ಶಿವರಾಯನೀಗ ನಮಗೆ ತಿರುಗಿ ಬಿದ್ದಿದ್ದಾನೆಂದು ಭಾವನೆಯೆ? ಅದು ಹೇಗೆ?

**ನಾಗ:**—ಹೇಗೆಂದು ಬೇರೆ ಹೇಳಬೇಕೆ? ಮರುದಿನವೇ ದೋಪಿ ಯನ್ನೂ ಮಕ್ಕಳನ್ನೂ ಕರಕೊಂಡು ಹೋಗಿದ್ದಾನೆ. ಮನೆಗೆ ಬೀಗ ಹಾಕಿ ಇಬ್ಬರನ್ನು ಕಾಯಲಿಕ್ಕೂ ನೇಮಿಸಿದ್ದಾನಂತೆ.

**ರಾಮ:**—ತೀರ ಗತಿಗೆಟ್ಟ ಬಳಗದವರನ್ನು ಮತ್ತೇನು ಮಾಡುವುದು? ಕಾವಲಿಟ್ಟುದೂ ಸರಿಯೆ. ಕಳ್ಳಕಾಕರ ಕೊಳ್ಳೆಗೊಪ್ಪಿಸಿಕೊಡಬೇಕೆ ಮನೆ ಯನ್ನು? ಆಸ್ತಿಪಾಸ್ತಿಗಳು ಹೇಗಾದರೂ ಮುಂದೆ ನಮಗೇ ಬರುವವು ಗಳು. ಅವುಗಳನ್ನು ಎಚ್ಚರಿಕೆಯಿಂದ ಕಾಯ್ದುಕೊಳ್ಳುವುದರಲ್ಲಿ ತಪ್ಪೇನು? ಬದಲಾಗಿ, ಅದು ಶಿವರಾಯನ ಜಾಣ್ಮೆಯೆಂದೇ ಯಾಕೆಣಿಸಬಾರದು?

**ನಾಗ:**—ಹೌದು ಎಲ್ಲವೂ ಶಿವರಾಯನ ಮಟ್ಟಿಗೆ ಜಾಣ್ಮೆಯೆಂದೆ ಭಾವಿಸುವ. ಆದರೆ, ಹಾಗೆ ಭಾವಿಸುತ್ತಾ ಬಾಯ್ದೆರೆದು ಕೂತುಕೊಳ್ಳುವುದು ಮಾತ್ರ ನಮ್ಮ ಮಟ್ಟಿಗೆ ಜಾಣ್ಮೆಯಲ್ಲ.

**ರಾಮ:**—ಹಾಗೆಂದರೆ?

**ನಾಗ:**—ಹಿರಿಯರಿಂದಾದ ಸಾಲವಲ್ಲ; ಅನಾವಶ್ಯಕವಾಗಿ ಭೀಮ ಯ್ಯನೆ ಮಾಡಿದುದು. ಅದರಿಂದ, ಮಕ್ಕಳ ಪಾಲಿಗೆ ಸಾಲವು ಹೊರತಕ್ಕು ದಲ್ಲವೆಂದು ಹುಡುಗರ ಕಡೆಯಿಂದ ವ್ಯಾಜ್ಯವನ್ನು ಹೂಡುವಾಗ ಅವನ ಜಾಣ್ಮೆ ಇನ್ನಷ್ಟು ಹೊಳೆದು ತೋರಲಿಕ್ಕಿದೆ.

**ರಾಮ:**—ಇದೆಲ್ಲ ವಾಸ್ತವವೊ ಬರಿಯ ಗಾಳಿ ಮಾತೊ?

**ನಾಗ:**—ಇದೇನು ಸ್ವಾಮಿ, ಗಾಳಿ ಮಾತೆಂದು ಅಸಡ್ಡೆ ಮಾಡು ತ್ತೀರಿ? ಗಾಳಿಯೆಂದರೆ ಸಾಮಾನ್ಯವೆ? ಬಿರುಸಾಗಿ ಬೀಸಿದರೆ ಅದರಿಂದ ನಾಡು ಮರಳುಗಾಡಾಗುತ್ತದೆ; ಕಾಡುಗುಡ್ಡಗಳು ನೆಲಸಮವಾಗುತ್ತವೆ.

ಹಾಗೆ ಆ ಗಾಳಿ ಮಾತೆ ಬಿರುಸಾಗಿ ಬಿಟ್ಟರೆ ಈ ರಾಮಯ್ಯನವರ ಬೇರೂ ಕಿತ್ತುಹೋಗಬಹುದು.

**ರಾಮು**:—ಅದು ಹೇಗೆ?

**ನಾಗ**:—(ನಗುತ್ತಾ) ಏನು ಸ್ವಾಮಿ, ಮತ್ತೂ ಹೀಗೆ ಮಾತಾಡುತ್ತೀರಿ? "ಅಂಗಯ್ಯ ಹುಣ್ಣಿಗೆ ಕನ್ನಡಿ ಯಾಕೆ?" ನೀವು ಹನ್ನೆರಡು ಸಾವಿರ ರೂಪಾಯಿಗಳಿಗಲ್ಲವೆ ಭೀಮಯ್ಯನಿಂದ ಅಡವು ಬರೆಯಿಸಿಕೊಂಡುದು?

**ರಾಮು**:—ಅಸಲು ಹನ್ನೆರಡುಸಾವಿರವೆ?

**ನಾಗ**:—ಸರಿ, ಅದೂ ನಿಮಗೆ ಮರೆತು ಹೋಗಿದೆ. ಹೌದು ಹನ್ನೆರಡು. ಈಗ ಬಡ್ಡಿ ಕೋರ್ಟುಖರ್ಚು ಎಲ್ಲ ಕೂಡಿ ಇಪ್ಪತ್ತು ಸಾವಿರವಾಗಬಹುದು.

**ರಾಮು**:—ನಿಜವಾಗಿ ನೋಡಿದರೆ ಒಂದೆ ವರ್ಷದ ಬಡ್ಡಿಯೊಳಗೆ ಅರೆವಾಸಿ ಮಾತ್ರವಲ್ಲವೆ ಬಾಕಿ?

**ನಾಗ**:—(ಕ್ಹುಂ, ಕ್ಹುಂ ಎನ್ನುತ್ತಾ) ಆ ಹಿಂದಿನ ಚರಿತ್ರೆಯನ್ನೆ ಸುರು ಮಾಡಿದಿರಲ್ಲಾ! ಹಾಗೆ ಮಾಡದಿರುತ್ತಿದ್ದರೆ ಈ ವ್ಯಾಜ್ಯದಲ್ಲಾದ ಒಳ ವೆಚ್ಚಗಳೆಲ್ಲ ನಮಗೆಲ್ಲಿಂದ ಬರಬೇಕಿತ್ತು ರಾಮಯ್ಯನವರೆ?

**ರಾಮು**:—ಅದೆಲ್ಲ ಹೌದಪ್ಪಾ.

**ನಾಗ**:—ಭೀಮಯ್ಯನ ದೊಡ್ಡ ಹುಡುಗ ಊರು ಬಿಟ್ಟುಹೋಗಿ ಸುಮಾರು ವರ್ಷವಾಯಿತಲ್ಲ. ಅಷ್ಟೆ ಅಲ್ಲ; ಅವನು ಗೋಕರ್ಣದಲ್ಲಿ ತೀರಿಹೋದುದೂ ಆ ಹೊತ್ತೆ ಜನಜನಿತವಾಗಿತ್ತಲ್ಲವೆ?

**ರಾಮು**:—ಹೌದು.

**ನಾಗ**:—ತೀರಿಹೋದುದು ಸುಳ್ಳುಸುದ್ದಿ. ಅವನು ಎಲ್ಲಿಯೋ ಇದ್ದಾನೆಂತಲೂ ಅವನಿದ್ದಲ್ಲಿಗೆ ಹೋಗಿ ಕರಕೊಂಡು ಬರಬೇಕೆಂತಲೂ ಈ ನಮ್ಮ ಶಿವರಾಯನದೆ ಹೂಣಿಕೆಯಂತೆ.

**ರಾಮು**:—ಅವನೆಲ್ಲಿದ್ದಾನಂತೆ?

**ನಾಗ**:—ಎಲ್ಲಿಯೋ ಯಾರಿಗೆ ಗೊತ್ತು? ಇವನದಾದರೂ "ಹೋಗದ ಊರಿಗೆ ಬಾರದ (ಬರೆಯದ) ಓಲೆಯ" ಪ್ರಯತ್ನವೆಂದೆ ಭಾವಿಸುವ. ಆದರೂ ಈ ನಮ್ಮವನ ಎಣಿಕೆಯನ್ನಾಲೋಚಿಸಿರಿ.

**ರಾಮು:**—ಅದರಲ್ಲೇನು ಕುಯುಕ್ತಿ?

**ನಾಗ:**—ಇನ್ನೂ ಗೊತ್ತಾಗಲಿಲ್ಲವೆ? ಅವನು ಗೋಕರ್ಣದಲ್ಲಿ ಸಮುದ್ರದಲ್ಲಿ ಮುಳುಗಿ ಮಣ್ಣಿಗೆ ಮಣ್ಣಾದನೆಂದು ಆ ಗಣಪತಿ ಭಟ್ಟರು ಹೇಳಿದುದು ನಿಮಗೂ ನೆನಪುಂಟಷ್ಟೆ. ಇನ್ನು ಅವನನ್ನು ಹುಡುಕುವುದೆಲ್ಲಿಂದ?

**ರಾಮು:**—ಆ ಸುದ್ದಿ ಸುಳ್ಳೆಂದು ಮತ್ತೊಬ್ಬ ಭಟ್ಟರೂ ಹೇಳಿದ್ದಾರಂತೆ.

**ನಾಗ:**—"ಅಂತೆ"ಗಳಿಗೆ ಕಡಿಮೆ ಏನು?

**ರಾಮು:**—ಆಯಿತು, ಅವರ ಹುಡುಗನನ್ನು ಹುಡುಕುವುದರಲ್ಲಿ ತಪ್ಪೇನು?

**ನಾಗ:**—ಸರಿಯಾಯಿತು ಸ್ವಾಮಿ. ಹಾಗಾದರೆ ಕೇಳಿರಿ. ಊರೆಲ್ಲ ಹುಡುಕಿದಂತೆ ಮಾಡುವುದು. ಅದೇ ಹುಡುಗನಿವನೆಂದು ಒಬ್ಬನನ್ನು ಕರಕೊಂಡು ಬರುವುದು. ಆಗ ಭೀಮಯ್ಯನಿಗೆ ಇಬ್ಬರು ಹುಡುಗರಾಯಿತಲ್ಲವೆ? ನ್ಯಾಯ್ಯದಲ್ಲಿ ಗುಣವಾದರೆ ಸಾಲವಿಲ್ಲದ ಎರಡು ಪಾಲು ಹುಡುಗರಿಗೆ. ಭೀಮಯ್ಯನ ಒಂದೆ ಪಾಲಿನಲ್ಲಿ ಆ ಸಾಲವೆಲ್ಲ ಹುಟ್ಟುವುದೆ? ತೊಳಸಿ ನೀರೇ ಗತಿ. ಇದೀಗ ಶಿವರಾಯನ ಯುಕ್ತಿಯೆಂದರೆ.

**ರಾಮು:**—(ಮಾತಾಡಲಿಲ್ಲ).

**ನಾಗ:**—ಈ ಒಳ ಸುದ್ದಿ ಊರಲ್ಲೆಲ್ಲ ಘಂಟಾಘೋಷವಾಗಿ ಈಗ ಹಾರುವುದಿಲ್ಲ. ಒಳಗಿಂದೊಳಗೆ ಬಾಯಿಂದ ಕಿವಿಗೆ ಸುಳಿಯುತ್ತಿದೆ.

**ರಾಮು:**—ಹಾಗೋ.

**ನಾಗ:**—ಶಿವರಾಯನೆಂದರೆ ಹೇಗೂ ನಿಮ್ಮ ತಂಗಿಯ ಗಂಡ. ಈ ಹತ್ತಿಪ್ಪತ್ತು ಸಾವಿರಗಳು ಮುಳುಗಿಹೋದರೂ ನಿಮಗೇನು? ಮೂಲೆಯ ಕಸ. ನಾನು ಮಾತ್ರ ಕತ್ತರಿಯಲ್ಲಾಗುವುದು ನಿಜ. ಅನಿಷ್ಟಕ್ಕೆ ಅಂಗಾರಕನಲ್ಲವೆ ಗುರಿಯಾಗಬೇಕು?

**ರಾಮು:**—ಇಲ್ಲ ನಾಗಪ್ಪಯ್ಯ, ಹಾಗೆಲ್ಲ ಆಗಲಿಕ್ಕಿಲ್ಲ. ಶಿವರಾಯನು ನಮ್ಮಲ್ಲೆಲ್ಲಾ ವಿಚಾರಿಸಿಕೊಳ್ಳದೆ ದುಢುಂ ಪ್ರವೇಶಮಾಡುವನೆ? ಮಾತ್ರವಲ್ಲ, ನಿನಗೂ ಸ್ನೇಹಿತನಲ್ಲವೆ ಶಿವರಾಯನು?

**ನಾಗ:**—ಎಲ್ಲವೂ ಸರಿ. ಎರಡು ದಾಸರನ್ನು ನಂಬಿ ಕುರುಡು ದಾಸ ಕೆಟ್ಟ.

**ರಾಮು:**—ಅದೆಲ್ಲ ಇರಲಿ. ಶಿವರಾಯನು ನಮ್ಮ ಮನೆಗೆ ಎರಡು ಬಗೆಯಲಿಕ್ಕಿಲ್ಲ. ಆದರೂ ನೀನು ಹೇಳಿದ ಮಾತಿನಲ್ಲಿ ಒಂದಿಷ್ಟಾದರೂ ಹುರುಳಿದೆಯೆಂದಾದರೆ ಶಿವರಾಯನಿಗೀಗ ಅಕ್ಕ ಮಕ್ಕಳಲ್ಲಿ ಅಕ್ಕರೆಯಿದೆಯೆಂದಾಗುತ್ತದೆ.

**ನಾಗ:**—ಹೌದು; ಅದೀಗ ಈ ಸುದ್ದಿಗೆ ಗಾಳಿಯನ್ನಲ್ಲ, ಜೀವವನ್ನೆ ತುಂಬಿಸಿದುದು.

**ರಾಮು:**—ಶಿವರಾಯನಿಗೆ ಅಂಥ ನಡತೆಯವಳಲ್ಲಿ ಇಂಥ ಕನಿಕರ ವುಂಟಾದುದು ಹೇಗೆ?

**ನಾಗ:**—ಅವಳ ನಡತೆ "ಸ್ವಲ್ಪ ಹಾಗೆ" ಎಂಬುದನ್ನು ಶಿವರಾಯನಿಗೆ ಹೇಳಿದುದಾರು?

**ರಾಮು:**—ನಾನೇ. ಮತ್ತಾರು?

**ನಾಗ:**—ಆ ಸುದ್ದಿಯನ್ನು ತನಗೆ ಯಾರು ತಿಳಿಸಿದುದೆಂದು ಹೇಳಿದ್ದೀರಿ ಶಿವರಾಯನಲ್ಲಿ?

**ರಾಮು:**—ಮೊತ್ತಮೊದಲು ಹೇಳಲಿಲ್ಲ. ಆ ಮೇಲೆ ಒತ್ತಾಯಿಸಿದನು. ಕಡೆಗೆ ಹೇಳಬೇಕಾಯಿತು.

**ನಾಗ:**—ಏನೆಂದು? ಆ ಸುದ್ದಿಯನ್ನು ಹೇಳಿದುದು ನಾಗಪ್ಪಯ್ಯನೆಂದಲ್ಲವೆ?

**ರಾಮು:**—ಹೌದು, ಹೇಳಬೇಕಾಯಿತು.

**ನಾಗ:**—ನಿಮ್ಮ ಮನಸ್ಸು ಸಡಿಲೆಂದು ನನಗೆ ಮೊದಲೆ ಗೊತ್ತು. ಅದರಿಂದಲೆ ಆ ಗುಟ್ಟನ್ನು ಹೇಳಬೇಕಾದರೆ ಅಷ್ಟು ಒಳಹೊರ ನೋಡಿ

ಕೊಂಡು ಒಯ್ದ್ದಿಳಿದುದು. ಆದರೂ ನಿಮ್ಮಲ್ಲಿ ಹೇಳದಿದ್ದರೆ ಮತ್ತಾರಲ್ಲಿ ಹೇಳುವುದು, ಎಂದೆಣಿಸಿ ಹೇಳಿಬಿಟ್ಟೆ. ಅದೇ ಬಂತೀಗ ಪ್ರಾಣಕ್ಕೆ.

**ರಾಮು:**—ಇಲ್ಲ; ನೀನೆಂದುದೆಂದು ಹೇಳಿದ ಮೇಲೆಯೆ ಶಿವ ರಾಯನೂ ಆ ಮಾತನ್ನು ನಂಬಿದುದು. ಅಷ್ಟೆ ಅಲ್ಲ; ಆ ಮೇಲೆಯೆ ಅವನು ಭೀಮಯ್ಯನಲ್ಲಿಗೆ ಹೋಗಿ ಬರುವುದನ್ನೂ ಬಿಡುತ್ತಾ ಬಂದುದು.

**ನಾಗ:**—ಸರಿ; ಅದೆಲ್ಲ ನಂಬುಗೆ ಇರುವಾಗ. ಕೆಳೆತನವೆಂಬುದು ಕೆಸರಿನಲ್ಲಿಯೂ ಕಮಲವಾಗಿ ಅರಳುತ್ತಿದೆ; ಅದೇ ತಿರುಗಿದರೆ ಗಂಧದ ಮರ ವನ್ನೂ ಹಾವಾಗಿ ಸುತ್ತುತ್ತಿದೆ.

**ರಾಮು:**—ಶಿವರಾಯನಿಗೆ ನಿನ್ನಲ್ಲೀಗ ಹಗೆಯುಂಟಾಗಲಿಕ್ಕೇನು ಕಾರಣ?

**ನಾಗ:**—ಏನೆಂದು ಸರಿಯಾಗಿ ಇನ್ನೂ ತಿಳಿಯದು. ಕೆಲಗಾಲ ದಿಂದಿತ್ತ ಅವನ ಮೋರೆ ಮಾತುಗಳಲ್ಲಿ ಮೊನೆ ಮೂಡಿಕೊಂಡೆ ಇದೆ. ಯಾರೋ ನನ್ನಲ್ಲಾಗದವರ ಕೆಲಸವದು ಎಂದು ಆಗಲೆ ಎಣಿಸಿದ್ದೆನು.

**ರಾಮು:**—ನಿನ್ನಲ್ಲಾಗದವರೆಂದರಾರು?

**ನಾಗ:**—(ಸುತ್ತಲೂ ನೋಡಿದನು)

**ರಾಮು:**—ಏನು ನೋಡುತ್ತಿ? ಹೇಳಿ ಬಿಡು.

**ನಾಗ:**—ಯಾರೆಂದು ಹೇಳುವುದು ಸ್ವಾಮಿ. ಒಟ್ಟಾರೆ ನನ್ನ ಯೋಗ್ಯತೆಯೆಂದೆ ಹೇಳುವುದು ಒಳ್ಳೆಯದು.

**ರಾಮು:**—ಹಾಗೆಂದರೇನು? ರೋಗವನ್ನರಿತ ಮೇಲಲ್ಲವೆ ಮದ್ದು?

**ನಾಗ:**—ಅದೇನೋ ಹೌದು. ಆದರೆ ನೀವೆಂದರೆ ಸರ್ವಸ್ವವೆಂದೆ ಣಿಸಿ ಗುಟ್ಟನ್ನು ಹೇಳಿಬಿಡುವುದು ನನ್ನ ಸ್ವಭಾವವಾಗಿದೆ. ಅದನ್ನು ಹಾಗೆಯೆ ಹೊರಸೂಸಿ ಬಿಡುವುದು ನಿಮ್ಮದೂ ಸ್ವಭಾವವಾಗಿದೆ.

**ರಾಮು:**—ಛೇ, ಅಂಥ ಸಂದೇಹವನ್ನು ಬಿಟ್ಟು ಬಿಡು. ನನ್ನಾಣೆ ಯಾಗಿಯೂ ಹೇಳುವುದಿಲ್ಲ.

**ನಾಗ:**—(ಹತ್ತಿರಕ್ಕೆ ಸರಿದು) ನಮ್ಮ ಸಾಣನಿಗೆ ನಿಮ್ಮ ಬಾಗಿಯನ್ನು ಕೊಟ್ಟು ಮದುವೆಮಾಡುವುದೆಂದು ನೀವೆ ಒತ್ತಾಯಿಸಿ ನಿಶ್ಚಯಿಸಿದುದಲ್ಲವೆ? ಅದು . . . . ಕ್ಹಂ ಕ್ಹಂ.

**ರಾಮು:**—ಹೌದು.

**ನಾಗ:**—ಅದು ನಿಮ್ಮ ಯಜಮಾನಿತಿಯವರಿಗೆ ಒಪ್ಪಿಗೆಯಿಲ್ಲವಲ್ಲವೆ?

**ರಾಮು:**—(ನಗುತ್ತಾ) ಹುಂ, ಹೆಂಗುಸರ ಬುದ್ಧಿ. ದೂರದ ಬೆಟ್ಟ ನುಣ್ಣಗಾಗಿ ತೋರುವುದು ಅವರ ಪ್ರಕೃತಿ. ಹತ್ತಿರಹೋದರೆ ಅದೆಲ್ಲ ಗೊಂಡಾರಣ್ಯವೆಂದು ನಮ್ಮಂಥವರಿಗಲ್ಲವೆ ಗೊತ್ತು?

**ನಾಗ:**—ಅದು ಹೇಗೂ ಇರಲಿ. ಅದು ಮೊದಲ್ಗೊಂಡು ನಾನೆಂದರೆ ಕಣ್ಣಿನ ಕಸವಾಗಿದೆ ಅವರಿಗೂ. ಶಿವರಾಯನೆಂದರೆ ಅವರಿಗೆ ಅಣ್ಣನೆ ಆಗುತ್ತಾನಲ್ಲವೆ?

**ರಾಮು:**—ಓಹೋ! ಶಿವರಾಯನ ಮನಸ್ಸನ್ನು ತಿರುಗಿಸಿದುದು ಅವಳೆಂದು ನಿನ್ನ ಅನುಮಾನವೆ? ಅದು ದೊಡ್ಡ ವಿಷಯವಲ್ಲ. ಅದಿರಲಿ, "ಮದುವೆ" ಎಂದು ಹೇಳಿದೊಡನೆ ಒಂದು ವಿಷಯವು ನೆನಪಿಗೆ ಬಂತು. ಅದನ್ನು ನಿನ್ನಲ್ಲಿ ಹೇಳಬೇಕೆಂದು ಎರಡು ದಿನಗಳಿಂದ ನಿರೀಕ್ಷಿಸುತ್ತಿದ್ದೇನೆ.

**ನಾಗ:**—ಏನದು?

**ರಾಮು:**—ಅದನ್ನು ಹೇಳಿ ತಿಳಿದುಕೊಳ್ಳುವಾಗ ತಡವಾದೀತು. ಕೋಳಿ ಕೂಗಿದೊಡನೆ ಎದ್ದು ಮೋರೆತೊಳೆದು ಬೈಲಿನ ಕಡೆಗೆ ಹೋದವನು ಈಗಲೇ ಬಂದೆನು. ನಿನಗೂ ಕಾಪಿಗೀಪಿ ಒಂದೂ ಆಗಿಲ್ಲವೆಂದು ತೋರುತ್ತದೆ.

**ನಾಗ:**—ಆಗುವಾಗ ಗಣಪನು ಹೇಳುತ್ತಾನಲ್ಲ. ಆ ವಿಷಯವೇನು?

**ರಾಮು:**—ಈಗ ನಮ್ಮ ಕಿಟ್ಟಪ್ಪನಿಗೆ ರಜೆ. ಕೆಲವು ಮಂದಿ ಹುಡುಗರೊಂದಿಗೆ ಮೈಸೂರಿಗೆ ಹೋಗಿದ್ದಾನಂತೆ. ಅಲ್ಲಿಂದ ಒಂದು ಕಾಗದ ಬರೆದಿದ್ದಾನೆ.

**ನಾಗ:**—ಮದುವೆಗೂ ಆ ಕಾಗದಕ್ಕೂ ಸಂಬಂಧವೇನು?

**ರಾಮು:**—"ಕಾಗದವನ್ನೋದುವಾಗ ಎಲ್ಲವೂ ಕನ್ನಡಿಯಂತಾಗುತ್ತದೆ" ಎಂದು ಅದನ್ನು ತಂದು ನಾಗಪ್ಪಯ್ಯನಲ್ಲಿ ಕೊಟ್ಟನು. ಅವನು ಬಿಡಿಸಿ ಮನಸ್ಸಿನಲ್ಲೆ ಓದತೊಡಗಿದನು.

**ರಾಮು:**—ನನಗೂ ಕೇಳಲಿ.

**ನಾಗ:**—"ಆಯಿತು" (ಎಂದು ಓದುತ್ತಾನೆ.)

ಮೈಸೂರು ರಸಿಕರಂಜಕ ಭವನ.
೧೯—೧೨—೧೯೩೦.

ಶ್ರೀ. ರೂಪರವರ ಸನ್ನಿಧಾನದಲ್ಲಿ,

ಚಿ. ಕಿಟ್ಟಪ್ಪನು ಬೇಡುವ ಆಶೀರ್ವಾದಗಳು. ಕುಶಲ. ಇತರ ಸ್ನೇಹಿತರೂ ನಾನೂ ನಮ್ಮ ಉಪಾಧ್ಯಾಯರೊಡನೆ ಬಂದವರು ಈ ಭವನದಲ್ಲಿ ಇಳಿದುಕೊಂಡಿದ್ದೇವೆ. ಇಲ್ಲಿಯ ದಿನಂಪ್ರತಿಯ ವೆಚ್ಚವು ಒಂದಿಷ್ಟು ಹೆಚ್ಚಾಗಿ ತೋರಬಹುದು ಸಾಮಾನ್ಯರಿಗೆ. ಆದರೆ, ಒದಗುವ ಅನುಕೂಲ್ಯದಲ್ಲಿ ಕಣ್ಣಿಟ್ಟರೆ ಈ ವೆಚ್ಚ ಹೆಚ್ಚಲ್ಲ; ಬಹಳ ಕಡಿಮೆ.

ಇಲ್ಲಿ ನೋಡತಕ್ಕ ಎಡೆಗಳನ್ನೂ ನೋಟಗಳನ್ನೂ ನೋಡಿದೆವು. ಎಲ್ಲವನ್ನೂ ಬಣ್ಣಿಸಿದರೆ ಪತ್ರವಲ್ಲ; ಅದೊಂದು ಪುಸ್ತಕವೆ ಆದೀತು. ಮೇಲಿಂದ ಮೇಲೆ ಹೇಳುವುದಾದರೆ ಕನ್ನಡ ನಾಡಿನೊಳಗೆ—ಯಾಕೆ ಭರತಖಂಡದೊಳಗೆ—ಮೈಸೂರಿನಷ್ಟು ಅಂದವಾದ ಪಟ್ಟಣವಿಲ್ಲವೆನ್ನುವುದು ಸರಿಯೆಂದು ತೋರುತ್ತಿದೆ. ಇದನ್ನು ಓದಿದೊಡನೆ ಇಪ್ಪತ್ತಯ್ದು ವರ್ಷಗಳ ಮೊದಲು ತಿರುಪತಿಗೆ ಹೋದಾಗ ನೀವು ಕಂಡ ಮೈಸೂರೆ ಕಣ್ಣಿಗೆ ಕಟ್ಟಿದಂತಾದೀತು ನಿಮಗೆ. ಆದರೆ ಆ ಮೈಸೂರಿಗೆ ಈ ಮೆಯ್ಸಿರಿ ಎಲ್ಲಿಂದ ಬರಬೇಕೆಂಬ ಆಶ್ಚರ್ಯವೂ ಆದೀತು. ಅಂದಿಂದಿನ ಮೈಸೂರುಗಳನ್ನು ಹೋಲಿಸಿದರೆ ಅದು ಇರುಳು, ಇದು ಹಗಲು, ಎನ್ನುತ್ತಾರೆ.

ನೀವು ಇಲ್ಲಿ ಬಂದಿದ್ದಾಗ "ಶ್ರೀಯುತ ಉಡುಪಿ ಗೋವಿಂದರಾಯರಲ್ಲಿ ಇಳಿದುಕೊಂಡುದು" ಎಂದು ಹೇಳಿದುದು ನನಗೆ ನೆನಪಿದೆ. ಶ್ರೀ. ಗೋವಿಂದರಾಯರು ಈಗಲೂ ಆರೋಗ್ಯದಲ್ಲಿದ್ದಾರೆ. ಆದ್ರೆ, ಈಗ, ಅವರು

ವಕೀಲ ವೃತ್ತಿಯನ್ನು ಬಿಟ್ಟಿದ್ದಾರೆ. ಅವರ ಮಗ ಗೋಪಾಲರಾಯರು ಈಗ ಪ್ರಸಿದ್ಧರಾದ ವಕೀಲರೊಳಗೊಬ್ಬರು. ಮಂಗಳೂರ ವಿದ್ಯಾರ್ಥಿಗಳು ಬಂದಿದ್ದಾರೆಂಬುದನ್ನರಿತು ಗೋವಿಂದರಾಯರೆ ನಾವಿದ್ದಲ್ಲಿಗೆ ಬಂದರು. ಒಂದು ದಿವಸ ನಮ್ಮನ್ನೆಲ್ಲ ಮನೆಗೆ ಬರಿಸಿಕೊಂಡು ಫಲಾಹಾರಾದಿಗಳಿಂದ ಸತ್ಕರಿಸಿದರು. ಮಾತ್ರವಲ್ಲ; ನನ್ನ ಗೊತ್ತು ಗುರಿಯನ್ನರಿತುಕೊಂಡು ಬಹಳ ಆನಂದಗೊಂಡರು. ನಿಮಗೆ ತನ್ನ ನಮಸ್ಕಾರವನ್ನು ಬರೆಯ ಬೇಕೆಂದೂ ಸೂಚಿಸಿದರು. ಇದರಿಂದ ನಮ್ಮ ಉಪಾಧ್ಯಾಯರಿಗೂ ನನ್ನಲ್ಲಿ ಹೆಚ್ಚಿನ ಪ್ರೇಮಕ್ಕೆ ಎಡೆಯಾಗಿದೆ.

ಈ ಕಾಗದ ಬರೆಯಲು ಕಾರಣವಾದ ಮುಖ್ಯ ವಿಷಯಕ್ಕೆ ಇದು ಮುನ್ನುಡಿ. ಶ್ರೀ। ಗೋವಿಂದರಾಯರ ಮಗ ವಕೀಲ ಗೋಪಾಲರಾಯರ ಗುಮ್ಮಸ್ತರೊಬ್ಬರಿದ್ದಾರೆ. ಅವರ ಹೆಸರು ನೀಲಕಂಠಶಾಸ್ತ್ರಿಗಳೆಂದು. ಗೋವಿಂದರಾಯರೊಮ್ಮೆ ಸಾಗರಪ್ರಾಂತಕ್ಕೆ ಹೋದವರು ಶಾಸ್ತ್ರಿಗಳನ್ನು ಕರಕೊಂಡು ಬಂದರಂತೆ. ಅವರಿಗೆ ವಯಸ್ಸು ಇಪ್ಪತ್ತಯ್ದೊ ಆರೊ? ಚಿಕ್ಕಂದು ಅನಂತಶಯನಕ್ಕೆ ಹೋಗುವಾಗ ನಮ್ಮೂರಲ್ಲಿ ಮಾತ್ರ ವಲ್ಲ; ನಮ್ಮ ಮನೆಯಲ್ಲಿಯೂ ಇಳಿದಿದ್ದರಂತೆ ಶಾಸ್ತ್ರಿಗಳು. ಅಷ್ಟು ಸುಂದರವಾದ ಮತ್ತು ಆಕರ್ಷಕವಾದ ವ್ಯಕ್ತಿಯನ್ನು ನಾನು ನೋಡಿಲ್ಲ. ಗುಮ್ಮಸ್ತರಾದರೇನು? ಇಂಗ್ಲಿಷು ಭಾಷೆಯಲ್ಲಿಯೂ ಅವರಷ್ಟು ನುರಿತ ಯುವಕರನ್ನು ಕಾಣುವುದು ಅಪೂರ್ವವೆನ್ನುತ್ತಾರೆ. ಸಂಸ್ಕೃತ ಕನ್ನಡಗಳಲ್ಲಿಯೂ ಅವರ ಜಾಣ್ಮೆಗೆ ಬಲ್ಲವರೆ ತಲೆದೂಗುತ್ತಾ ರಂತೆ. ಆದರೇನು? ಯಾವ ಪರೀಕ್ಷೆಗಳ ಗೊಡವೆಗೂ ಹೋಗಲಿಲ್ಲ. ಅದರಿಂದ ಗುಮ್ಮಸ್ತರಾಗಿಯೆ ಇರಬೇಕಾಯಿತು. ಅವರಿಗೂ ನನಗೂ ಹೆಚ್ಚಿನ ಬಳಕೆಯಾಗಿದೆ.

ಓದುವುದನ್ನು ತಡೆದು "ಈಗ ಕಾಗದದ ಹೊಲಬಾಯಿತು ಸ್ವಾಮಿ" ಎಂದನು ನಾಗಪ್ಪಯ್ಯ.

**ರಾಮ:**—ಆಗಲಿ; ಓದಿಬಿಡು.

ನನ್ನ ಒತ್ತಾಯದಂತೆ ಶ್ರೀಯುತ ಶಾಸ್ತ್ರಿಗಳು ನನ್ನೊಡನೆ ನಮ್ಮೂರಿಗೆ ಬರುವರು. ಹಾಗೆ ಒತ್ತಾಯಿಸಲು ಮತ್ತೊಂದು ಆಸೆ ಪ್ರೋತ್ಸಾಹಿ

ಸಿತು ನನ್ನನ್ನು. ಅವರಿಗಿನ್ನೂ ಮದುವೆಯಾಗಿಲ್ಲ; ನಮ್ಮ ಬಾಗಿಗೆ ಸರಿಯಾದ ವರನೊದಗಲಿಲ್ಲ. ಶ್ರೀ. ಶಾಸ್ತ್ರಿಗಳವರು ಒಪ್ಪಿದರೆ ಹುಡುಗಿಗೆ ಅನುಕೂಲವರಪ್ರಾಪ್ತಿಯಾಗಬಹುದು. ಮೂವತ್ತು ಮೂವತ್ತೊಂದನೆಯ ತಾರೀಕುಗಳಲ್ಲಿ ಮನೆಗೆ ಬರುತ್ತೇವೆ. ಉಳಿದ ವಿಷಯಗಳನ್ನೆಲ್ಲ ಮುಖತಃ ಬಿನ್ನಯಿಸಿಕೊಳ್ಳುತ್ತೇನೆ.

**ಇಂತು ಚಿ। ಕಿಟ್ಟಪ್ಪನು ಬೇಡುವ ಆಶೀರ್ವಾದಗಳು.**

ಒಂದಿಷ್ಟು ತಡೆದ ಮೇಲೆ "ಕಾಗದದ ಒಕ್ಕಣೆಯಿಂದ ಒಳಗಿನ ಸೂತ್ರವು ಸುರಿದುದೆಲ್ಲ ಹೊಳೆದು ತೋರುತ್ತಿದೆ" ಎಂದನು ನಾಗಪ್ಪಯ್ಯ.

**ರಾಮು:**—ಹೇಗದು?

**ನಾಗ:**—ನೀವು ನಿರ್ಣಯಿಸಿದ ವಿವಾಹವಿಷಯವು ಕಿಟ್ಟಪ್ಪನಿಗೆ ಗೊತ್ತಿಲ್ಲವೆ?

**ರಾಮು:**—ನಿರ್ಣಯವಾದುದು ಗೊತ್ತಿಲ್ಲ. ಆದರೂ ಪ್ರಸ್ತಾವ ನಡೆಯುತ್ತಿದ್ದುದು ಗೊತ್ತಿರಬಹುದು.

**ನಾಗ:**—ನಮ್ಮ ನಾಣನೆಂದರೆ ಸರಿಯಾದ ವರನಲ್ಲವೆಂದೇ ಒಕ್ಕಣೆಯ ಅಭಿಪ್ರಾಯವಲ್ಲವೆ?

**ರಾಮು:**—ಈ ನಿರ್ಣಯವು ಅವನಿಗೆ ಗೊತ್ತಿದ್ದರೆ ಹಾಗೇ ಆಗುತ್ತದೆ. ಈಗಿನ ಹುಡುಗರ ಎಣಿಕೆಯೆ ಹಾಗೆ. "ನಾಣನೂ ಮಂಗಳೂರಿಗೆ ಕಲಿಯಲಿಕ್ಕೆ ಹೋಗಲಿ" ಎಂದು ಆ ಹೊತ್ತು ನಿನ್ನನ್ನು ಒತ್ತಾಯಿಸಿದುದೆ ನನ್ನ ಈ ಮುಂಜಾಗ್ರತೆ.

**ನಾಗ:**—(ನಗುತ್ತಾ) ಕಳುಹದಿದ್ದುದರಿಂದ ನನಗೇನೂ ಪಶ್ಚಾತ್ತಾಪವಿಲ್ಲ ರಾಮಯ್ಯನವರೆ. ಈಗಿನ ಇಂಗ್ಲಿಷುಗಲಿತ ಹುಡುಗರೆಂದರೆ ಮನೆಗೆ ಮಾರಿಗಳು. ಅವರು ಹೋದಲ್ಲಿ ಬಂದಲ್ಲಿ ಸ್ವರ್ಣಾಭಿಷೇಕವಾಗಬೇಕು. ಗೆದ್ದಲೆ ಹಿಡಿದುದೆಲ್ಲ ಮಣ್ಣಾಗಿ ಮಾರ್ಪಡುತ್ತಿದೆಯಲ್ಲ. ಹಾಗೆಯೆ ಈ ಹುಡುಗರು ಮುಟ್ಟಿದುದು ಕಿಟ್ಟಿದುದೆಲ್ಲವೂ ವೆಚ್ಚ. ನಿಮ್ಮಂಥವರಿಗೇನು? ಸುಮ್ಮನೆ ಅಂಧಾನುಕರಣೆ ಮಾಡುತ್ತಿದ್ದರೆ ಹುಲಿಯ ಬಣ್ಣಕ್ಕೆ ಮನಸೋತು

ನರಿ ಮೆಯ್ಮುಟ್ಟಿಕೊಂಡಂತಾಗುತ್ತಿತ್ತು. ಮದುವೆಯಾಗದಿದ್ದರೇನು? ಇರುತ್ತಾನೆ ಬಸವನ ಹಾಗೆ. ಮೆಯ್ನೆರೆಯುತ್ತಾನೇನು?

**ರಾಮು:**—ಹಾಗೆಲ್ಲ ಯಾಕೆ ಹೇಳುತ್ತಿ ನಾಗಪ್ಪಯ್ಯ? ರಾಮಯ್ಯನು ಹೇಳಿದ ಮಾತೆಂದರೆ, ನೀರಿನಲ್ಲಲ್ಲ; ಕಲ್ಲಿನಲ್ಲಿ ಬರೆದ ಬರಹ. ಮಾತ್ರವಲ್ಲ; ಮಾತು ಬಿದ್ದುಹೋಗಿದೆಯೆಂಬುದನ್ನರಿತ ಮೇಲೆ ಕಿಟ್ಟಪ್ಪನಾದರೂ ಮರುಮಾತಾಡಲಿಕ್ಕಿಲ್ಲ.

**ನಾಗ:**-“ಈ ರಾಮಯ್ಯನು ಕೊಟ್ಟ ಮಾತೆಂದರೆ ಆ ರಾಮನು ತೊಟ್ಟ ಬಾಣ” ಎಂಬುದೇನೋ ನೆಲೆಗೊಳ್ಳುವ ಮಾತೆಂಬುದು ನನಗೆ ಗೊತ್ತಿದೆ. ಅದಕ್ಕಾಗಿ ಅಲ್ಲ ಇಷ್ಟೆಲ್ಲ ಹೇಳಿದುದು. ಈ ಕಾಗದವನ್ನೋದಿ ನನ್ನ ಹಿಂದಿನ ಭಾವನೆಗೇ ಬೇರುಬಿಟ್ಟಂತಾಗಿದೆ. ನನ್ನಲ್ಲಿ ದ್ವೇಷಭಾವನೆ, ಶಿವರಾಯನಿಂದ ನಿಮ್ಮ ಮನೆಗೆ, ಮನೆಯಿಂದ ಕಿಟ್ಟಪ್ಪನ ಎದೆಗೆ ಹಬ್ಬಿದೆಯೆಂಬುದರಲ್ಲಿ ಸಂದೇಹವಿಲ್ಲ. ಈಗಂತೂ ಆ ಮಹಾಮಾರಿ ದೋಷಿಯ ಮಾಯಾಶಕ್ತಿಯೂ ಅಣಿಯಾಯಿತು. ಇರಲಿ; ಕಿಟ್ಟಪ್ಪನು ಮೈಸೂರಿಗೆ ಹೊರಡುವ ಮೊದಲು ಶಿವರಾಯನು ಮಂಗಳೂರಿಗೆ ಹೋಗಿದ್ದನೆ?

**ರಾಮು:**—ಹೌದು; ಅಡಿಕೆಯನ್ನು ಸಾಗಿಸಿಕೊಂಡು ಹೋಗಿದ್ದನು. ಕಿಟ್ಟಪ್ಪನಿಗೆ ಬೇಕಾದ ಹಣವನ್ನೂ ಅವನೆ ಕೊಟ್ಟಿದ್ದನು.

**ನಾಗ:**—ಹೂಂ, ಅಲ್ಲಿದೆ ಆ ಮಂತ್ರದ ಮೂಲ.

ಗಂಟೆ ಒಂಬತ್ತುವರೆ ಹೊಡೆಯಿತು. ರಾಮಯ್ಯನ ಕಣ್ಣು ಮನೆಯೊಳಗೆ ತಿರುಗಿತು. ಅಡಿಗೆಯ ಗಣಪನು ಬಾಗಿಲಲ್ಲಿ ಹೊರಗೆ ನಿಲುಕುತ್ತಿದ್ದನು. ರಾಮಯ್ಯನ ಕಣ್ಣು ತನ್ನೆಡೆಗೆ ಹರಿದೊಡನೆ “ಆಯಿತು” ಎಂದನು. “ಹೋಗುವ ನಾಗಪ್ಪಯ್ಯ, ಕಾಫಿಗುಡಿಯದೆ ಮನಸ್ಸು ಮರಜಿಟ್ಟ ಮಂಗನಾಗಿದೆ” ಎಂದನು ರಾಮಯ್ಯ. ಇಬ್ಬರೂ ಎದ್ದರು. “ಶಿವಣ್ಣನವರೊ?” ಎಂದನು ಗಣಪ. ದಿಗಿಲಾದವನಂತೆ ಅತ್ತಿತ್ತ ನೋಡಿದನು ನಾಗಪ್ಪಯ್ಯ. “ಏನು ಶಿವರಾಯನು ಬಂದಿದ್ದಾನೆಯೊ?” ಎಂಬುದು ರಾಮಯ್ಯನ ಪ್ರಶ್ನೆ. “ಹೌದು, ನೀವು ಬೈಲಿಗೆ ಹೋದೊಡನೆ ಬಂದಿದ್ದರು” ಎಂಬುದು ಉತ್ತರ. “ಹಾಗಾದರೆ ನನ್ನನ್ನು ಕಾಣದೆ

ಹೋಗಿರಬೇಕು'' ಎಂದನು ರಾಮಯ್ಯ. ''ಇಲ್ಲ, ಕಾಫಿಗುಡಿಯುದೆ ಹೋಗಲಿಕ್ಕೆ ಶನಿಹಿಡಿದಿದೆಯೋ ನನಗೆ?'' ಎಂಬ ಮಾತು ಬಡಗ ಬದಿಯಿಂದ ಕೇಳಿತು. ರಾಮಯ್ಯನ ಕಣ್ಣು ಆ ಬಡಗುದಿಕ್ಕಿಗೆ ಹರಿದರೆ ನಾಗಪ್ಪಯ್ಯನದು ತೆಂಕಣ ಕಡೆಗೆ ತಿರುಗಿದುದೇಕೆಂದು ವಾಚಕರಿಗೆ ಗೊತ್ತಾದೀತು. ಜಗಲಿಯ ಕೋಣೆಯ ಚಿಲುಕಿನ ಸದ್ದಾಯಿತು. ಬಾಗಿಲು ತೆರೆಯಿತು. ನಗುತ್ತಾ ಹೊರಗೆ ಬಂದನು ಶಿವರಾಯ. ಇಬ್ಬರ ಮೋರೆಯೂ ಬಡಿದು ನಂದಿಸಿದ ದೀಪದಂತಾಯಿತು. ರಾಮಯ್ಯನದರಲ್ಲಿ ಬತ್ತಿಯ ಕೆಂಡದಂತೆ ಜ್ಯೋತಿಃಪ್ರಸಾರವಿಲ್ಲದ ನಗೆ; ನಾಗಪ್ಪಯ್ಯನದರಲ್ಲಿ ಬೆಳಕಿನ ಬಿತ್ತೂ ಮಾಯವಾದ ಕಗ್ಗಪ್ಪು.

**ರಾಮು**:—(ಮೆಲ್ಲನೆ) ಏನು ಶಿವರಾಯನಿಗೆ ನಿದ್ದೆ ಬಂದುಬಿಟ್ಟಿತೋ?

**ಶಿವ**:—(ನಕ್ಕು) ಇಲ್ಲ, ಕಾಫಿಗೆ ತಯಾರಾಗಿರಲಿಲ್ಲ. ಅದರಿಂದ ಸುಮ್ಮನೆ ಮಲಗಿದೆ.

**ರಾಮು**:—ಏನೋ ಗಣಪ; ಸ್ವಲ್ಪ ಮೊದಲೆ ಮಾಡಿಕೊಡಬಾರದಿತ್ತೇ? ನಿನಗೆ ಹಿಟ್ಟೂ ಬೂದಿಯೂ ಒಂದೆ. ಶಿವರಾಯನಿಗೆ ಎಂಟು ಗಂಟೆಯೊಳಗೆ ಕಾಫಿಯಾಗಬೇಕೆಂದು ನಿನಗಿನ್ನೂ ಗೊತ್ತಿಲ್ಲವೆ?

**ಶಿವ**:—ಅವನಿಂದೇನೂ ತಪ್ಪಿಲ್ಲ. ''ಮೆಲ್ಲಗಾಗಲಿ'' ಎಂದು ನಾನೇ ಹೇಳಿದೆನು. ಕಾಫಿಗುಡಿದರೆ ಹೇಗೂ ನಿದ್ದೆ ಬರುತ್ತಿರಲಿಲ್ಲ. ಕಾಫಿಗುಡಿಯದಿದ್ದರೂ ಆ ಎಚ್ಚರಕ್ಕೇನೂ ತಡೆಯಾಗಲಿಲ್ಲ.

**ರಾಮು**:—ಹಾಗೆಂದರೆ?

**ಶಿವ**:—ನೀತಿಶ್ರವಣವಾಗುತ್ತಿತ್ತು ಹೊರಗಣಿಂದ. ನಿದ್ದೆ ಬರುವುದು ಹೇಗೆ?

**ರಾಮು**:—ಯಾವ ನೀತಿ?

**ಶಿವ**:—ಶಕುನಿ ನೀತಿ.

ರಾಮಯ್ಯನ ಬಾಯಿಂದ ಆ ಮೇಲೆ ಮಾತು ಹೊರಡಲಿಲ್ಲ. ನಗುತ್ತಾ ''ಒಳಗೆ ಹೋಗುವ; ಹೊಟ್ಟೆಯನ್ನೂ ಕಾಫಿಯನ್ನೂ ಒಟ್ಟಿಗೆ ತಣಿಸುವುದೆ?'' ಎಂದು ಶಿವರಾಯನು ಮುಂದುವರಿದನು. ಅಷ್ಟರಲ್ಲಿ

ಎಡೆನೋಡುತ್ತಿದ್ದ ನಾಗಪ್ಪಯ್ಯನು ಮೆಲ್ಲನೆ ರಾಮಯ್ಯನ ಮೆಯ್ಯನ್ನು ಮುಟ್ಟಿದನು. ರಾಮಯ್ಯನು ಅವನತ್ತ ತಿರುಗಿದೊಡನೆ "ಕೈಕಣ್ಣು ಗಳ ಸನ್ನೆಯಿಂದ ತಾನು ಜಾರಿಬಿಡುತ್ತೇನೆ" ಎಂದು ಸೂಚಿಸಿದನು. ರಾಮಯ್ಯನು ಒಪ್ಪಿಗೆಯನ್ನು ತಿಳಿಸಿದನು. ಈ ಸನ್ನೆಗಳು ನಿರೀಕ್ಷಿಸುತ್ತಿದ್ದ ಶಿವರಾಯನ ಕಡೆಗಣ್ಣಿಗೆ ಮರೆಯಾಗಲಿಲ್ಲ. ಅದರಿಂದ ತಿರುಗಿ "ಒಳ ಹೋಗುವ" ಎಂದನು. "ನನಗೆ ಕಾಫಿಗೀಪಿ ಎಲ್ಲ ಆಗಿದೆ; ನೀವು ಕುಡಿದು ಬನ್ನಿರಿ" ಎಂದನು ನಾಗಪ್ಪಯ್ಯ.

"ಇದೇನು ನಾಗಪ್ಪಯ್ಯನವರೆ ಹೀಗೆ ಹೇಳುತ್ತೀರಿ? ನಿಮಿಷಗಳ ಮೊದಲು ಎದ್ದ ಆಸರು ಇಷ್ಟು ಬೇಗನೆ ಬಿದ್ದುಹೋಯಿತೆ? ಆತ್ಮ ವಂಚನೆಯೆಂಬುದು ಸರ್ವಪಾಪಗಳಿಗೂ ಬಿತ್ತೆನ್ನಬಹುದು." ಎನ್ನುತ್ತಾ ಅವನ ಕಯ್ಯನ್ನು ಹಿಡಿದು ಒಳಗೊಯ್ದನು ಶಿವರಾಯನು. ಹೀಗೆ ಮಾತಾಡುವಾಗ ನಾಗಪ್ಪಯ್ಯನ ಕಣ್ಣು ಶಿವರಾಯನ ಕಡೆಗೇ ತಿರುಗಿ ಕೊಂಡಿತ್ತು. ಆದರೆ ಅವನ ಕಣ್ಣೊಂದೆಡೆಗಾದರೆ ನೋಟವಿನ್ನೊಂದೆಡೆಗೆಂಬು ದನ್ನು ಯಾರೂ ಮರೆಯಬಾರದು. ಅವನ ಮಾತಿಗೆ ಮಾತಿನ ವಾಗ್ಜಾಲ ವೆಲ್ಲ ಅಬಲರಾದವರಲ್ಲಿ ಮಾತ್ರವೆ; ಪ್ರಬಲರಾದವರು ಮಾತೆತ್ತಿದರೆ ಸಾಕು; ಇದಿರಾಳಿನ ಮೋರೆಯನ್ನು ನೋಡಲಾರನು; ನುಡಿಯನ್ನೆತ್ತಲಾರನು. "ಮೋರೆ ನೋಡದ ಮಾತು, ಮೋಸಗಾರನ ಗುರುತು" ಎಂದ ಕವಿವಚನವು ನೆನಪಾಗುತ್ತದೆ. ಇರಲಿ; ಪೋಲೀಸಿನವರ ಕೈಗೆ ಸಿಕ್ಕಿದ ಕಳ್ಳನಂತೆ ಮಾತಾ ಡದೆ ಶಿವರಾಯನನ್ನು ಹಿಂಬಾಲಿಸಿದನು. ಎಲ್ಲರೂ ಫಲಾಹಾರಕ್ಕೆ ಪ್ರಾರಂಭಿಸಿದರು. ಒಬ್ಬರ ಬಾಯಲ್ಲಿಯೂ ಮಾತು ಮೊಳೆಯಲಿಲ್ಲ. ಉಳಿದವರ ಬಾಯಿಂದಲೆ ಮಾತು ಹೊರಡಬೇಕೆಂದು ಶಿವರಾಯನ ನಿರೀ ಕ್ಷಣೆ. ಮಾತಿನ ಬಾಗಿಲನ್ನು ತೆರೆಯಲಾರದ ರಾಮಯ್ಯನ ಕಾತರತೆ; ಈ ಸೆರೆಮನೆಯಿಂದ ಪಾರಾಗಿ ಬಿಡುವುದು ಹೇಗೆ ಎಂದೆಣಿಸುತ್ತಿದ್ದ ನಾಗಪ್ಪ ಯ್ಯನ ಸಮಯಸಾಧನೆ; ಅಂತೂ ನಾಲಗೆಯ ಕೆಲಸಗಳೊಳಗೆ ಒಂದಾಯಿ ತಲ್ಲದೆ ಮತ್ತೊಂದಾಗಲಿಲ್ಲ. ಕೈದೊಳೆದು ಶಿವರಾಯನು ಹೊರಗೆ ಹೋದನು; ಸ್ವಲ್ಪ ಹೊತ್ತು ಕಳೆದು ರಾಮಯ್ಯನೂ ಚಾವಡಿಗೆಯ್ದಿದನು. ಅಯ್ದು ನಿಮಿಷಗಳಾದರೂ ನಾಗಪ್ಪಯ್ಯನನ್ನು ಕಾಣಲಿಲ್ಲ. "ಭಾವಾಜಿ,

ನಿಮ್ಮ ನಾಗಪ್ಪಯ್ಯನನ್ನೇನು ಕಾಣುವುದಿಲ್ಲ. ಅವನಲ್ಲಿ ಒಂದಿಷ್ಟು ಮಾತಾಡಲಿಕ್ಕಿತ್ತು'' ಎಂದನು ಶಿವರಾಯ. ರಾಮಯ್ಯನು ಕರೆದನು. ಉತ್ತರವಿಲ್ಲ. ಮತ್ತೂ ಕರೆದನು. ಅಷ್ಟರಲ್ಲಿ ಲಕ್ಷ್ಮಮ್ಮನು ಬಂದು ಬಾಗಿಲ ಬಳಿಯಿಂದ "ನಿಮ್ಮ ನಾಗಪ್ಪಯ್ಯನು ಒಳಗಿದ್ದಾನೆಯೆ? ಆಗಲೆ ಕುರುವಾಗಿಲ ಹನಿಕಾಲಾಗಿ ತೋಟಕ್ಕಿಳಿದನು.'' ಎಂದಳು.

**ಶಿವ:**—ಹಾಗಾದರೇನು ಹೆಡೆಮಡಿಚಿ ಹುತ್ತದೊಳಗೆ ಹುದುಗಿ ಬಿಟ್ಟಿತೇ?

**ಲಕ್ಷ್ಮಮ್ಮ:**—ಅದರ ಮೂಗಿಗೆ ಮುಂಗುಲಿಯ ಮೂರಿ ನಾಟಿರ ಬೇಕು. ಆದರೇನು? ಎಡೆನೋಡಿ ಮತ್ತೆ ತಲೆಯೆತ್ತಬಹುದು. ನಾಗೂ ರಲ್ಲವೆ? ಇಲ್ಲಿ ಆ ನಾಗನ ಕಾಲಾಟ ತಪ್ಪುವಂತಿಲ್ಲ.

**ಶಿವ:**—ಮುಂಗುಲಿಯೆಂದರಾರು?

**ಲಕ್ಷ್ಮಮ್ಮ:**—ನೀನೆ ಮತ್ತಾರು? ಈ ವರೆಗೆ ಕೊರಳಲ್ಲಿದ್ದುದು ಬಾಯಿಗಿರಲಿಲ್ಲ ನನಗೆ. ಯಾರಲ್ಲಿ ಹೇಳುವುದು? ನಿಮಗಿಬ್ಬರಿಗೂ ಆ ನಾಗನೆಂದರೆ ಜೀವ. ಬೆಳಗ್ಗೆ ನೀನು ಹೇಳಿದ ಮಾತನ್ನು ಕೇಳಿ ಆ ಮೂಗು ಬ್ಬುಸವಿಳಿದಂತಾಯಿತು. ಪಾಪ, ಆ ಪುಣ್ಯಾತ್ಮ ಭೀಮಯ್ಯನವರು ಎಷ್ಟು ಸಂಕಟಗೊಂಡರೊ? ಅವರು ನಿನ್ನಲ್ಲಿ ಹೇಳಿದ ಮಾತನ್ನು ಕೇಳಿ ನನ್ನೆದೆ ಕರಗಿಯೆಹೋಯಿತು. ಹುಟ್ಟಿದವನಿಗೆ ಸಾವೆಂಬುದು ಕಟ್ಟಿಟ್ಟ ಗಂಟೆನ್ನುವ. ಆದರೂ ಈ ಕಾಕಾಕ್ಷಿಯ ಕಾಟವಲ್ಲದಿರುತ್ತಿದ್ದರೆ ಅಕಾಲಮರಣಕ್ಕೆ ತುತ್ತಾಗುತ್ತಿದ್ದಿಲ್ಲ ಅವರು. ಆ ಮನೆಯಲ್ಲಿಂಡ ಉಪ್ಪನ್ನೂ ಎಣಿಸದ ನೀಚನಿವನು. ಇವರು (ರಾಮಯ್ಯನನ್ನು ತೋರಿಸಿ) ನಾಗಪ್ಪಯ್ಯನೆಂದರೆ ನಮ್ಮವನೆಂದು ಎಣಿಸಿದ್ದಾರೆ. ತಂದೆಗೆ ಹೊಡೆದ ಕೈ ತಾಯಿಗೆ ಹಿಂದಾಗು ವುದೆ?

ಈ ನುಡಿಯನ್ನು ಕೇಳಿದ ರಾಮಯ್ಯನಿಗೆ ನೀರಿನೊಳಗೆ ಕಣ್ತೆರೆದಂತಾ ಯಿತು. ಮುಮ್ಮಾತು ತೋರಲಿಲ್ಲ. ತಾನು ಬೈಲಿನಿಂದ ಬರುವುದಕ್ಕೆ ಮೊದಲೆ ಇವರೊಳಗೆ ಏನೋ ಮಾತುಕತೆ ನಡೆದಿವೆಯೆಂದು ಊಹಿಸಿದನು. ಬೇರೆ ಸಮಯದಲ್ಲಾಗುತ್ತಿದ್ದರೆ ಲಕ್ಷ್ಮಮ್ಮನ ಮಾತನ್ನು ಗಾಳಿಗೆ ಕಟ್ಟು

ಎಡೆನೋಡುತ್ತಿದ್ದ ನಾಗಪ್ಪಯ್ಯನು ಮೆಲ್ಲನೆ ರಾಮಯ್ಯನ ಮೆಯ್ಯನ್ನು ಮುಟ್ಟಿದನು. ರಾಮಯ್ಯನು ಅವನತ್ತ ತಿರುಗಿದೊಡನೆ "ಕೈಕಣ್ಣು ಗಳ ಸನ್ನೆಯಿಂದ ತಾನು ಜಾರಿಬಿಡುತ್ತೇನೆ" ಎಂದು ಸೂಚಿಸಿದನು. ರಾಮಯ್ಯನು ಒಪ್ಪಿಗೆಯನ್ನು ತಿಳಿಸಿದನು. ಈ ಸನ್ನೆಗಳು ನಿರೀಕ್ಷಿಸುತ್ತಿದ್ದ ಶಿವರಾಯನ ಕಡೆಗಣ್ಣಿಗೆ ಮರೆಯಾಗಲಿಲ್ಲ. ಅದರಿಂದ ತಿರುಗಿ "ಒಳ ಹೋಗುವ" ಎಂದನು. "ನನಗೆ ಕಾಫಿಗೀಪಿ ಎಲ್ಲ ಆಗಿದೆ; ನೀವು ಕುಡಿದು ಬನ್ನಿರಿ" ಎಂದನು ನಾಗಪ್ಪಯ್ಯ.

"ಇದೇನು ನಾಗಪ್ಪಯ್ಯನವರೆ ಹೀಗೆ ಹೇಳುತ್ತೀರಿ? ನಿಮಿಷಗಳ ಮೊದಲು ಎದ್ದ ಆಸರು ಇಷ್ಟು ಬೇಗನೆ ಬಿದ್ದುಹೋಯಿತೆ? ಆತ್ಮ ವಂಚನೆಯೆಂಬುದು ಸರ್ವಪಾಪಗಳಿಗೂ ಬಿತ್ತೆನ್ನಬಹುದು." ಎನ್ನುತ್ತಾ ಅವನ ಕಯ್ಯನ್ನು ಹಿಡಿದು ಒಳಗೊಯ್ದನು ಶಿವರಾಯನು. ಹೀಗೆ ಮಾತಾಡುವಾಗ ನಾಗಪ್ಪಯ್ಯನ ಕಣ್ಣು ಶಿವರಾಯನ ಕಡೆಗೇ ತಿರುಗಿ ಕೊಂಡಿತ್ತು. ಆದರೆ ಅವನ ಕಣ್ಣೊಂದೆಡೆಗಾದರೆ ನೋಟವಿನ್ನೊಂದೆಡೆಗೆಂಬು ದನ್ನು ಯಾರೂ ಮರೆಯಬಾರದು. ಅವನ ಮಾತಿಗೆ ಮಾತಿನ ವಾಗ್ಜಾಲ ವೆಲ್ಲ ಅಬಲರಾದವರಲ್ಲಿ ಮಾತ್ರವೆ; ಪ್ರಬಲರಾದವರು ಮಾತೆತ್ತಿದರೆ ಸಾಕು; ಇದಿರಾಳಿನ ಮೋರೆಯನ್ನು ನೋಡಲಾರನು; ನುಡಿಯನ್ನೆತ್ತಲಾರನು. "ಮೋರೆ ನೋಡದ ಮಾತು, ಮೋಸಗಾರನ ಗುರುತು" ಎಂದ ಕವಿವಚನವು ನೆನಪಾಗುತ್ತದೆ. ಇರಲಿ; ಪೋಲೀಸಿನವರ ಕೈಗೆ ಸಿಕ್ಕಿದ ಕಳ್ಳನಂತೆ ಮಾತಾ ಡದೆ ಶಿವರಾಯನನ್ನು ಹಿಂಬಾಲಿಸಿದನು. ಎಲ್ಲರೂ ಫಲಾಹಾರಕ್ಕೆ ಪ್ರಾರಂಭಿಸಿದರು. ಒಬ್ಬರ ಬಾಯಲ್ಲಿಯೂ ಮಾತು ಮೊಳೆಯಲಿಲ್ಲ. ಉಳಿದವರ ಬಾಯಿಂದಲೆ ಮಾತು ಹೊರಡಬೇಕೆಂದು ಶಿವರಾಯನ ನಿರೀ ಕ್ಷಣೆ. ಮಾತಿನ ಬಾಗಿಲನ್ನು ತೆರೆಯಲಾರದ ರಾಮಯ್ಯನ ಕಾತರತೆ; ಈ ಸೆರೆಮನೆಯಿಂದ ಪಾರಾಗಿ ಬಿಡುವುದು ಹೇಗೆ ಎಂದೆಣಿಸುತ್ತಿದ್ದ ನಾಗಪ್ಪ ಯ್ಯನ ಸಮಯಸಾಧನೆ; ಅಂತೂ ನಾಲಗೆಯ ಕೆಲಸಗಳೊಳಗೆ ಒಂದಾಯಿ ತಲ್ಲದೆ ಮತ್ತೊಂದಾಗಲಿಲ್ಲ. ಕೈದೊಳೆದು ಶಿವರಾಯನು ಹೊರಗೆ ಹೋದನು; ಸ್ವಲ್ಪ ಹೊತ್ತು ಕಳೆದು ರಾಮಯ್ಯನೂ ಚಾವಡಿಗೆಯ್ದಿದನು. ಅಯ್ದು ನಿಮಿಷಗಳಾದರೂ ನಾಗಪ್ಪಯ್ಯನನ್ನು ಕಾಣಲಿಲ್ಲ. "ಭಾವಾಜಿ,

ನಿಮ್ಮ ನಾಗಪ್ಪಯ್ಯನನ್ನೇನು ಕಾಣುವುದಿಲ್ಲ. ಅವನಲ್ಲಿ ಒಂದಿಷ್ಟು ಮಾತಾಡಲಿಕ್ಕಿತ್ತು" ಎಂದನು ಶಿವರಾಯ. ರಾಮಯ್ಯನು ಕರೆದನು. ಉತ್ತರವಿಲ್ಲ. ಮತ್ತೂ ಕರೆದನು. ಅಷ್ಟರಲ್ಲಿ ಲಕ್ಷ್ಮಮ್ಮನು ಬಂದು ಬಾಗಿಲ ಬಳಿಯಿಂದ "ನಿಮ್ಮ ನಾಗಪ್ಪಯ್ಯನು ಒಳಗಿದ್ದಾನೆಯೆ? ಆಗಲೆ ಕುರುವಾಗಿಲ ಹನಿಕಾಲಾಗಿ ತೋಟಕ್ಕಿಳಿದನು." ಎಂದಳು.

**ಶಿವ:**—ಹಾಗಾದರೇನು ಹೆಡೆಮುಡಿಚಿ ಹುತ್ತದೊಳಗೆ ಹುದುಗಿ ಬಿಟ್ಟಿತೇ?

**ಲಕ್ಷ್ಮಮ್ಮ:**—ಅದರ ಮೂಗಿಗೆ ಮುಂಗುಲಿಯ ಮೂರಿ ನಾಟಿರ ಬೇಕು. ಆದರೇನು? ಎಡೆನೋಡಿ ಮತ್ತೆ ತಲೆಯೆತ್ತಬಹುದು. ನಾಗೂ ರಲ್ಲವೆ? ಇಲ್ಲಿ ಆ ನಾಗನ ಕಾಲಾಟ ತಪ್ಪುವಂತಿಲ್ಲ.

**ಶಿವ:**—ಮುಂಗುಲಿಯೆಂದರಾರು?

**ಲಕ್ಷ್ಮಮ್ಮ:**—ನೀನೆ ಮತ್ತಾರು? ಈ ವರೆಗೆ ಕೊರಳಲ್ಲಿದ್ದುದು ಬಾಯಿಗಿರಲಿಲ್ಲ ನನಗೆ. ಯಾರಲ್ಲಿ ಹೇಳುವುದು? ನಿಮಗಿಬ್ಬರಿಗೂ ಆ ನಾಗನೆಂದರೆ ಜೀವ. ಬೆಳಗ್ಗೆ ನೀನು ಹೇಳಿದ ಮಾತನ್ನು ಕೇಳಿ ಆ ಮೂಗು ಬ್ಬುಸವಿಳಿದಂತಾಯಿತು. ಪಾಪ, ಆ ಪುಣ್ಯಾತ್ಮ ಭೀಮಯ್ಯನವರು ಎಷ್ಟು ಸಂಕಟಗೊಂಡರೊ? ಅವರು ನಿನ್ನಲ್ಲಿ ಹೇಳಿದ ಮಾತನ್ನು ಕೇಳಿ ನನ್ನೆದೆ ಕರಗಿಯೆಹೋಯಿತು. ಹುಟ್ಟಿದವನಿಗೆ ಸಾವೆಂಬುದು ಕಟ್ಟಿಟ್ಟ ಗಂಟೆನ್ನುವ. ಆದರೂ ಈ ಕಾಕಾಕ್ಷಿಯ ಕಾಟವಲ್ಲದಿರುತ್ತಿದ್ದರೆ ಅಕಾಲಮರಣಕ್ಕೆ ತುತ್ತಾಗುತ್ತಿದ್ದಿಲ್ಲ ಅವರು. ಆ ಮನೆಯಲ್ಲುಂಡ ಉಪ್ಪನ್ನೂ ಎಣಿಸದ ನೀಚನಿವನು. ಇವರು (ರಾಮಯ್ಯನನ್ನು ತೋರಿಸಿ) ನಾಗಪ್ಪಯ್ಯನೆಂದರೆ ನಮ್ಮವನೆಂದು ಎಣಿಸಿದ್ದಾರೆ. ತಂದೆಗೆ ಹೊಡೆದ ಕೈ ತಾಯಿಗೆ ಹಿಂದಾಗು ವುದೆ?

ಈ ನುಡಿಯನ್ನು ಕೇಳಿದ ರಾಮಯ್ಯನಿಗೆ ನೀರಿನೊಳಗೆ ಕಣ್ತೆರೆದಂತಾ ಯಿತು. ಮುಮ್ಮಾತು ತೋರಲಿಲ್ಲ. ತಾನು ಬೈಲಿನಿಂದ ಬರುವುದಕ್ಕೆ ಮೊದಲೆ ಇವರೊಳಗೆ ಏನೋ ಮಾತುಕತೆ ನಡೆದಿವೆಯೆಂದು ಊಹಿಸಿದನು. ಬೇರೆ ಸಮಯದಲ್ಲಾಗುತ್ತಿದ್ದರೆ ಲಕ್ಷ್ಮಮ್ಮನ ಮಾತನ್ನು ಗಾಳಿಗೆ ಕಟ್ಟು

ತಿದ್ದನು. ಆದರೆ ಈಗ ಹಾಗೆ ಮಾಡಿಬಿಡುವಷ್ಟು ಎದೆಗಟ್ಟಿ ಅವನಿಗಿದ್ದಿಲ್ಲ. ಅದರಿಂದ ಏನು ಹೇಳುವುದೆಂದು ಗೊತ್ತಾಗಲಿಲ್ಲ. ಆದರೂ ಏನಾದ ರೊಂದು ಮಾತಾಡದಿದ್ದರೆ ಅವರ ಮಾತಿನ ಬಾಣಕ್ಕೆ ಗುರಿಯಾದಂತಾಯಿ ತಲ್ಲವೇ? ಅದಕ್ಕಾಗಿ "ಶಿವ, ಭೀಮಯ್ಯನು ನಿನ್ನೊಡನೆ ಏನೆಂದು ಹೇಳಿ ದುದು?" ಎಂದು ಕೇಳಿದನು.

**ಶಿವ:**—ಏನು ಹೇಳಿದರೂ ನಿನಗದು ಗೊತ್ತಾಗುವುದು ಹೇಗೆ?

**ರಾಮು:**—ಅವಳಿಗೆ ಗೊತ್ತಾದೀತು; ನನಗಾಗಲಿಕ್ಕಿಲ್ಲವೆ?

**ಶಿವ:**—ಇಲ್ಲ; ಅವಳ ಎದೆಮಿದುಳುಗಳಿಗೆ ಆ ನಾಗನ ನಂಜೇರ ಲಿಲ್ಲ. ನಿನ್ನದು ಹಾಗಲ್ಲ; ನಂಜೇರಿ ಎಚ್ಚರದಪ್ಪಿ ಹೋಗಿದೆ.

**ರಾಮು:**—ಅದೇನು ಹಾಗೆ ಹೇಳುತ್ತಿ? ನಾಗಪ್ಪಯ್ಯನೆಂದರೆ ನಿನಗೂ ಅಚ್ಚುಮೆಚ್ಚಾಗಿದ್ದನಲ್ಲವೆ?

**ಶಿವ:**—ಹೌದು; ಅದರಿಂದಲೇ ಒಡಹುಟ್ಟಿದ ಕರುಳಿನ ಕಷ್ಟವನ್ನೂ ಕಾಣದಷ್ಟು ಕುರುಡನಾಗಿ ಬಿಟ್ಟಿದ್ದೆನು.

**ರಾಮು:**—"ಹನುಮನಾಯಕನಿಗೆ ದೀವಟಿಗೆ ಹಿಡಿವವನಲ್ಲಿ ಕಣ್ಣು." ಎನ್ನುತ್ತಾರಲ್ಲ. ಹಾಗೇ ಆಯಿತು ನೀನೆಂದುದು. ನೀನು ನಿನ್ನಕ್ಕನಲ್ಲಿ ಬೇಸರಗೊಳ್ಳಲಿಕ್ಕೆ ನಾಗಪ್ಪಯ್ಯನು ಕಾರಣವೆ? ಅದಕ್ಕೆ ಅವಳ ನಡತೆಯೆ ಕಾರಣ.

**ಶಿವ:**— ಭಾವ, ನಾನೀಗ ಆ ಮೊದಲಿನ ಶಿವರಾಯನಲ್ಲವೆಂಬು ದನ್ನು ತಿಳಿದುಕೊಳ್ಳಿರಿ; ಆ ಮೇಲೆ ಮಾತಾಡಿರಿ. ಒಂದು ವೇಳೆ ನಮ್ಮಂತಿ ರುವ ಗಂಡುಸರನ್ನಾದರೆ ಏನು ಬೇಕಾದರೂ ಹೇಳಿರಿ. ನನ್ನದೇನೂ ಅಡ್ಡಿಯಿಲ್ಲ. ದಿಕ್ಕಿಲ್ಲದ ಬಡವಳೆಂದು ಕುಲೀನ ಸ್ತ್ರೀಯೊಬ್ಬಳ ನಡತೆಯ ಮೇಲೆ ಕಪ್ಪಿಡಲಾದೀತೆ? ಅದು ನಾಗಪ್ಪಯ್ಯನ ಸುದ್ದಿಯೆಂದು ನೀವೇ ಹೇಳಿದುದಲ್ಲವೆ?

**ರಾಮು:**—ಛೀ, ಎಂದಿಗೂ ಅಲ್ಲ; ಊರಲ್ಲಿ ಸಾವಿರಾರು ಸುದ್ದಿಗಳು ಹಬ್ಬುತ್ತಿವೆ. ಅವನ್ನೆಲ್ಲ ಯಾರು ಹೇಳಿದುದೆಂದು ಬರೆದಿಟ್ಟುಕೊಳ್ಳು ತ್ತೇವೆಯೆ? ಖಂಡಿತವಾಗಿಯೂ ಅದಕ್ಕೆ ನಾಗಪ್ಪಯ್ಯನು ಕಾರಣವಲ್ಲ.

**ಶಿವ:**— ಇದನ್ನು ಮಾತ್ರ ಬರೆದಿಟ್ಟು ಕೊಂಡಿದ್ದೀರೇನು?

**ರಾಮು:**— ಇಲ್ಲ, ನೆನಪುಂಟದು.

**ಶಿವ:**—(ಸಿಟ್ಟನ್ನು ತಡೆಯಲಾರದೆ) ಹೇಳಿದುದು ಅವನಲ್ಲವೆಂದು ನೆನಪುಂಟು; ಮತ್ತಾರೆಂದು ನೆನಪಿಲ್ಲವಲ್ಲವೆ? ಹಾಗಾದರೆ ನನಗೆ ಗೊತ್ತಿದೆ; ಹೇಳಿದುದು ಅವನಲ್ಲವಾದರೆ ಅವಳು: ಆ ಶಾಕಿನಿ.

ಆ ನುಡಿಯನ್ನು ಕೇಳಿ ರಾಮಯ್ಯನು ಬೆಪ್ಪಾದನು. ಮುಂದೆ ಮಾತು ಹೊರಡಲಿಲ್ಲ.

**ಶಿವ:**— ಹೀಗೆ ಆರೋಪಣೆಯನ್ನು ಒಳಗಿಂದೊಳಗೆ ಊದುವವರು ಅವರು; ಅದನ್ನು ಊರಲ್ಲೆಲ್ಲ ಹಬ್ಬಿಸುವವರು ನೀವು. ಆ ಮೇಲೆ ಲೋಕಾಪವಾದ! ಅಬ್ರಹ್ಮಣ್ಯಂ!! ಇಂಥ ಲೋಕಾಪವಾದಕ್ಕೆ ಇನ್ನೂ ಶಿವರಾಯನು ಕಿವಿಗೊಡುವನೆಂದು ಭಾವಿಸಿದಿರೊ? (ಲಕ್ಷ್ಮಮ್ಮನ ಕಡೆಗೆ ತಿರುಗಿ) ನಿನ್ನೆದುರಿನಲ್ಲಿ ಹೀಗೆಲ್ಲ ಮಿತಿಮೀರಿ ಮಾತಾಡಬಾರದೆಂದು ಬಿಗಿವಿಡಿದರೂ ಸಡಿಲಿಹೋಯಿತಮ್ಮ ಮನಸ್ಸು. ಬೇಸರಪಡಬೇಡ. ಹೊಟ್ಟೆಯುರಿ ಸೈಸಲಾರದೆ ಬಾಯಿಂದುಕ್ಕಿಬಿದ್ದ ಮಾತನ್ನು ಸೈರಿಸು.

**ಲಕ್ಷ್ಮೀ:**—"ಅಣ್ಣ ನಿನ್ನಲ್ಲಿ ಬೇಸರವೇಕೆ? ಎಲ್ಲದಕ್ಕೂ ಒಂದು ಗಡಿಯುಂಟು. ನಮ್ಮ ಮನೆಗೂ ಅದು ಹತ್ತಿರವಾಯಿತೆಂದು ತೋರುತ್ತಿದೆ." ಎನ್ನುವಾಗ ಸರ್ರನೆ ಕಣ್ಣೀರು ಸುರಿಯುತ್ತಿತ್ತು.

**ರಾಮು:**— ಏನು ಬೇಕಾದರೂ ಹೇಳಿಕೊಳ್ಳಿರಿ; ಕೋಪಿಸಿಕೊಳ್ಳಿರಿ. ನನಗೇನೂ ಕೋಪವಿಲ್ಲ.

**ಶಿವ:**— ಸರಿ; ನಿನಗೆ ಕೋಪವಾಗುವುದಾದರೂ ಹೇಗೆ? ಪೆಟ್ಟು ತಿಂದವನಿಗಲ್ಲದೆ ಹೊಡೆದವನಿಗೂ ನೋವಾಗುವುದೆ?

**ರಾಮು:**— ಆ ಗಾಳಿಸುದ್ದಿ ಗೊತ್ತಾದೊಡನೆಯೆ ನಿನ್ನಲ್ಲಿ ತಿಳಿಸಲಿಲ್ಲವೆ ನಾನು?

**ಶಿವ:**— ಭಾವ, ಮತ್ತೂ ಮತ್ತೂ "ಗಾಳಿಸುದ್ದಿ" ಎನ್ನಬೇಡಿರಿ. ಗಾಳಿಸುದ್ದಿಯಲ್ಲ; ಆ ಗಯ್ಯಾಳಿಯ ಸುದ್ದಿ. ಅದನ್ನು ನಂಬುವುದಾದರೂ ನೀವು, ನಿಮ್ಮಂಥವರು ಮಾತ್ರ.

**ರಾಮು:**—ಅದು ಸುಳ್ಳೆಂದಾದರೆ ಆಗಲೆ ಹೇಳಬಹುದಿತ್ತಲ್ಲವೆ?

**ಶಿವ:**—ಆಗ ಹೇಳದಿದ್ದರೇನು? ಪರಾಂಬರಿಸಿ ಈಗ ಹೇಳುತ್ತೇನೆ. ಅದು ಸುಳ್ಳೆಂದರೆ ಹಸಿಸುಳ್ಳು. ಆ ಸುಳ್ಳಿನ ಗುಳಿಗೆಯನ್ನು ಕಟ್ಟಿದುದು ಯಾಕೆಂದೂ ನನಗೆ ಗೊತ್ತಾಗಿದೆ.

**ರಾಮು:**—ಯಾಕೆ?

**ಶಿವ:**—ನನ್ನ ತಲೆಯನ್ನು ತಿರುಗಿಸಲಿಕ್ಕೆ.

**ರಾಮು:**—ಅದರಿಂದೇನು ಫಲ?

**ಶಿವ:**—ಮತ್ತೇನು? ಆ ಸುದ್ದಿ ನನಗೆ ಗೊತ್ತಾದರೆ, ಆ ಬಂಧುಗಳಿಗೂ ನನಗೂ ಎಣ್ಣೆಸೀಗೆಯಾಗುತ್ತದೆ. ಅದರಿಂದ ಬಡವರಾದ ಅವರು ದಿಕ್ಕಿಲ್ಲದಾಗುತ್ತಾರೆ. ಹಾಗಾದರೆ ಅವರ ಆಸ್ತಿಯನ್ನು ಹರಿದು ಹಂಚಿಕೊಳ್ಳಬಹುದು. ಊರಿಂದ ಹೊರಗೆ ಬಿಸುಟ ಎತ್ತಿನ ಹೆಣದ ಮೇಲೆ ಹಾರುವ ಹದ್ದನ್ನು ಯಾರು ತಡೆಯುತ್ತಾರೆ? ಆ ಕಾಕಾಕ್ಷಿಯ ಗೂಢಮಂತ್ರವೆಲ್ಲ ನನಗೆ ಗೊತ್ತಾಗಿದೆ.

**ರಾಮು:**—ಶಿವ, ನಮ್ಮ ಬಾಗಿಯ ಆಣೆಯಿಟ್ಟು ಹೇಳುತ್ತೇನೆ. ನನಗೆ ಅದೊಂದೂ ಗೊತ್ತಿಲ್ಲ.

**ಶಿವ:**—ಯಾಕೆ ಭಾವ, ನಿರಪರಾಧಿನಿಯಾದ ಮಗಳನ್ನು ಆಣೆಯಿಡುತ್ತೀರಿ. ಈ ಗುಟ್ಟನ್ನೆಲ್ಲ ನಿಮ್ಮಲ್ಲಿ ಆ ನಾಗನು ಹೇಳಲಿಕ್ಕಿಲ್ಲವೆಂದು ನನಗೂ ಗೊತ್ತಿದೆ. ಆದರೆ "ಒಳಗಿನ ಗುಟ್ಟು ಶಿವನೆ ಬಲ್ಲ" ಎಂಬ ಗಾದೆಯ ತತ್ವವನ್ನೂ ತಪ್ಪಿಸಲಾಗುವುದೆ ಅವನಿಂದ?

**ಲಕ್ಷ್ಮಿ:**—ನನ್ನ ಅಣ್ಣನವರು ಮೊದಲೆ ಇಲ್ಲಿಗೆ ಬರುವುದು ಕಡಿಮೆ ಮಾಡಿದ್ದಾರೆ. ಈಗ ನಿನಗೂ ಹೀಗಾಯಿತು. ಇದೆರಡಕ್ಕೂ ಈ ಕಾಕಾಕ್ಷಿಯೇ ಕಾರಣ. ಎಲ್ಲವೂ ಮಕ್ಕಳ ತಲೆಬರಹದ ಒಕ್ಕಣೆಯ ಫಲವೆಂದು ತೋರುತ್ತಿದೆ.

**ಶಿವ:**—ನಾವು ಹೇಗೆ ಭಾವಿಸಿದರೇನು? ಭಾವನವರು ಇನ್ನೊಂದಾಲೋಚನೆಮಾಡಿದ್ದಾರೆ. ಅದೊಂದು ಸಫಲವಾಗಿಬಿಟ್ಟರೆ ಮತ್ತೆ ನಿಮ್ಮ ಭಾಗ್ಯದ ಬಳ್ಳಿ ಹಬ್ಬಿದಂತಾದೀತು.

**ಲಕ್ಷ್ಮಿ**:—ಅದೇನು ಆ ಆಲೋಚನೆ?

**ಶಿವ**:—ಆ ನಾಗನ ಮಗ ನಾಣನಿಗೆ ನಿಮ್ಮ ಬಾಗಿಯನ್ನು ಕೊಟ್ಟು ಮದುವೆಮಾಡಬೇಕೆಂದು.

**ಲಕ್ಷ್ಮಿ**:—ದೇವರೆ! ಆ ಸೌಭಾಗ್ಯದ ಸುದ್ದಿಯನ್ನಾರು ಹೇಳಿದರು?

**ಶಿವ**:—ನನ್ನಲ್ಲಾರು ಹೇಳುತ್ತಾರೆ? ನಾನು ಬಾಗಿಲು ಬಲಿದು ಕೋಣೆಯಲ್ಲಿ ಮಲಗಿದ್ದೆನಲ್ಲ. ಆಗ ಇವರೊಳಗೆ ನಡೆಯುತ್ತಿದ್ದ ಮಾತು ಕತೆಯೆಡೆಯಲ್ಲಿ ಹೊರಗೆಬಿತ್ತು ಆ ಸೌಭಾಗ್ಯದ ಬಿತ್ತು. ನಿನಗೆ ಗೊತ್ತಿಲ್ಲ ದಿದ್ದರೆ ಈಗಲಾದರೂ ಗೊತ್ತಾಯಿತಷ್ಟೆ. ಸಾರಣೆಕಾರಣೆಗಳನ್ನು ಮಾಡಿಸ ಬಹುದು ಮನೆಗೆ. ಗೆಂಚುಕಾಯಿ ನಳಿಮಾಲೆಗಳನ್ನು ಬರೆಯಬಹುದು ಗೋಡೆಯ ಮೇಲೆ.

**ಲಕ್ಷ್ಮಿ**:—ನಡೆಯುತ್ತಿದ್ದ ಮಾತುಕತೆಯೆಂದರೇನು?

**ಶಿವ**:—ಮೈಸೂರಿಗೆ ಹೋಗಿದ್ದಾನಷ್ಟೆ ನಮ್ಮ ಕಿಟ್ಟ. ಅವನು ಒಂದು ಕಾಗದ ಬರೆದಿದ್ದಾನಂತೆ ಭಾವನವರಿಗೆ. ಕಾಗದ ಬಂದು ಎರಡು ದಿನವಾಯಿತಂತೆ. ನಿಮಗೇನೂ ಗೊತ್ತಾಗಲಿಲ್ಲವೆ ಅದು?

**ಲಕ್ಷ್ಮಿ**:—"ಕಾಗದ ಬರೆದಿದ್ದಾನೆ. ಸುಖವಾಗಿದ್ದಾನೆ. ಬೇಗನೆ ಬರುತ್ತಾನೆ" ಎಂದು ಮಾತ್ರ ಹೇಳಿದರು. ಬಾಗಿ "ಅಣ್ಣನ ಕಾಗದ ವೆಲ್ಲಿದೆ ಅಪ್ಪಾ" ಎಂದಳು. "ಅದೆಲ್ಲಿಯೊ ಬಿಸುಡಿಹೋಯಿತು." ಎಂದಷ್ಟೆ ಹೇಳಿದರು.

**ಶಿವ**:—ಹಾಗೆಂದರೇನು? ಭಾವನವರೇ ಕಾಗದದ ಸುದ್ದಿಯನ್ನು ಎತ್ತಿದರು; ನಾಗಪ್ಪಯ್ಯನಿಗೆ ಕೊಟ್ಟು ಅವನಿಂದಲೇ ಓದಿಸಿದರು. ಇದೇ ಕಿವಿಯಲ್ಲಿ ಕೇಳಿದ್ದೇನೆ. ಹೌದು. ಬಾಗಿ ನೋಡಕೂಡದು ಆ ಪತ್ರವನ್ನು. ಅದರಿಂದಲೆ "ಬಿಸುಡಿಹೋಯಿತು".

**ಲಕ್ಷ್ಮಿ**:—(ಆಶ್ಚರ್ಯದಿಂದ) ಕಿಟ್ಟುವಿನ ಕಾಗದಕ್ಕೂ ಈ ಸುದ್ದಿಗೂ ಸಂಬಂಧವೇನು?

**ಶಿವ:**—ಕಾಕಾಕ್ಷಿ ಓದಿದ ಆ ಪತ್ರದ ಸಾರಾಂಶವಿದು. ಮೈಸೂರಲ್ಲಿ ಉಡುಪಿ ಗೋವಿಂದರಾಯರೆಂಬ ವಕೀಲರಿರುವುದು ನಿನಗೆ ಗೊತ್ತಿದೆಯಷ್ಟೆ.

**ಲಕ್ಷ್ಮಿ:**—ಹೌದು. ತಿರುಪತಿಗೆ ಹೋಗುವಾಗ ಎರಡು ಮೂರು ದಿನ ಅವರಲ್ಲಿಯೆ ನಾವಿದ್ದುದು.

**ಶಿವ:**—ಅವರಲ್ಲಿ ಸಾಗರದ ಕಡೆಯುವನಾದ ನೀಲಕಂಠಶಾಸ್ತ್ರಿ ಎಂಬ ಗುಮ್ಮಸ್ತನೊಬ್ಬನಿದ್ದಾನಂತೆ. ಸೌಂದರ್ಯ, ಗುಣ ನಡತೆಗಳಲ್ಲಿ ಕಿರುಬೆರಳನ್ನಿಡಬೇಕಂತೆ ಅವನ ಹೆಸರಿಗೆ. ಬಡವನಾದುದದರಿಂದ ಯಾವ ಪರೀಕ್ಷೆಗಳಲ್ಲೂ ಪಾಸಾಗಲಿಲ್ಲ. ಅದರಲ್ಲೇನು? ಕನ್ನಡ ಸಂಸ್ಕೃತ ಇಂಗ್ಲಿಷುಗಳಲ್ಲಿ ಅವನಿಗಿರುವ ಜ್ಞಾನಕ್ಕೆ ಬಲ್ಲವರೂ ತಲೆದೂಗುತ್ತಾರಂತೆ. ತಾನು ಬರುವಾಗ ಅವನನ್ನು ಕರಕೊಂಡು ಬರುತ್ತೇನೆಂತಲೂ, ಬಾಗಿಯನ್ನವನಿಗೆ ಮದುವೆಮಾಡಿಕೊಡಬಹುದೆಂದೂ ಕಿಟ್ಟಪ್ಪನ ಹೇಳಿಕೆ. ಅದನ್ನೋದುವಾಗ ಕಾಕಾಕ್ಷಿಗಾದ ಕಳವಳವನ್ನು ಬಣ್ಣಿಸಲಳವಲ್ಲ. ಈ ಕಾಗದಕ್ಕೂ ನಮ್ಮ ಗೂಢಮಂತ್ರವೆ ಕಾರಣವೆಂದು ಹೇಳಿಬಿಟ್ಟನು. ಹೇಗೆ?

**ಲಕ್ಷ್ಮಿ:**—ಎಲುಬಿಲ್ಲದ ನಾಲಗೆ ಹೇಗೆ ಬೇಕಾದರೂ ತಿರುಗುತ್ತಿದೆ. ನಾವೇ ಕಾರಣವಾದರೂ ಅವನ ತಲೆಗೆ ಬಿದ್ದ ಮರವೇನು? ನಮ್ಮ ಹುಡುಗಿಯ ಏಳಿಗೆಯಲ್ಲಿ ಕಣ್ಣು ನಮಗೆ. ಇರಲಿ, ಈ ಕಾಗದದಲ್ಲಿ ನೀನು ಹೇಳಿದ ಹೊಸಸುದ್ದಿಯ ವಿಚಾರವೇನು?

**ಶಿವ:**—ಈ ಹೊಸ ಸುದ್ದಿ ಕಾಗದದಲ್ಲಿದ್ದುದಲ್ಲ. ಏನು ಕಿಟ್ಟಪ್ಪನಿಗೂ ಹುಚ್ಚು ಹಿಡಿದಿದೆಯೆ? ಅದನ್ನೋದುವಾಗ ನಿರಾಶೆಗೊಂಡ ನಾಗಪ್ಪಯ್ಯನನ್ನು ಸಂತಯಿಸಿದ ಈ ಭಾವನ ಬಾಯಿಂದಲೇ ಹೊರಟಿತು ಈ ಸುದ್ದಿ.

**ಲಕ್ಷ್ಮಿ:**—ಹುಂ, ಸರಿ. ಆದರೆ ಹುಡುಗಿಯನ್ನು ಹಾಗೆ ಬಲಿಗೊಡಬೇಕಾದರೆ ಮೊದಲು ನನ್ನನ್ನು ಬಲಿಗೊಟ್ಟು ನಾಂದಿಮಾಡಬೇಕಾದೀತು.

**ಶಿವ:**—ಅದೇನೋ ನನಗೆ ಗೊತ್ತಿಲ್ಲ. ನಿಮ್ಮ ಮಗು; ನಿಮ್ಮ ಹಕ್ಕು. ಇದೇನೋ ಕಿವಿಯಲ್ಲಿ ಕೇಳಿದ ಮಾತು. ದೆವ್ವವೆ ಪ್ರತ್ಯಕ್ಷವಾಗಿರುವಾಗ ಪೂಜಾರಿಗೆ "ಪೂವೇರಿ" ಹಾಕುವುದೇಕೆ? ಭಾವನಲ್ಲಿಯೇ ಕೇಳಬಹುದಲ್ಲ.

**ರಾಮು:**—ನನ್ನಲ್ಲಿ ಕೇಳುವುದೇನು? ಮೊದಲೊಮ್ಮೆ ಹಾಗೆ ಮಾತು ಬಂದುದು ನಿಮಗೆಲ್ಲ ಗೊತ್ತಿದೆ.

**ಲಕ್ಷ್ಮಿ:**—ಮಾತು ಬಂದುದು ಯಾರಿಂದ? ನಾಗಪ್ಪಯ್ಯನು ಮನಸ್ಸಿನಲ್ಲೆ ಮಂಡಿಗೆ ತಿಂದಿರಬಹುದು. ಅದನ್ನು ಬಾಯಲ್ಲೂ ತಿಂದರೆ ಎಂಥ ಸವಿಯೊದಗೀತೆಂದು ನಿಮಗೂ ಸೂಚಿಸಿರಬಹುದು. ಅದರಿಂದ ನಮಗೆಲ್ಲ ಗೊತ್ತಾದಂತಾಯಿತೆ? ಹುಂ, ಸರಿ; ಗೊತ್ತಾಯಿತೀಗ. ಅದರಿಂದಲೆ ಆ ನಾಣ ಬಂದಾಗಲೆಲ್ಲ ಹುಡುಗಿಯೆದುರಲ್ಲಿ ನೀವು ಏನೇನೋ ಮಾತಾಡುತ್ತಿದ್ದುದು. ಅಲ್ಲವೆ?

**ರಾಮು:**—ಅದಕ್ಕಾಗಿ ಇಷ್ಟೊಂದು ಗಲಾಟೆ ಯಾಕೆ? ನಿಮಗೆಲ್ಲ ಅದು ಬೇಡವಾದರೆ ನನಗೂ ಬೇಡ.

**ಶಿವ:**—ಭಾವ, ಬೇರೆಯವರ ಮೇಲಿನ ಅಂಥ ಗಾಳಿಸುದ್ದಿಯೆಂಬುದಕ್ಕೂ ರೆಕ್ಕೆಗಟ್ಟಿ ಹಾರಬಿಡುತ್ತೀರಿ ನೀವು. ಆ ನಾಗಪ್ಪಯ್ಯನ ಮನೆಯೊಳಗಿನ ಬಕ್ಕಂಬಯಲಾದ ನಡತೆ ನಿಮಗೆ ತೋರಲಿಲ್ಲವೆ? ತೋರುತಿದ್ದರೆ, ಹೊಟ್ಟೆಯಲ್ಲಿ ಹುಟ್ಟಿದ ಬಂಗಾರದಂಥ ಮಗುವನ್ನು ಆ ಮಸಣಕ್ಕಟ್ಟಲಿಕ್ಕೆ ಮನಸ್ಸು ಬರುತ್ತಿದ್ದಿಲ್ಲ.

**ರಾಮು:**—ನಾಣನು ಅವಳ ಮಗನಲ್ಲ; ನಾಗಪ್ಪಯ್ಯನ ಮೊದಲಿನ ಹೆಂಡತಿಯಲ್ಲಿ ಹುಟ್ಟಿದವನು.

**ಶಿವ:**—"ಗಾಯವೊತ್ತಟ್ಟು ಮದ್ದೊತ್ತಟ್ಟು" ಎಂಬಂತೆ ಮಾತಾಡುತ್ತೀರಲ್ಲ. ಅವನು ಯಾರ ಮಗನೇ ಆಗಲಿ. ನಮ್ಮಂಥ ಮನೆತನದವರು ಅಂಥ ಬಿಕಾರಿಗಳ ಬಂಧುತ್ವವನ್ನು ಬಳಸುವುದೆಂದರೇನು?

**ರಾಮು:**—ಅದೇನೋ ಹೌದು. ನೋಡು "ಮನೆಗಟ್ಟಿದವ ಬಲ್ಲ, ಮದುವೆ ಮಾಡಿದವ ಬಲ್ಲ." ಈಗಿನ ಸಮಯದಲ್ಲಿ ಊಟಕ್ಕಿರುವ ಮನೆಯೇ ಇಲ್ಲ.

**ಶಿವ**:—ಭಾವ, ಗಾದೆಯನ್ನು ಕಂಡಾಬಟ್ಟೆಯಲ್ಲಿ ನಡೆಯಿಸಬೇಡಿರಿ. ಮದುವೆ ಮಾಡುವುದರಲ್ಲಿ ಯಜಮಾನನಿಗಿರುವ ಜವಾಬುದಾರಿಕೆಯ ಮಹತ್ತ್ವನ್ನು ತಿಳಿಸುವ ಗಾದೆ ಅದು. ಏನು "ಊಟಕ್ಕಿರುವ ಮನೆ"ಗೆ ಮಗಳನ್ನು ಕೊಟ್ಟು ಬಿಡುವುದೆಂದು ನಿಮ್ಮೆಣಿಕೆಯೆ?

**ರಾಮು**:—ಅದೇನೂ ಅಲ್ಲ. ಆದರೆ ಅದೂ ಅವಶ್ಯವಾದುದಲ್ಲವೆ? ಕಿಟ್ಟಪ್ಪನು ಬರೆದಂತಿರುವ ನಾಡಾಡಿಯಾದವನಿಗೇ ಕೊಟ್ಟು ಬಿಡುವುದೆ?

**ಶಿವ**:—ಕಿಟ್ಟಪ್ಪನೂ ಆ ಹುಡುಗನೂ ಬಂದ ಮೇಲೆ ಆಲೋಚಿಸುವ ಅದನ್ನು. ನಿಮಗಿರುವುದು ಇಬ್ಬರೇ ಮಕ್ಕಳು. ಒಂದು ವೇಳೆ ಆ ಹುಡುಗನು, ಬಡತನದಿಂದಾಗಿ ಏಕಗುಣಮಾತ್ರಹೀನನಾಗಿದ್ದರೆ ಬಳುವಳಿಯಾಗಿ ಸ್ವಲ್ಪ ಮಟ್ಟಿಗೆ ಹೆಚ್ಚಿಗೆ ಕೊಟ್ಟು ಆ ಅಳಿಯನನ್ನೇಕೆ ಸರ್ವಗುಣಸಂಪನ್ನನನ್ನಾಗಿ ಮಾಡಬಾರದು.

**ರಾಮು**:—ಆಗಲಿ; ನಿಮ್ಮಲ್ಲೆಲ್ಲ ಕೇಳಿಕೊಳ್ಳದೆ ಈಚೆಯ ಕಡ್ಡಿಯನ್ನಾಚೆಗಾದರೂ ಇಡುವೆನೆ?

**ಶಿವ**:—ಇರಲಿ; ಭೀಮಯ್ಯನಿಂದಾದ ದಸ್ತೈವಜಿನ ತೀರ್ಪಿನ ಹಕ್ಕನ್ನು ನೀವು ಭೀಮಯ್ಯನ ಹೆಸರಲ್ಲಿ ಮೊನ್ನೆ ಮಾರ್ಪಡಿಸಿದ್ದಿರಂತೆ. ಅದೆಂದರೆ "ಕಡ್ಡಿ"ಗಿಂತಲೂ ಕಡೆಯೆಂದು ತೋರಿತೆ ನಿಮಗೆ?

**ರಾಮು**:—(ಕಳವಳಗೊಂಡು) ಯಾರು ಹೇಳಿದರು ಈ ಹಸಿ ಸುಳ್ಳನ್ನು?

**ಶಿವ**:—ಸುಳ್ಳು! "ಬರೆದು ಪೂರ್ತಿಯಾಗಿದೆ;" ಎಂದನು ಬರೆದ ಸಾಂತಪ್ಪನೇ.

**ರಾಮು**:—ಬರೆದಿಟ್ಟುದು ಹೌದು. ಆದರೆ ರಿಜಿಸ್ಟ್ರಿಯಾಗಲಿಲ್ಲ. ನಿಮಗೆಲ್ಲ ತಿಳಿಸದೆ ಮುಂದುವರಿಸುತ್ತೇನೆಯೆ?

**ಶಿವ**:—ಹುಂ, ಆಗಲಿ; ಆ ದಸ್ತೈವಜು ಯಾರಲ್ಲಿದೆ?

**ರಾಮು**:—ನಾಗಪ್ಪಯ್ಯನಲ್ಲಿದೆ. ಇದ್ದರೇನು? ರಿಜಿಸ್ಟ್ರಿಯಾಗಲಿಲ್ಲವಷ್ಟೆ.

**ಶಿವ:**—ನೀನು ರಿಜಿಸ್ಟ್ರಿಗೊಪ್ಪದಿದ್ದರೆ ಅವನು ಒತ್ತಾಯದಿಂದ ಮಾಡಿಸಿಕೊಳ್ಳುತ್ತಾನೆ. ಅದನ್ನು ಕೇಳಬೇಕೆಂಬ ಕುತೂಹಲವಾಗಲಿ, ಹಕ್ಕಾಗಲಿ ನನಗೇನೂ ಇಲ್ಲ. ಆದರೂ ಈ ವರೆಗಿನ ಬಳಕೆಯಿಂದ ಕೇಳಿ ಬಿಡುತ್ತೇನೆ. ಆ ನಾಗಪ್ಪಯ್ಯನಿಗೆ ಹಾಗೆ ಬರಕೊಡಲಿಕ್ಕೆ ಕಾರಣವೇನು?

**ರಾಮು:**—ಆಗಾಗ ಅವನಿಂದ ಕೈಕಡವಾಗಿ ತೆಗೆದುಕೊಂಡ ವ್ಯೆ ಸಾಲ ವಿಪರೀತವಾಗಿದೆ. ಅದನ್ನು ಸಲಿಸಬೇಡವೆ?

**ಶಿವ:**—ಹೌದು, ಸಲಿಸಬೇಕು. ಆದರೆ ಇಷ್ಟೊಂದು ಹುಟ್ಟುವಳಿ ಇರುವಾಗ ಸಾಲವಾದರೂ ಯಾಕೆ?

**ರಾಮು:**—ನೀನೂ ಹೀಗೆ ಕೇಳುವುದೆ? ಹುಡುಗನೊಬ್ಬನಿಗೇ ಸಲ್ಲು ತ್ತಿವೆ ವರ್ಷಕ್ಕೆ ಸಾವಿರದಂತೆ. ಮಾತ್ರವಲ್ಲ; ನಾಲ್ಕೈದು ವರ್ಷಗಳಿಂದ ಕಣ್ಣಿಗೆ ಕಾಣದ ಖರ್ಚಲ್ಲವೆ ಒದಗಿದುದು?

**ಶಿವ:**—ಅದೂ ಇರಲಿ, ಈ ನಾಗಪ್ಪನಿಗೆ ಅಷ್ಟು ಹಣವೆಲ್ಲಿಂದ? ಆರೆಂಟು ವರ್ಷಗಳ ಮೊದಲು ಅವನ ಕಯ್ಯಲ್ಲಿ ಕಾಸೂ ಇರಲಿಲ್ಲ.

**ರಾಮು:**—ಅದಕ್ಕೇನು ಮಾಡುವುದು ಶಿವ. ಅವರವರ ಯೋಗ್ಯತೆ ಯಂತೆ ಹಣವಾಗುತ್ತದೆ, ಹೋಗುತ್ತದೆ.

**ಶಿವ:**—ಆಗಲಿ; ಅವನಿಗೆ ಸಲಬೇಕಾಗಿದ್ದುದೆಷ್ಟು?

**ರಾಮು:**—ಎಂಟು ಸಾವಿರ?

**ಶಿವ:**—ಭೀಮಯ್ಯನವರಿಂದ ನಿಮಗಾದ ದಸ್ತೈವಜೀ ಹನ್ನೆರಡು ಸಾವಿರಕ್ಕೆ. ಆ ಮೇಲೆ ಅವರಿಂದ ಬಂದ ಬಡ್ಡಿಗೂ ಕೂಡಿ ನೀವು ವ್ಯಾಜ್ಯ ಮಾಡಿ ತೀರ್ಪಾಗಿದೆ ಕೋರ್ಟಿನಲ್ಲಿ. ಅಸಲು ಬಡ್ಡಿಗಳು ಕೋರ್ಟು ಖರ್ಚು ಎಲ್ಲ ಸೇರಿದರೆ ಸುಮಾರು ಹದಿನೆಂಟು ಸಾವಿರಕ್ಕೆ ಕಡಿಮೆ ಯಾಗಲಿಕ್ಕಿಲ್ಲವದು. ಈ ಎಂಟು ಸಾವಿರಕ್ಕೆ ಅದನ್ನು ಮೇಲು ಚೀಟುಗೊಡುವುದೆಂದರೇನು?

**ರಾಮು:**—ಅಲ್ಲ, ಜೌಳಿಅಂಗಡಿಗೆ ಸಲಬೇಕಾದುದನ್ನೂ ನಾಗ ಪ್ಪಯ್ಯನೇ ಕೊಡಬೇಕು. ಆ ಎಂಟು ಸಾವಿರದ ಬಡ್ಡಿಯೂ ಆಗ ಬೇಕವ ನಿಗೆ. ಅದನ್ನೆಲ್ಲ ಸರಿಯಾಗಿ ಲೆಕ್ಕ ಮಾಡಿದ್ದೇವೆ.

**ಶಿವ:**—ಆ ಮೇಲುಚೀಟು ದಸ್ತೈವಜಿನ ನಕಲಾದರೂ ಇದೆಯೋ ನಿಮ್ಮಲ್ಲಿ?

**ರಾಮು:**—ಇಲ್ಲ, ಅದು ರಿಜಿಸ್ಟ್ರಿಯೇ ಆಗಲಿಲ್ಲವಲ್ಲ.

**ಶಿವ:**—ಭಾವ, ನಿಮ್ಮ ಮಾತನ್ನು ಕೇಳಿದರೆ ನಗೆಯೂ ಕೋಪವೂ ಒಟ್ಟಿಗೆ ಬರುತ್ತಿವೆ. "ಪೆಟ್ಟಿಗೆ ಹೋದರೇನು? ಬೀಗದ ಕೈ ನನ್ನಲ್ಲಿದೆ" ಎಂದಂತೆಯೇ ಸರಿ ನಿಮ್ಮ ಮಾತು. ರಿಜಿಸ್ಟ್ರಿಯಾಗದಿದ್ದರೇನು? ಒಪ್ಪಿದ್ದರೆ ಅರ್ಜಿಗೊಟ್ಟು ರಿಜಿಸ್ಟ್ರಿ ಮಾಡಿಸಿಕೊಳ್ಳುತ್ತಾನವನು. ಅದಕ್ಕಾಗಿಯೆ ದಸ್ತೈವಜನ್ನು ನಿಮ್ಮಲ್ಲಿಡದೆ ತಾನೆ ಕೊಂಡುಹೋಗಿದ್ದಾನೆ. ಈ ಹೊತ್ತು ಇಲ್ಲಿ ಅವನಿಗಾದ ಮಂಗಳಾರತಿಯೂ ಮರುಳನ್ನು ಕೆಣಕಿದಂತಾಯಿತು.

**ರಾಮು:**—ಹಾಗೆಲ್ಲ ಮುಂದುವರಿದರೆ ನಾಳೆ ನಮ್ಮ ಮುಖವನ್ನು ನೋಡಬೇಡವೊ ಅವನಿಗೆ?

**ಶಿವ:**—ಅಯ್ಯೊ ಭಾವ, ನಿಮ್ಮ ಬೋಳುನಂಬುಗೆಯೆ! ಕಾಕಾಕ್ಷಿಗೆ ನೋಡಬೇಕಾದುದು ಮನುಷ್ಯರ ಮುಖವಲ್ಲ; ಹೆಣದಂತೆ ಅಶುಚಿಯಾದ ಹಣದ ಮುಖ. ಭೀಮಯ್ಯನವರಿಗಿಂತಲೂ ಹೆಚ್ಚೆ ನೀವು? ತಂದೆಗೆ ಹೊಡೆದ ಕೈ ತಾಯಿಗೂ.

ಹೀಗೆ ಒಂದು ಕಡೆಯಲ್ಲಿ ಶಿವರಾಯನ ಮಾತಿನ ಬಲೆ; ಮತ್ತೊಂದೆಡೆಯಲ್ಲಿ ಮೌನವಾಗಿ ನಿಂತು ಕಣ್ಣೀರೊಸರುತ್ತಿದ್ದ ಲಕ್ಷ್ಮಮ್ಮನ ನೆಡುನೋಟದ ಬೇಲಿ; ಅವುಗಳ ಎಡೆಯಲ್ಲಿ ಸಿಲುಕಿದ ಬೇಟೆಯ ಮೊಲದಂತಾಯಿತು ರಾಮಯ್ಯನ ಮನಸ್ಸು. ಆ ಇಟ್ಟೆಡೆಯಿಂದೊಮ್ಮೆ ತಪ್ಪಿಸಿಕೊಂಡರೆ ಸಾಕೆಂದಲ್ಲವೆ ಮೊಲದ ಎಣಿಕೆ? ಏನೇನೋ ಯತ್ನಿಸಿದನು. ಎಲ್ಲವೂ ಬಂಜೆಯಾಯಿತು. ಏನು ಹೇಳುವುದೆಂದರಿಯದೆ ಕಂಗಾಲಾದನು. ಅದು ಶಿವರಾಯನಿಗೆ ಗೊತ್ತಾಯಿತು.

**ಶಿವ:**—ಭಾವ, ಅಂಗಡಿಗೆ ಸಲುವ ಲೆಕ್ಕವನ್ನು ಮಾಡಿದರೂ ಹತ್ತು ಸಾವಿರಕ್ಕಿಂತ ಹೆಚ್ಚಾಗಲಿಲ್ಲವಂತೆ; ಉಳಿದ ಹಣಕ್ಕೆ ನೀವೇನೊ ಬೇರೆ ಕಾರಣವನ್ನು ಕಾಣಿಸಿದ್ದೀರಂತೆ.

**ರಾಮು:**—ಹೌದು.

**ಶಿವ:**—ಯಾವ ಕಾರಣವದು?

**ರಾಮು:**—ಹುಡುಗಿಗೆ ಬಳುವಳಿಯಾಗಿ ಕೊಡುವುದೆಂದು.

**ಲಕ್ಷ್ಮಿ:**—ಹಾಗಾದರೆ ನನ್ನ ಬಲಿಗೆ ತಯಾರಾಗಿದೆಯೆಂದಾಯಿತು. ಆಗಲಿ. ಈ ಮೈ ಹಾಗಾದರೂ ಸಫಲವಾಗಲಿ; ಕೀರ್ತಿ ಹಬ್ಬಲಿ.

**ರಾಮು:**—ಯಾಕೆ ನೀನು ಹಾಗೆಲ್ಲ ಹೇಳುತ್ತಿ. ಏನೋ ನನ್ನ ಬುದ್ಧಿಗೆ "ದೂರದ ಮಾವಿನ ಕಾಯಿಗಿಂತಲೂ ಹತ್ತಿರದ ಅಂಬಟೆಕಾಯಿಯೆ ವಾಸಿ" ಎಂದು ತೋರಿ ಹಾಗೆ ನಿರ್ಣಯಿಸಿದೆ. ನಿಮಗೆಲ್ಲ ಸಮ್ಮತವಲ್ಲದಿದ್ದರೆ "ಗುಡ್ಡೆಗೊಂದೆಳೆದರೆ ನೀರಿಗಿನ್ನೊಂದು" ಎಂಬ ತೊಡಕೇ ಬೇಡ. ನೀವೆ ನಿಶ್ಚಯಿಸಿರಿ. ಗಿಂಡಿಮುಗುಡಿನ ನೀರನ್ನೆರೆದು ಬಿಡುತ್ತೇನೆ.

**ಶಿವ:**—ನೀವು ಏನುಬೇಕಾದರೂ ಮಾಡಬಹುದು. ನನಗೇನೂ ಬೇಸರವಿಲ್ಲ. ಕಂಡುಹೇಳಿದ ದಾರಿಹೋಕನ ಮಾತೆಂದು ಭಾವಿಸಿಬಿಡಿರಿ ನನ್ನದನ್ನು. ಆದರೆ, ನಾಳೆ ನಾಗಪ್ಪಯ್ಯನು ಒತ್ತಾಯದಿಂದ ಆ ಮೇಲು ಚೀಟನ್ನು ರಿಜಿಸ್ತ್ರಿಮಾಡಿಸಿಕೊಂಡರೆ?

**ರಾಮು:**—ಅದರಿಂದಾಗಬಹುದಾದ ಹೊಲಸಿಗೆ ನಾನೆ ಪಂಚಕವ್ಯವನ್ನು ತಳಿದುಕೊಳ್ಳುತ್ತೇನೆ. ಅದಕ್ಕೂ ಒಪ್ಪದೆ ನೀನು ಹೀಗೆಲ್ಲ ಬೇಸರಗೊಂಡು ದೂರವಾದರೆ ನಾನೂ ಮನೆಯನ್ನು ಬಿಟ್ಟುಬಿಡುತ್ತೇನೆ. ನಾಲ್ಕು ದಿಕ್ಕೂ ಇದೆ; ನಾನೂ ಇದ್ದೇನೆ.

**ಶಿವ:**—ಅಂತೂ ಮಾಡಿದುದು ಅವಿಚಾರದ ಕೆಲಸವೆಂದು ನಿಮಗಿನ್ನೂ ತೋರಲಿಲ್ಲ?

**ರಾಮು:**—ತೋರಿದರೇನು ಮಾಡುವುದು?

**ಶಿವ:**—ಹಾಗಾದರೆ ನಾನು ಹೇಳುವ ಮಾತನ್ನು ಕೇಳಿರಿ. ನಮ್ಮ ಲಕ್ಷ್ಮಮ್ಮನ ಅಣ್ಣ ಗೋವಿಂದಯ್ಯನವರೆಂದರೆ ಬಹಳ ಬುದ್ಧಿವಂತರು. ಅವರ ಆಲೋಚನೆಯ ಬೆನ್ನಿಗೂ ಕಣ್ಣಿದೆ. ನಿಮ್ಮ ಕೈಹಿಡಿದ ಈ ಲಕ್ಷ್ಮಿಯೆಂದರೆ ನಿಜವಾಗಿಯೂ ಭಾಗ್ಯಲಕ್ಷ್ಮಿ. "ಹಿತ್ತಿಲಗಿಡು ಮದ್ದಲ್ಲ"ವೆಂದು ಈ ವರೆಗೆ ಭಾವಿಸಿದ ಭಾವನೆಯನ್ನು ಬಿಟ್ಟುಬಿಡಿರಿ. ಕಿಟ್ಟಪ್ಪನಾದರೂ

ಎಲ್ಲ ಹುಡುಗರಂತಲ್ಲ. ಇವರಲ್ಲೆಲ್ಲ ವಿಚಾರಿಸಿಕೊಳ್ಳದೆ ಯಾವ ಹೊಸ ವಿಷಯದಲ್ಲಿಯೂ ಕೈಹಾಕಬೇಡಿರಿ. ಆ ಮೇಲೆ ಬೇಕಾದರೆ ನಾನೂ ಇದ್ದೇನಲ್ಲ.

**ರಾಮು:**—ಆಗಲಿ; ಖಂಡಿತವಾಗಿಯೂ ಹಾಗೇ ಮಾಡುತ್ತೇನೆ. ಆದರೆ, ಈ ದಸ್ತೈವಜನ್ನು ರಿಜಿಸ್ಟ್ರಿಮಾಡಬೇಕೆಂದು ನಾಗಪ್ಪನು ಹೇಳಿದರೆ?

**ಶಿವ:**—ನಿಮ್ಮ ಮನಸ್ಸೊಂದು ದೃಢವಾಗಿದ್ದರೆ ಸಾಕೀಗ. ಉಳಿದುದನ್ನೆಲ್ಲ ನೋಡಿಕೊಳ್ಳುವ.

**ಲಕ್ಷ್ಮಿ:**—"ಅಣ್ಣ, ನನ್ನಣ್ಣನಿಗೆ ಇಲ್ಲಿಯ ವಿಷಯಗಳಿಗೆಲ್ಲ ಕಣ್ಣಿಟ್ಟುಕೊಳ್ಳಲಿಕ್ಕೆ ಪುರುಸತ್ತೂ ಆಗಲಿಕ್ಕಿಲ್ಲ; ಒಮ್ಮೆ ಅವನ ಮನಸ್ಸೊಲ್ಲೆರೆಯಾದರೆ ಆ ಮೇಲೆ ನೆಟ್ಟಗಾಗುವುದೂ ಅಸಾಧ್ಯ. ನೀನೇನು ಹೇಳಿದರೂ ಇಷ್ಟು ದೊಡ್ಡ ಮನೆಯ ವಿಚಾರ ನನಗೇನು ಗೊತ್ತಾದೀತು? ನೀನು ಸ್ವಲ್ಪ ಕಣ್ಣಿಟ್ಟುಕೊಂಡಿದ್ದರೆ ಮಕ್ಕಳ ಮೇಲೆ ಕನಿಕರವಿಟ್ಟಂತಾದೀತು" ಎನ್ನುತ್ತಾ ಅತ್ತಳು.

**ಶಿವ:**—ಲಕ್ಷ್ಮಿ, ಅಳಬೇಡ. ನಿನ್ನ ತಲೆಯಲ್ಲಿ ಅಂಥ ಅವಲಕ್ಷಣವನ್ನೇನೂ ಬರೆದಿರಲಿಕ್ಕಿಲ್ಲ ಬ್ರಹ್ಮ. ನನ್ನ ವಿಷಯದಲ್ಲಿ ನಿನಗಾವ ಸಂದೇಹವೂ ಬೇಡ.

**ಲಕ್ಷ್ಮಿ:**—ಆಯಿತು; ಅದೇ ನಮ್ಮ ಪುಣ್ಯ.

**ಶಿವ:**—ನೋಡಮ್ಮ ದೈವದ ಆಟವನ್ನು. ಮನೆಯಲ್ಲಿದ್ದರೆ ಆ ಅಕ್ಕಮಕ್ಕಳ ಅವಸ್ಥೆಯನ್ನು ಕಂಡು ಎದೆ ಕರಗಿ ನೀರಾಗುತ್ತದೆ. ಇಲ್ಲಿ ಬಂದರೆ ನಿಮ್ಮನ್ನು ನೋಡಿ ಮನ ಮರುಗುತ್ತಿದೆ. ಅದು ಇಲ್ಲದ ಕಷ್ಟ; ಇದು ಇರುವ ಕಷ್ಟ. ಕೆಲವರು ಹೊಟ್ಟೆಗಿಲ್ಲದೆ "ಅಯ್ಯೋ"ಯೆಂದರೆ ಕೆಲವರು ಅಜೀರ್ಣವಾಗಿ "ಅಯ್ಯೋ" ಎನ್ನುತ್ತಾರೆ. ಫಲವೆರಡೂ ಒಂದೇ. ಇದನ್ನು ಕಾಣುತ್ತಿದ್ದರೂ ಈ ನ್ಯೂನಾಧಿಕ್ಯಗಳನ್ನು ಸರಿಗೊಳಿಸಿ ಸುಖವಾಗಿರುವ, ಎಂಬೆಣಿಕೆ ಮನುಷ್ಯರಾದ ನಮಗೆ ತೋರುವುದಿಲ್ಲ. ಇದನ್ನೆಲ್ಲ ನೋಡಿ ಭಾವಿಸಿ ಬನ್ನಬಡುತ್ತಿರುವ ನಾನು ಎಂಥ ಪುಣ್ಯಾತ್ಮನಾಗಿರಬೇಕೋ ಆ ದೇವರೇ ಬಲ್ಲ.

**ಲಕ್ಷ್ಮಿ**:—ಹಾಗೆ ಭಾವಿಸಿ ಮರುಗುವ ಪುಣ್ಯವು ನಿನ್ನಂಥ ಪುಣ್ಯವಂತನಿಗೇ ಒದಗುತ್ತದೆ; ಕಲ್ಲೆದೆಯಿಂದ ಆ ರಸವೊಸರಲಿಕ್ಕಿದೆಯೆ? ತಾಗಿದ ಬೆರಳಿಗೇ ತಾಗುವುದೆನ್ನುವುದು ತಪ್ಪಲ್ಲ. ಹಾಗೆ ತಾಗದಂತಾಗ ಬೇಕಾದರೆ ನಡೆಯದಿರಬೇಕು.

**ಶಿವ**:—"ಮಾಡುವುದೇನು? ಕಾಲಿರುವಾಗ ನಡೆಯಬೇಕಾಗುತ್ತದೆ" ಎಂದು ನಕ್ಕನು.

**ಲಕ್ಷ್ಮಿ**:—"ಹಾಗೆ ಬೆರಳಿಗೆ ತಾಗುವುದೆಂದು ಹೆದರಿ ಮಲಗಿಯೇ ಬಿಡುವ ಎಣಿಕೆಯುಂಟಾಗಲಿಲ್ಲವಷ್ಟೆ ನಿನಗೆ." ಎನ್ನುವಾಗ ಅವಳ ಅಳು ಮೊಗದೆಡೆಯಲ್ಲಿಯೂ ನಸುನಗೆ ಹೊಳೆಯಿತು. ಅದು ಮೋಡ ಮುಸುಕಿದ ಬಾನಿನಲ್ಲಿ ಹೊಳೆದ ಒಂದು ನಕ್ಷತ್ರದಂತಾಯಿತು.

ಸಂದರ್ಭವು ಮೆಲ್ಲನೆ ಆನಂದಪರ್ಯವಸಾಯಿಯಾಗುವ ಲಕ್ಷಣದಂತೆ ತೋರಿತು ರಾಮಯ್ಯನಿಗೆ. ಅಷ್ಟಾದರೆ ಸಾಕೆಂದು ಮನಸ್ಸಿನಲ್ಲೆ ಹರಕೆ ಹೊರುತ್ತಿದ್ದವನು ಆ ಬದಲಾವಣೆಯನ್ನು ನೋಡಿದನು. "ಅಯ್ಯಬ್ಬ. ಬದುಕಿದೆ!! ತಲೆಯ ಹೊರೆ ಹೆಗಲಿಗಿಳಿಯಿತು" ಎಂದುಕೊಂಡನು. ಆಗ ಮಾಳಿಗೆಯಿಂದ "ಅವ್ವಾ, ಹನ್ನೆರಡು ಗಂಟೆಯಾಯಿತು." ಎಂಬ ಮಾತೂ ಕೇಳಿತು.

**ಶಿವ**:—ಯಾರದು, ಬಾಗಿಯೊ?

"ಹೌದು, ಗುರುತು ಸಿಕ್ಕಲಿಲ್ಲವೆ?"

**ಶಿವ**:—ಹುಂ, ಸಿಕ್ಕಿತೀಗ.

"ಮಾತಿನ ವೈ ಅದೇನು ಒರೆ?"

**ಶಿವ**:—ಮತ್ತೇನೂ ಇಲ್ಲ. ಗುರುತು ಸಿಕ್ಕದಂತೆಯೂ ಆಗಿಬಿಡುವುದೋ ಎಂಬ ಸಂದೇಹದಿಂದ ಹಾಗಾಯಿತು.

"ನಿಮಗೆ ಹುಚ್ಚು. ಅದರಿಂದಲೆ ಅಂಥ ಸಂದೇಹ."

**ಶಿವ**:—ನಿನಗಿನ್ನೂ ತಿಳಿಯದು. ಮನುಷ್ಯರಾದವರಿಗೆ ಅಂಥ ಸಂಶಯವೊದಗುವುದು ಆಶ್ಚರ್ಯವಲ್ಲ. ಸಂಶಯವುಂಟಾದಾಗ ಮನುಷ್ಯನೆ ಬೇರೆಯಾಗಿಬಿಡುತ್ತಾನೆ.

"ನನ್ನ ಸ್ಥಿತಿ ಹಾಗಲ್ಲ."

**ಶಿವ:**—ಮತ್ತೆ?

"ಯಾವಾಗಲೂ ನಾನು ನಾನೆ."

**ಶಿವ:**—ಹಾಗಾದರೆ ನಾವೆಲ್ಲ ನಿನಗೆ ಸೋತೆವು.

"ಲಾಭವೇನು? ನಾನು ಗೆದ್ದರೂ ನೀವೇ ಗೆದ್ದಂತೆಯಲ್ಲವೆ?"

ಈ ಮಾತನ್ನು ಕೇಳಿ ಶಿವರಾಯನು ಲಕ್ಷ್ಮಮ್ಮನ ಮೋರೆಯನ್ನು ನೋಡಿದನು. ಆಕೆ ನಸುನಕ್ಕಳು. ರಾಮಯ್ಯನ ಮೊಗದಿಂದಲೂ ನಗೆಯೊಂದು ಜಗುಳಿತು. ಆ ಮಾತುಕತೆಯ ಹುರುಳು ಒಳಹೊಕ್ಕು ತೋರಡಿಸಿದ ನಗೆಯಲ್ಲವದು. "ಪರಿಸೆಯೊಟ್ಟಿಗೆ ಗೋವಿಂದ" ಎನ್ನುವಂತೆ ಹೊರಟ ನಗೆ. ಇರಲಿ; ಹದಿನಾಲ್ಕೇ ವಯಸ್ಸಿನ ಆ ಹುಡುಗಿಯ ಬಾಯಿಂದ ಅಂಥ ಅರ್ಥವತ್ತಾದ ಮಾತು ಹೊರಡುವುದು ಅಸ್ವಾಭಾವಿಕವಲ್ಲವೆ? ಎಂದು ಯಾರಾದರೂ ಭಾವಿಸಬಹುದು. ಆದರೆ ನಿಜ ಸ್ಥಿತಿ ಹಾಗಲ್ಲ. ಸಾಮಾನ್ಯವಾಗಿ ಹುಡುಗರದಕ್ಕಿಂತ ಮೊದಲೆ ಹುಡುಗಿಯರ ಬುದ್ಧಿ ಬಳೆಯುತ್ತಿದೆ. ಮಿಡಿ ಹಣ್ಣಾಗಿ ಪರಿಮಳಿಸಿದರೆ, ಹೂ ಮುಗುಳಿನಲ್ಲೆ ಮಗಮಗಿಸುವುದಲ್ಲವೆ? ಇದಂತೂ ವಿಶೇಷವಾದೊಂದು ದೃಷ್ಟಾಂತ. ಮೊದಲೆ ಲಕ್ಷ್ಮಮ್ಮನ ಮಗಳು; ಅವಳ ಆರೈಕೆಯಲ್ಲಿ ಬಳೆದು ನಡತೆಕಲಿಕೆಗಳ ಹಜ್ಜೆಯಲ್ಲಿ ಹಜ್ಜೆಯಿಟ್ಟವಳು; ವಿಶಿಷ್ಟವಾದ ಬುದ್ಧಿಬಲವಿರುವವಳು; ಎಂದ ಮೇಲೆ ಹೆಚ್ಚೇನೂ ಹೇಳಬೇಕಾಗಿಲ್ಲ.

ಅಷ್ಟರಲ್ಲಿ "ಹೊತ್ತಾಯಿತು" ಎಂದನು ರಾಮಯ್ಯ. ನಗುತ್ತಾ "ಹೊತ್ತು ಆದರೆ, ಇಳಿಸಿಬಿಡಿರಿ" ಎಂದನು ಶಿವರಾಯ. "ಯಾವುದನ್ನು?" ಎಂದು ಕೇಳಿದನು ಮೊದಲಿನವನು. "ಹೊತ್ತ ಹೊರೆಯನ್ನು" ಎಂದನು ಮತ್ತಿನವನು. "ಹೋ ಹ್ಹುಂ" ಎಂಬುದಾಗಿ ದೊಡ್ಡದಾದ ಜಳ್ಳುನಗೆಯೊಂದು ಉರುಳಿತು ಅವನ ಮುಖದಿಂದ. ಅದವನ ಸ್ವಾಭಾವಿಕವಾದ ನಗೆ. ಇಬ್ಬರೂ ಸ್ನಾನಕ್ಕೆ ಹೊರಟುಹೋದರು.

---

೪

ಹಗಲಿರುಳುಗಳ ಮಲ್ಲಯುದ್ಧವು ನಡೆಯುತ್ತಲೆ ಇದೆ. ಒಮ್ಮೆ ಒಂದು ಅಡಿಯಲ್ಲಿ ಬಿದ್ದರೆ ಮತ್ತೊಮ್ಮೆ ಅದೆ ಮೇಲೇರಿ ಕುಳಿತುಕೊಳ್ಳು ತ್ತಿದೆ; ತಲೆಯೆತ್ತಿ ತನ್ನ ಕಯ್ಯನ್ನೂರಲ್ಲೆಲ್ಲ ಹರಡುತ್ತಿದೆ. ಒಮ್ಮೆ ಬೀಳುವು ದೆಂದರೆ ಇನ್ನೊಮ್ಮೆ ಏಳುವುದರ ಪೂರ್ವರೂಪ. ಈ ಹಗಲಿರುಳು ಗಳೆಂದರೆ ಸರ್ವಾಧಾರನಾದ ಕಾಲಪುರುಷನ ಮಕ್ಕಳು. ಇಲ್ಲಿ ಆ ಹೋರಾಟದಲ್ಲಿ ಬಿದ್ದುಹೋದುದನ್ನು ಭೂತವೆನ್ನುತ್ತಾರೆ. "ಆ ಭೂತವೆ ಪುನಃ ಜೀವಂತವಾಗಿ ತಲೆದೋರುವುದುಂಟೆ?" ಎಂದು ಆಕ್ಷೇಪಿಸಬಹುದು ಕೆಲವರು. ಆದರೆ, ಬಿದ್ದುದನ್ನು ತಂದೆಯೆಂದರೆ ಏಳುವ ಭವಿಷ್ಯತ್ಕಾಲ ವನ್ನು ಮಗನೆನ್ನಬೇಕು; ತಂದೆಯೆ ಮಗನಾಗಿ ಜನಿಸುವುದೆಂದಲ್ಲವೆ ಹಿರಿ ಯರ ಹೇಳಿಕೆ?

ಆದರೆ, ದೃಷ್ಟಿಭೇದದಿಂದಾಗಿ ಒಂದೇ ನೋಟವು ಹಲವು ತರದಲ್ಲಿ ಕಂಗೊಳಿಸುವುದುಂಟು. ಅದರಿಂದ ಕೆಲವರ ಹೇಳಿಕೆ ಹೀಗೆ. ತಂಗಾ ಳಿಯ ಮೇಳ; ಬಳ್ಳಿಗಳ ನಾಟ್ಯ; ಚಿಗುರೆಲೆಗಳ ಅಭಿನಯ; ಗಿಡುಮರ ಗಳ ಶಿರಃ ಕಂಪ; ಇವುಗಳಿಂದೊಡವೆರೆದ ಹಗಲಿನ ದಿಬ್ಬಣವು ಪಡುಗಡೆಗೆ ಸಾಗಿತು; ದಿಬ್ಬಣದ ಮುಂದಾಳಾದ ಸೂರ್ಯನು ಹಂದರದೊಳಹೊಕ್ಕನು. ನೆರೆದ ನಕ್ಷತ್ರಗಳ ಮೋರೆಯಲ್ಲಿ ನಸುನಗೆ ತುಳುಕುತ್ತಿತ್ತು. ನಿಯಮಿತ ಮುಹೂರ್ತದಲ್ಲಿ ಹಗಲಿರುಳುಗಳೆಂಬ ವಧೂವರರು ಕರಗ್ರಹಣದಿಂದ ಒಂದಾದರು. ಇದೇ ಮುಚ್ಚಂಜೆಯೆಂದು ಹೊಸಬರ ಮಾತು.

ಹೇಗೂ ಇರಲಿ; ಸಂಧ್ಯಾಕಾಲವಾಯಿತು. ಮಂಜೇಶ್ವರದಿಂದ ಹೊರಟ ಬಸ್ಸೊಂದು ಬಂದು ನಿಂತಿತು, ರಾಮಯ್ಯನ ತೋಟದ ಬಡ ಗಣ ಬೀದಿಯಲ್ಲಿ. ಸರಿಹರಯದ ಮೂರು ಮಂದಿ ಯುವಕರು ಇಳಿದೊಡನೆಯೆ ಆ ಬಸ್ಸು ಭುಸ್ಸೆಂದು ದಾರಿಹಿಡಿಯಿತು. ಕತ್ತಲೆ ಕವಿಯತೊಡಗಿತ್ತು. ವಿದ್ಯುದ್ದೀಪವನ್ನು ಬೀರಿ ಯುವಕನೊಬ್ಬನು ಮುಂದಾದನು. ಉಳಿದಿಬ್ಬರು ಹಿಂಬಾಲಿಸಿದರು. ತಪ್ಪಲನ್ನಿಳಿದರು, ಹಾಡಿಯನ್ನು ಸುತ್ತಿದರು; ಬೆಟ್ಟುಗದ್ದೆಯನ್ನು ದಾಟಿದರು.

"ಇದೇನು ಕೃಷ್ಣರಾಯರೆ, ಬಸ್ಸಿಳಿದ ಮೇಲೆ ಮನೆಗೆ ಬಹಳ ಹತ್ತಿರ ವೆಂದಿರಲ್ಲ? ಕೃಷ್ಣ: "ಹೌದು ಆಚಾರ್ಯರೆ, ಹತ್ತಿರವೆ. ಒಂದಿಷ್ಟು ಮುಂದುವರಿದ ಕೂಡಲೆ ಮನೆ ಕಾಣುವುದು."

**ಆಚಾರ್ಯ:**—ಅಂಗಳಕ್ಕೆ ಹೋದೊಡನೆ ಮನೆ ಕಾಣುವುದು ಎಂದ ಲ್ಲವೆ ನಿಮ್ಮ ಹೇಳಿಕೆ?

**ಕೃಷ್ಣ:**—ಓಹೋ, ಗೊತ್ತಾಯಿತು. ಹೊಟ್ಟೆಯ "ಇಂಜಿನ್" ಆರಿಹೋಗುತ್ತಾ ಬಂದಿದೆ. ಅದೇ ಹೀಗೆ ಚಿರಿಚಿರಿಗುಟ್ಟಲಿಕ್ಕೆ ಕಾರಣ. ಹೆದರಬೇಡಿರಿ. ಸ್ಟೇಶನ್ ಹತ್ತಿರವಾಯಿತು. ಈಗ ನೀರೆರೆಯಬಹುದು.

**ಆಚಾರ್ಯ:**—ಹುಂ, ಗೊತ್ತಾಯಿತಲ್ಲ ನಿಮಗೆ? ಆದರೆ ಮನೆಗೆ ಹೋದ ಮೇಲೆ "ಅವರಿಂಥವರು, ಇವರಂಥವರು" ಎನ್ನುತ್ತಾ ಕಾಲಹರಣ ಮಾಡಬೇಡಿರಿ.

**ಕೃಷ್ಣ:**—ಅದೇನಾಚಾರ್ಯರೆ ಅಷ್ಟೊಂದು ಬಾಯಾರಿಕೆ?

**ಆಚಾರ್ಯ:**—ಬಾಯಾರಿಕೆ ಮಾತ್ರವೆಂದು ಹೇಳಿ ಮತ್ತಿನದಕ್ಕೆ ಸೊನ್ನೆ ಸುತ್ತಿಬಿಡುವ ಆಲೋಚನೆ ಮಾಡುತ್ತೀರೇನು?

**ಕೃಷ್ಣ:**—ಇಲ್ಲ; ಹಸಿವೆಯೂ ಏರಿಬಿಟ್ಟಿದೆಯಲ್ಲವೆ?

**ಆಚಾರ್ಯ:**—ಏರುವುದಿಲ್ಲವೆ ಮತ್ತೆ? ಬಂದ ಮೈಲೆಷ್ಟಾಯಿತು ಲೆಕ್ಕಮಾಡಿರಿ. "ಇಂಜಿನಿ"ನಲ್ಲಿ ತುರುಕಿದುದೆಲ್ಲ ಯಾವಾಗಲೆ ಭಸ್ಮವಾಗಿ ಬಿಟ್ಟಿದೆ.

**ಕೃಷ್ಣ:**—ಅದೇನಯ್ಯ, ಅಷ್ಟೊಂದು ಆಯಾಸ? ಎರಡು ಹಜ್ಜೆ ಯಾದರೂ ನಡೆದುದೆಂದರೆ ಈಗಲೆ. ನಮಗಿಬ್ಬರಿಗೂ ಅಂಥ ಆಯಾಸ ವಿಲ್ಲವಲ್ಲ.

**ಆಚಾರ್ಯ:**—ನಡೆಯದಿದ್ದರೇನು? ಬಿಸಿಲಿಗೆ ಹೊರಟು ಅಲ್ಲಿಂದಿಲ್ಲಿ ವರೆಗೆ ಬರುವುದೆಂದರೆ ಸಾಮಾನ್ಯವೆ? ಒಲೆಯಲ್ಲಿಟ್ಟ ಹಾಲಳಗೆ ಎಲ್ಲಿಗೂ ಹೋಗದೆ ಆರಿಹೋಗುವಂತೆ ಆಗಿದೆ ನನ್ನ ಹೊಟ್ಟೆ. ನನ್ನಷ್ಟೆ ದಣಿವಾಗಿ ದ್ದರೂ ನಿಮ್ಮಿಬ್ಬರ ವಿಷಯವೆಂದರೆ ಹಾಗಲ್ಲ.

**ಕೃಷ್ಣ**:—ಮತ್ತೆ ಹೇಗೆ?

**ಆಚಾರ್ಯ**:—ನಿಮಗಾದರೆ ನಿಮ್ಮದೇ ಮನೆ. ಮತ್ತೆ ಶಾಸ್ತ್ರಿಗಳಿಗೆ. ಹುಂ, ಆ ವಿಷಯವೆ ಬೇರೆ.

"ಬೇರೆ, ಎಂದರೆ?"

**ಆಚಾರ್ಯ**:—ಯಾರದು ಶಾಸ್ತ್ರಿಗಳೊ? ಹುಂ ಬೇರೆ ಎಂದರೂ ಗೊತ್ತಾಗುವುದಿಲ್ಲವೆ? ಗೊತ್ತಾಗದಿದ್ದರೆ ಹೇಳಿ ತಿಳಿಸುವುದು ಅಸಾಧ್ಯವದನ್ನು. ತನ್ನಿಂದ ತಾನೆ ಗೊತ್ತಾಗಬಹುದು.

**ನೀಲಕಂಠ**:—ರಾಯರೆ, ದೀಪತೋರುತ್ತಿದೆಯಲ್ಲ. ಅದು ನಿಮ್ಮಲ್ಲಿಂದಲೆ ಅಲ್ಲವೆ?

**ಕೃಷ್ಣ**:—ಹೌದು.

**ಆಚಾರ್ಯ**:—"ಆ ವಿಷಯವೆ ಬೇರೆ" ಎಂದುದರ ಗುಟ್ಟು ಗೊತ್ತಾಯಿತಷ್ಟೆ. ನಿಮ್ಮಲ್ಲಿಯ ದೀಪವು ನಿಮಗಿಂತಲೂ ಮೊದಲು ಶಾಸ್ತ್ರಿಗಳಿಗೆ ತೋರುತ್ತಿದೆ.

**ನೀಲ**:—ನಿಮ್ಮ ಮಾತಿನ ಬಲೆಯಲ್ಲಿ ಸಿಲುಕಿಹೋದ ಕಾರಣ ರಾಯರಿಗೆ ಮೊದಲು ದೀಪವು ತೋರದಿದ್ದಿರಬಹುದು.

**ಆಚಾರ್ಯ**:—ಹೌದು. ನಾವಿಬ್ಬರೂ ಮಾತಿನ ಮರುಳರು. ನೀವು ಕಾರ್ಯಜಾಣರು.

ಅಷ್ಟರಲ್ಲಿ ಮನೆಯ ಮೂಡಣಬೆಟ್ಟು ಗದ್ದೆಗೆ ಬಂದರು. ಚಾವಡಿಯ ದೀಪದ ನಗೆ; ಮಾಳಿಗೆಯಲ್ಲಿ ಗಿಳಿವಾಗಿಲ ನಲ್ನೋಟ; ಒಳಗಣಿಂದೆದ್ದು ಮೆಲ್ಲಡಿಯಿಟ್ಟು ಬರುತ್ತಿರುವ ಹಾಡು; ಒಂದರೊಡನೆ ಇನ್ನೊಂದಾಗಿ ತಲೆದೋರಿದುವು.

**ರಾಗ—ಶಹನ ಆಟ ಛಾಪು**

**ಏನಿದ್ದರೇನಾಯ್ತು—ಮನದ ಮಂದಿರದಲ್ಲಿ**
**ತಾನೆಂಬ ನಲ್ಮೆಯೊಂ—ದಿಲ್ಲದೊಡೆ ॥**
**ಮಾನವ ಸಂಸಾರ—ಕೆಲಿ ನೋಡಿದರು ಆ**
**ಹೀನವಾಹಾ ಬಂದ—ಣಿಕೆ ಸುತ್ತದುಡ ಕಾಣೆ ॥ ೦ ॥**

ಸರ್ವಸದ್ಗುಣದೆ ಸಂ— ಪೂರ್ಣಳಾದಾ ಸೀತೆ
ಸರ್ವಾತ್ಮಕನ ಕಯ್ಪಿ— ಡಿದರೇನಾಯ್ತು ॥
ಉರ್ವಿಯುಳಿದು ಕಾಡಿ— ಗಯ್ದು ಗಾಣಕೆ ಕೊಟ್ಟ
ಕರ್ವಿನಂದದಿ ಕಡೆ— ವರೆಗೆ ಸೊಪ್ಪಾಗಳೆ ॥ ೨ ॥

ಎನ್ನುವರ್ಬಗೆ ಗುರು— ಡದು ನೋಡೆ ನೆಲಕೆಲ್ಲ
ನನ್ನಿನಲ್ಮೆಗಳ ರ— ಸದ ಹೊನಲಂ ।
ತನ್ನೆದೆಯಿಂ ಸವಿ— ಯಿಸಿದಾ ಸವಿಯನ್ನು
ಪುಣ್ಯವತಿಯರನ್ನ— ರಾರಿಳೆಗಿತ್ತರು. ॥ ೩ ॥

ಸವಿಯೆಂದು ಕೆಲರು ಕ— ಣ್ಮುಚ್ಚಿ ಹಾಲ್ಕುಡಿವರು
ಸವಿಯ ನಾಲಗೆಯೊಂದ— ರೊಳೆ ಕಾಂಬರು ॥
ಅವಿವೇಕಿಗಳ ಸವಿ— ಸವಿಯಲ್ಲ ಕಹಿಯದು
ಸವಿಪಳಗಿದ ಬಗೆ— ಯೊಳೆ ಬೆಳೆವಡೆವುದು ॥ ೪ ॥

ಮನವೆ ನಿನ್ನಯ ಕೊಂಕು— ತನವನ್ನು ಬಿಡುಬಿಡು
ಇನಿಯ ಸಕ್ಕರೆಯೆಂದು— ಪ್ಪನು ನಕ್ಕದೆ ॥
ಕ್ಷಣಿಕ ಮರುಳ್ಮಾಳ್ಪ— ಬರಿಯ ಬಣ್ಣಗಳೆಲ್ಲ
ಎಣಿಕೆಯಿಲ್ಲದ ಬಲೆ— ಯೊಳೆ ಸಿಲ್ಕಿಪುವು ಜೋಕೆ ॥ ೫ ॥

ಒಂದಲ್ಲವೊಂದು ದಿ— ನಕೆ ಬಿಗಿವಿಡಿದರೆ
ಬಂದು ಮುದ್ದಿಸುವುದಾ— ಸವಿ ನಿನ್ನನು ॥
ಮುಂದುಗಡಾ ಸವಿ— ಕಹಿಯುಳಿದದನೆ ನೀ
ನೊಂದುತಮೃತವುಂಬೆ— ಸವಿಯೆಂಬೆ ಸೊಗಗಾಂಬೆ ॥ ೬ ॥

ಅವಾಗಲೊದಗುವು— ದೆನುತ ಕುದಿಯದಿರು
ನೋವೇ ಸವಿಯ ತಡೆ— ಯುವ ಸೇತುವೆ ॥
ಬಹಾಗ ಬಪ್ಪುದ— ದರ ಗೊಡವೆಯ ಬಿಡು
ಬೇಹಿಗ ತಿರುಮಲ— ನಡಿಗಳಡಿಗನಾಗು ॥ ೭ ॥

ಬೆಟ್ಟುಗದ್ದೆಯಿಂದ ಕೆಳಗಿನ ಬಯಲುಗದ್ದೆಗಿಳಿದಿದ್ದರು ಆ ಸಮಯದಲ್ಲಿ. ಮುಂದೆ ನಡೆಯುತ್ತಿದ್ದ ಕೃಷ್ಣನು "ಆಚಾರ್ಯರೆ" ಎಂದನು. ಹುಂಗುಟ್ಟಲಿಲ್ಲ. ತಿರುಗಿ ನೋಡಿದನು. ಯಾರೂ ಇರಲಿಲ್ಲ. ಹಿಂದಿರುಗಿ ಹೋದನು. ಇಬ್ಬರೂ ನಿಂತುಕೊಂಡಿದ್ದರು. "ಏನಾಚಾರ್ಯರೆ, ಮುಂದೆ ನಡೆದು ಬಿಟ್ಟೆ. ದಾರಿ ತೋರಲಿಲ್ಲವೆ?" ಎಂದು ಕೇಳಿದನು.

**ಆಚಾರ್ಯ**:—ಅದೇನೂ ಇಲ್ಲ. ಕಿವಿ ಹಾಡನ್ನು ಇದಿರ್ಗೊಳ್ಳು ವಾಗ ಕಾಲು ನಿಂತಲ್ಲೆ ಆಯಿತು. ಅಷ್ಟೆ.

**ಕೃಷ್ಣ**:—ಸಂಗೀತದ ತಿರುಳನ್ನುಂಡ ನೀವಿಬ್ಬರೂ ಕಿವಿಗೊಡುವಷ್ಟು ಹುರುಳು ಈ ಹಳ್ಳಿಯ ಹಾಡಿನಲ್ಲಿದೆಯೆ?

**ಆಚಾರ್ಯ**:—ಚೆನ್ನಾಯಿತು! ಇಂಥ ಹಳ್ಳಿಯ ಹಾಡಿನ ಹೊಲಬನ್ನ ರಿಯಲಿಕ್ಕೆಂದೆ ಕೆಲಬರು ಊರೂರು ಸುತ್ತುವುದು; ಹತ್ತು ಹದಿನಯ್ದು ವರ್ಷಗಳವರೆಗೆ ತಪಸ್ಸುಮಾಡುವುದು; ಮಾಡಿಯೂ ವಿಫಲರಾಗುವುದು.

**ಕೃಷ್ಣ**:—ಹಾಗೆಂದರೇನು?

**ಆಚಾರ್ಯ**:—ಹಾಗೆಂದರೆ ಹಾಗೆಯೆ. ಕಲಿತರೆ ಬರುವುದಲ್ಲ ಈ ಬಾಣಿ. ಕಲಿತವರೊಳಗೂ ಬಂದ ನೀರು ಇದ್ದ ನೀರನ್ನು ಕೊಚ್ಚಿಕೊಂಡು ಹೋದವರೆ ಹಲಬರು. ಬಂದ ನೀರಿಲ್ಲದಿದ್ದರೂ ಇದ್ದ ನೀರಿದು ಬಟ್ಟ ಬೇಸಗೆಯಲ್ಲಿಯೂ ಬತ್ತುವುದಲ್ಲ. ಇದರ ಸವಿಯನ್ನು ಬಲ್ಲವರೇ ಬಲ್ಲರು. ಬೇಕಾದರೆ ಕೇಳಿರಿ ಶಾಸ್ತ್ರಿಗಳನ್ನು.

**ಕೃಷ್ಣ**:—ಹೇಗೆ ಶಾಸ್ತ್ರಿಗಳೆ?

**ಶೀಲ**:—ಹೇಗಿರಬೇಕೋ ಹಾಗೆ.

**ಆಚಾರ್ಯ**:—ಇರಲಿ. ಹಾಡಿದುದಾರು?

**ಕೃಷ್ಣ**:—ನನ್ನ ತಂಗಿ. ಏನೂ ಕಲಿತವಳಲ್ಲ. ತಾಯಿಕಲಿಸಿದ ಹಳ್ಳಿಯ ಹಾಡದು.

**ಆಚಾರ್ಯ**:—ಕಲಿಕೆಯ ಕಯ್ಯನ್ನು ಹೊಗಳಿದುದಲ್ಲ ನಾನು. ಆ ನಾದ, ಆ ನುಣುಪು, ಆ ಹಿಡಿತ, ಆಗಮಕ, ಆ ಕೊಂಕು ಸಯ್ಯುಗಳು ಕಲಿತುಬರುವುದೇ ಅಲ್ಲ. ಇನ್ನು ಕಲಿತರೆ ಗಂಧಕ್ಕೆ ಹೂವಾದೀತು.

**ಕೃಷ್ಣ**:—ಗಂಧದ ಮರದಲ್ಲಿ ಹೂವೇ ಬಿಡುವುದಿಲ್ಲವಲ್ಲವೆ?

**ಆಚಾರ್ಯ**:—ಅದೇನೋ ನನಗೆ ಗೊತ್ತಿಲ್ಲ. ಈ ಗಂಧದಲ್ಲಿ ಹೂಬಿಡಲಿಕ್ಕದೆ ಇದೆ. ಅಲ್ಲವೆ ಶಾಸ್ತ್ರಿಗಳೇ?

**ನೀಲ:**—ಸಂಗೀತಾಚಾರ್ಯರಾದ ನಿಮಗೇ ಆ ವಿಷಯದ ಗೊತ್ತು.

**ಆಚಾರ್ಯ:**—ಹುಂ, ಸರಿ. ಸಂಗೀತಾಚಾರ್ಯನು ನಾನು. ನಿಮಗೆ ಅದರ ಗಂಧಗಾಳಿಯೂ ಇಲ್ಲವಲ್ಲವೆ?

**ನೀಲ:**—ಸಂಗೀತ ವಿಷಯವಾಗಿ ನಾನು ಬರೆದ ಪುಸ್ತಕದಿಂದಾಗಿ ನೀವು ಭ್ರಮೆಗೊಂಡಿರೆಂದು ತೋರುತ್ತದೆ. ಪುಸ್ತಕದ ಬದನೆಕಾಯಿ ಮೇಲೋಗರಕ್ಕಾಗದು.

ಹೀಗೆ ಮಾತಾಡುತ್ತಾ ಬಂದು ಅಂಗಳದ ಮೆಟ್ಟಿಲನ್ನೇರಿದರು. ನಾಯಿ "ಭೋ" ಎಂದಿತು. "ನನ್ನದರಂತಿರುವ ಹಾಡನ್ನು ಕೇಳಿದಿರೊ ಶಾಸ್ತ್ರಿಗಳೆ? ಎಂದನು ಗೋವಿಂದಾಚಾರ್ಯ. "ಹಾಗಾದರೆ ಸ್ವಲ್ಪ ಹಾಡಿರಿ. ಸಮಾನತಾ ಪ್ರೇಮವಿಟ್ಟು ಉಪದ್ರವಿಸಲಿಕ್ಕಿಲ್ಲ" ಎಂದನು ನೀಲಕಂಠ ಶಾಸ್ತ್ರಿ. "ಶಾಸ್ತ್ರಿಗಳಿಗದು ಗೊತ್ತಿಲ್ಲವೆ? 'ನಾಯಿಗೆ ನಾಯಿ ಹಗೆ'ಯಂತೆ. ನಾನು ಹಾಡಿಬಿಟ್ಟರೆ ನಮ್ಮೆಲ್ಲರ ಹಾಡು ಏನಾಗುವುದೋ" ಎಂದನು ಆಚಾರ್ಯ. "ಹೆದರಬೇಡಿರಿ. ನಮ್ಮ ರಾಯರಿಲ್ಲವೆ?" ಎಂದನು ಶಾಸ್ತ್ರಿ. ಅಷ್ಟರಲ್ಲಿ ಮಾಳಿಗೆಯಿಂದ "ಅಣ್ಣ ಬಂದ" ಎಂಬ ಮಾತು ಕೇಳಿತು. ಆಗಂತುಕರು ಚಾವಡಿಯನ್ನೇರಿದರು. ಬಾಜಿರಗಂಬದ ಲೋಡಿ ಗೆರಗಿ ಕುಳಿತುಕೊಂಡಿದ್ದ ರಾಮಯ್ಯನು "ಗಣಪಾ ಮೂರು ನಾಲ್ಕು ತಂಬಿಗೆ ನೀರು ತಾ" ಎಂದನು. ಆ ಮೇಲೆ ಎಲ್ಲರೂ ಕಾಲ್ಮೋರೆಗಳನ್ನು ತೊಳೆದು ಕೊಂಡು ಹಾಸಿದ ಬಣ್ಣದ ಹಸೆಯಲ್ಲಿ ಕುಳಿತರು. ಎರಡು ಮೂರು ನಿಮಿಷಗಳಲ್ಲಿ ನಿಂಬೆಹಣ್ಣಿನ ಪಾನಕವನ್ನು ತಂದುಕೊಟ್ಟನು ಗಣಪ. ಬಾಯಾರಿಕೆ ತಣಿದ ಮೇಲೆ ತಂದೆಗೆ ತನ್ನೊಡನಿದ್ದ ಇಬ್ಬರ ಪರಿಚಯ ವನ್ನೂ ಮಾಡಿಸಿದನು ಕೃಷ್ಣರಾಯ. ಒಂದಿಷ್ಟು ಕಳೆದ ಮೇಲೆ ಮಾತಿನ ಮೇಲೆ ಮಾತು ಮಡಿಚತೊಡಗಿತು.

**ರಾಮ:**—ಉಡುಪಿಯವರೆಂದ ಮೇಲೆ ಆಚಾರ್ಯರು ನಮ್ಮವರೇ ಆದರು.

**ನೀಲ:**—ಹಾಗಾದರೆ ನಾನು ಮಾತ್ರ ಹೊರಗಿನವನೆಂದು ರಾಯರ ಅಭಿಪ್ರಾಯವೆ?

**ಗೋವಿಂದಾಚಾರ್ಯ:**—ಹೌದು; ರಾಯರ ಬಾಣ ಗುರಿ ಮುಟ್ಟಿತು. ಶಾಸ್ತ್ರಿಗಳೆ ನೀವು ಹೊರಗಿನವರೆಂಬುದಕ್ಕಿನ್ನು ಕಣಿಗೇಳುವುದೆ ಬೇಡ.

**ನೀಲ:**—ಅದೇನು?

**ಗೋವಿಂದ:**—ಅಂದಿನಿಂದಿಂದಿನ ವರೆಗೆ ನಾವೆಷ್ಟು ಕೇಳಿದರೂ ನೀವು ಯಾವ ಕಡೆಯವರೆಂಬ ಗುಟ್ಟನ್ನು ಹೇಳಲಿಲ್ಲ. ಅದರಿಂದ ನಿಮ್ಮನ್ನು ಬಹಿಷ್ಕರಿಸದೆ ನಿರ್ವಾಹವೆ ಇಲ್ಲ.

**ನೀಲ:**—ನನ್ನಲ್ಲಿ ಉಡುಪಿ ಮಂಗಳೂರು ಮೈಸೂರು ಮೊದಲಾದ ಭೇದವೆ ಇಲ್ಲ. 'ಕನ್ನಡ'ವೇ ನನ್ನ ನಾಡು. ಎಂಬುದನ್ನು ಮೊದಲೆ ಹೇಳಿದ್ದೆನಲ್ಲವೆ?

**ಗೋವಿಂದ:**—ಅದು ಆಕಾಶವನ್ನೆ ಹಿಡಿಯಲಿಕ್ಕೆ ಯತ್ನಿಸಿದಂತೆ. ಈ ಕಯ್ಯಿಂದ ಆ ಕೆಲಸವು ಸಾಧ್ಯವೆ?

**ನೀಲ:**—ಈ ಕಯ್ಯಿಂದು ಅಸಾಧ್ಯವೆಂಬುದೇನೋ ಸರಿ. ಆ ಮನಸ್ಸಿನ ಕಯ್ಯಿಂದು ಸಾಧ್ಯ.

**ಕೃಷ್ಣ:**—ನಮ್ಮಂಥವರ ಮನಸ್ಸಿಗೂ ಅದು ಅಸಾಧ್ಯವಾಗಿಯೆ ತೋರುತ್ತಿದೆಯಲ್ಲ.

**ನೀಲ:**—ಅದಕ್ಕೆ ನಾನೇನು ಮಾಡಲಿ?

**ಕೃಷ್ಣ:**—ಅದೇನೋ ಸರಿ. ಆದರೆ ಉತ್ತರಗೊಡುವುದೆಂಬುದು ಕೇಳುವವರ ತೃಪ್ತಿಗಾಗಿ; ಹೇಳುವವನದಕ್ಕಲ್ಲ. ಅದನ್ನರಿತು ವರ್ತಿಸದಿದ್ದರೆ ಹೇಳುವವನ ಪ್ರಯತ್ನವೆಲ್ಲ ಗೋರ್ಕಲ್ಲಿನಲ್ಲೆರೆದ ನೀರು.

**ನೀಲ:**—(ಒಂದಿಷ್ಟು ಭಾವಿಸಿ ನಗುತ್ತಾ) ರಾಯರೆ, ಹೌದು; ನಿಮ್ಮ ಮಾತಿನಿಂದೊಂದು ಹೊಸಪಾಠವನ್ನು ಕಲಿತಂತಾಯಿತು. ಆದರೆ ನೆಲೆಗೊಂಡ ಪಳಕದ ಹಜ್ಜೆಯನ್ನು ಮಾರಿಸುವುದು ಅಷ್ಟು ಸುಲಭವಲ್ಲ. ಮಾತ್ರವಲ್ಲ; ಈ ಹೊಸ ಅಭ್ಯಾಸವನ್ನು ಮಾಡಲಿಕ್ಕೆಂದೆ ನಿಮ್ಮೊಡನೆ ಹೊರಟುದಲ್ಲವೆ ನಾನು?

**ಕೃಷ್ಣ:**—(ಎಣಿಸುತ್ತಾ) ಆಗಲಿ; ಸ್ವಭಾವವನ್ನು ಅಭ್ಯಾಸದಿಂದ ಬದಲಿಸಬಹುದೇನು?

**ನೀಲ:**—ಬದಲಿಸಕೂಡದು; ಪಳಗಿಸಿ ಸುಗಮವಾದ ಮಾರ್ಗ ದಲ್ಲಿ ನಡೆಯಿಸಬಹುದು. ಸ್ವಭಾವವೆಂಬುದೆ ಆತ್ಮಶಕ್ತಿ; ಅಭ್ಯಾಸವೆ ಪ್ರಕೃತಿ ಶಕ್ತಿ; ಅವುಗಳು ಕ್ರಮವಾಗಿ ಒಂದುಗೂಡಿ ನಡೆಯಬೇಕು.

**ಗೋವಿಂದ:**—ರಾಯರೆ, ಶಾಸ್ತ್ರಿಗಳೇನೋ ಕಾಡಿಗೆ ಹೋಗತೊಡಗು ತ್ತಾರೆ. ನಾನು ಬರುವಾಗ ಕೊಟ್ಟ ಮುಂಜಾಗ್ರತೆ ನಿಮಗೂ ಮರೆತು ಹೋಯಿತೆ?

**ಕೃಷ್ಣ:**—(ನಕ್ಕು) "ಓಹೋ, ಈ (ಹೊಟ್ಟೆಗೆ ಬೆರಳುದೋರಿಸಿ) 'ಇಂಜನಿ'ನ ವಿಚಾರವಲ್ಲವೆ?" ಎಂದನು. ಅಷ್ಟರಲ್ಲಿ ಗಣಪನು ಸ್ನಾನಕ್ಕೆ ನೀರುಡೆಗಳನ್ನು ತಂದಿತ್ತನು. ಸೆಕೆಕಾಲವಾಗಿದ್ದುದರಿಂದ ಎಲ್ಲರಿಗೂ ಸ್ನಾನಮಾಡಬೇಕೆಂಬ ಆಸೆಯೂ ಇತ್ತು. ಸ್ನಾನ ಸಂಧ್ಯಾವಂದನೆಗಳಾಗು ವಾಗ ಗಂಟೆ ಒಂಬತ್ತಾಗಿತ್ತು. ಭೋಜನವಾದ ಮೇಲೆ ಎಲ್ಲರೂ ಕೃಷ್ಣ ರಾಯನೊಡನೆ ಮಾಳಿಗೆಯನ್ನೇರಿದರು. ಅದನ್ನು ನೋಡಿ ಆಚಾರ್ಯನು ಬೆಪ್ಪಾಗಿ ಹೋದನು. ಅಡಿನೆಲವಿಡಿದು ಮೇಲ್ಕಟ್ಟಿನವರೆಗೆ ಗೋಡೆಯಲ್ಲಿ ಕೆಂಜಾಜಿನ ಸಾರಣೆ; ಕೂದಲಳತೆಯು ಕಪ್ಪಾದ ಕಾರಣೆ. ಒಂದೆಡೆ ಬಣ್ಣದ ಹೂವಿನ ಹಚ್ಚಡವನ್ನು ಹೊದೆದು ಒಬ್ಬಾಕೆ ಮಲಗಿದಂತೆ; ಇನ್ನೊಂದೆಡೆ ಅರೆಗಣ್ದೆರೆದ ಕೊರಳವರೆಗೆ ಮುಸುಕಿದಂತೆ; ಮತ್ತೊಂದೆಡೆ ಹಚ್ಚಡವನ್ನೆತ್ತಿದ ಕುಪ್ಪಸದ ಸೊಂಟು ತೋರಿದಂತೆ; ಬೇರೊಂದೆಡೆ ಮೂವರು ಕೆಳದಿಯರು ತೋಪಿನ ಗಿಡುಬಳ್ಳಿಗಳಿಗೆ ನೀರನ್ನು ಚಿಮುಕಿಸುತ್ತಿದ್ದಂತೆ; ಹಿಂದುಗಡೆ ಪೊದರು ಹಬ್ಬಿ ನೆಲೆನಿಂತ ಮರದ ಅಡ್ಡವಾಗಿ ನಿಂತು ರಸಿಕ ನೊಬ್ಬನು ಆ ನೋಟವನ್ನು ನೋಡುತ್ತಿದ್ದಂತೆ; ಬರೆದ ಚಿತ್ರಗಳು ವಿಚಿತ್ರ ವಾಗಿದ್ದುವು. ಆಸೆ ಕೊರಳಿನ ವರೆಗೆ ತುಂಬಿದ ತುಂಬಿ ಬಂದಿದೆ; ಪೂರ್ಣ ವಾಗಿ ತಾವರೆಯರಳಲಿಲ್ಲ; ಅದರಿಂದ "ಗಾಳಿಸುದ್ದಿಗೆ ಮರುಳಾದವರ ಗತಿ ಹೀಗೆಯೆ" ಎಂಬುದನ್ನು ಲೋಕಕ್ಕೆ ತಿಳುಹುವಂತೆ ಅಲೆದಾಡುತ್ತಿದೆ ಆ ತುಂಬಿ. ಆ ಅರೆಮುಗುಳಿನಲ್ಲಿ ನುಸುಳಲಾರದಿದ್ದರೂ ಕದಲದೆ ನಿಂತು

ಕೊಂಡ ಮತ್ತೊಂದು ತುಂಬಿಯನ್ನು ನೋಡಿದರೆ, ಒಳಹೊರಗೆ ಹೊಕ್ಕು ಹೊರಡುತ್ತಿದ್ದ ಆ ಗಾಳಿಯೊಡನೇನೋ ಪಿಸುನುಡಿ ನುಡಿಯುತ್ತಿರುವಂತೆ ಭಾಸವಾಗುತ್ತಿತ್ತು. ಇದು ಆ ಗೋಡೆಯ ವರ್ಣಚಿತ್ರದ ಒಂದೇ ಒಂದು ನೋಟ. ಇಂತವುಗಳನ್ನು ನೋಡುತ್ತಾ ನೀಲಕಂಠನು ರಸಾಸ್ವಾದ ಸಮಾಧಿಯಲ್ಲಿ ಮುಳುಗಿಹೋಗಿದ್ದನು.

**ಗೋವಿಂದ**:—ರಾಯರೆ, ಯಾವ ಕಯ್ಯ ಜಾಣ್ಮೆ ಇದು?

**ಕೃಷ್ಣ**:—ಈ ಹೂವಿನ ಹಚ್ಚಡವು ನಮ್ಮ ತಾಯಿಯದು. ಈ ಕಣ್ವಾಶ್ರಮೋಪವನವೆಲ್ಲ ತಂಗಿಯದು.

**ಗೋವಿಂದ**:—ಶಾಕುಂತಳವನ್ನಾಕೆ ಓದಿದ್ದಾಳೇನು?

**ಕೃಷ್ಣ**:—ಬಸಪ್ಪ ಶಾಸ್ತ್ರಿಗಳ ಕನ್ನಡ ಶಾಕುಂತಳವನ್ನು ಕೊಂಡು ಕೊಂಡುದು ನಾನು; ಓದುದುದು ಅವಳು.

**ಗೋವಿಂದ**:—ಓದಿದ ಓತವಷ್ಟೆ ಅಲ್ಲ; ಅದು ಮೆಯ್ಗೂಡಿದಂತೆ ತೋರುತ್ತಿದೆ ಈ ಚಿತ್ರದಿಂದ.

**ಕೃಷ್ಣ**:—ಎಷ್ಟಾದರೂ ಚಿಕ್ಕವಳಲ್ಲವೆ? ಎಷ್ಟೋ ದೋಷಗಳಿರ ಬಹುದು.

**ಗೋವಿಂದ**:—ದೋಷವಲ್ಲ; ಇದ್ದರೆ ನ್ಯೂನತೆ.

**ಕೃಷ್ಣ**:—ಹಾಗೆಂದರೆ?

**ಗೋವಿಂದ**:—ದೋಷವೆಂದರೆ ತಪ್ಪು; ಒದಗಿದ ಗುಣವನ್ನು ನಾಶಿಸು ವುದೇ ಅದು. ನ್ಯೂನತೆಯೆಂದರೆ ಗುಣದ ಅಪೂರ್ಣತೆ. ಅಭ್ಯಾಸದಿಂದ ಕ್ರಮೇಣ ಪೂರ್ಣವಾಗಬಹುದಾದುದರಿಂದ ಅಪೂರ್ಣತೆಯೆಂಬುದು ದೋಷವಲ್ಲ. ಇರಲಿ, ಆಗಿನ ಹಾಡನ್ನು ಬರೆದುದಾರು?

**ಕೃಷ್ಣ**:—ಅವಳೇ.

**ಗೋವಿಂದ**:—ಹೌದು, ಅದೊಂದೇ; ಲೆಕ್ಕಣಿಯಲ್ಲಿಳಿದರೆ ಕಾವ್ಯ; ನಾಲಿಗೆಯಲ್ಲಿ ಹರಿದರೆ ಹಾಡು; ಕುಂಚದಲ್ಲೊಸರಿದರೆ ಚಿತ್ರ. ಅಲ್ಲವೆ ಶಾಸ್ತ್ರಿಗಳೆ?

**ನೀಲ:**—“ಸರಿ. ತೊಟ್ಟೊಂದರಲ್ಲಿ ಮೂರು ಮುಗುಳು.” ಎನ್ನುವಾಗ ಬಾಗಿಲ ಬದಿಯಲ್ಲಿ ಯಾರೋ ನಿತ್ತಂತೆ ತೋರಿತು. ತಿರುಗಿ ನೋಡಿದನು. ನೋಟಗಳೆರಡೂ ನಿಮಿಷ ಮಾತ್ರ—ಅಲ್ಲ ಕಲಾ ಮಾತ್ರ—ಒಂದನ್ನೊಂದು ಅಂಟಿಕೊಂಡುವು. ಸ್ವಲ್ಪವಾದರೂ ಹೆಚ್ಚು ಸ್ವಾತಂತ್ರ್ಯವನ್ನನುಭವಿಸಲಿಕ್ಕಿದ್ದ ಅವುಗಳನ್ನು ಆ ನಾಚಿಕೆಯೆಂಬ ದಾದಿ ಬಿಡಲಿಲ್ಲ. ಬಿಡದಿದ್ದರೂ ಏನು? ಅಷ್ಟರೊಳಗೆ ಆ ನೋಟಗಳು ಪರಸ್ಪರವಾಗಿ ಕಣ್ಣಿನಿಂದ ಮನಸ್ಸಿಗೆ, ಮನಸ್ಸಿನಿಂದ ಎದೆಗಿಳಿದು ಆಲಿಂಗನವೆಸಗಿ ಮೆಯ್ಮರೆತು ನೆಲೆಗೊಂಡುದು ಯಾರಿಗೂ ಗೊತ್ತಾಗಲಿಲ್ಲ. ಆ ನೋಟಗಳೊಳಗೆ ಮತ್ತೊಂದು ಯಾರದೆಂಬುದರಲ್ಲಿ ರಸಿಕ ವಾಚಕರಿಗೆ ಕವಲೆಣಿಕೆ ಇರಲಿಕ್ಕಿಲ್ಲ. ಆದರೂ ಇಂಥ ಸಂದರ್ಭಗಳಲ್ಲಿ ಎಲ್ಲರ ಸಂದೇಹವನ್ನುಜ್ಜಿಬಿಡುವುದೂ ಕತೆಗಾರನ ಕರ್ತವ್ಯ. ಕಾಸಿ ಹೂಬಿಸಿಗಿಳಿದು ಕೆನೆಗೊಂಡ ಹಾಲನ್ನು ಕಂಚಿನ ತಂಬಿಗೆಯಲ್ಲಿ ತುಂಬಿ ತಂದಿದ್ದಳು ಲಕ್ಷ್ಮಮ್ಮ. ಅವಳೊಡನೆ ರಸಬಾಳೆಯ ಹಣ್ಣುಗಳನ್ನು ತಟ್ಟೆಯಲ್ಲಿಟ್ಟು ತಂದಿದ್ದಳು ಬಾಗಿ. ಅವುಗಳನ್ನು ನೆಲದಲ್ಲಿಟ್ಟು ಈ ವಿಮರ್ಶಕರ ಮಾತಿಗೆ ಕಿವಿಗೊಡುತ್ತ ಅವರು ನಿಂತುದು ಇವರಿಗೆ ಗೊತ್ತಾಗಲಿಲ್ಲ. ನೀಲಕಂಠನು ಫಕ್ಕನೆ ತಿರುಗಿ ನೋಡಿದುದು, ಕಣಿಯಿಟ್ಟಂತೆ ಬಾಗಿಯ ಮುಖವನ್ನೇ ಆಯಿತು.

ಹದಿನಾಲ್ಕರಿಂದ ಹದಿನಯ್ದರ ಬಾಗಿಲನ್ನು ತಟ್ಟುತ್ತಿತ್ತು ಹರಯ. ಆದರೂ ವಯಸ್ಸನ್ನು ಮೀರಿದ ಒಡ್ಡಾರ. ಅರಸಿನಕೊಂಬನ್ನು ಸವೆದು ಲೇಪಿಸಿದಂತೆ ಮೆಯ್ವಣ್ಣ. ಹಸನಾದ ಕಿರಿಗೆಯನ್ನುಟ್ಟಿದ್ದಳು. ಕಾಲ ಮಣಿಗಂಟಿನ ಸುತ್ತಲೂ ಪಾಶವಾಗಿ, ನೆರಿಯಲ್ಲಿ ನೇಣಾಗಿ ಸೆರಗಿನಲ್ಲಿ ಕೊರಳು ಸುತ್ತಿಕೊಂಡಿತ್ತು ಜರತಾರಿಯ ಸೆಳೆಯಂಚು. ಕವಿಗಳು ಕಂಡಿಲ್ಲವೆಂದು ತೋರುತ್ತಿದೆ. ಕಂಡಿದ್ದರೆ, ಅದು ಕಾಮನ ನಾಗಪಾಶವಾಗುತ್ತಿತ್ತು. ಹೂಗುಚ್ಛಿನ ಕುಪ್ಪಸವು ಬಿಚ್ಚಿದ ನವಿಲಗರಿಯಾಗಿ ಮಾರ್ಪಡುತ್ತಿತ್ತು. ಇನ್ನಾಕೆಯ ನಿಡುಮೂಗು, ಕಡೆಗಣ್ಣು, ಸೆಳೆಹುಬ್ಬು ಮೊದಲಾದುವು. ಯಾವ ಯಾವ ಅವತಾರಗಳನ್ನು ಧರಿಸಬೇಕಾಗಿತ್ತೊ? ಸ್ತ್ರೀಯರ ಅಂಗಸೌಂದರ್ಯವನ್ನೆಲ್ಲ ಜಪ್ತಿಮಾಡಿ ಹೊರಗಿಡುವ ಸಾಲ

ಗಾರರಾದ ಕವಿಗಳು ಆಗ ಇಲ್ಲದುದೊಂದು ಪುಣ್ಯವೆ ಸರಿ ಎನ್ನುವ. ಇರಲಿ; ಅವಳ ಮೆಯ್ಯ ಚೆಲ್ವಿನ ಸಂಪೂರ್ಣತೆಯನ್ನು ನೋಡಬೇಕಾದರೆ ಇನ್ನೂ ಮೂರು ನಾಲ್ಕು ವರ್ಷಗಳಿಂದತ್ತ ಮುಂಗಣ್ಣಿಡಬೇಕು. ಈಗ ಅದು ಸುಗ್ಗಿಯ ಮೊತ್ತಮೊದಲ ಮಲ್ಲಿಗೆ ಬಳ್ಳಿ. ಚಿಗುರಿದೆಯಷ್ಟೆ; ಸಾರ್ವತ್ರಿಕವಾಗಿ ನನೆ ಕೊನೆಗೊಳ್ಳಲಿಲ್ಲ. ಕೆಲವೆಡೆ ಸೂಜಿಮುಗುಳಾಗಿದೆ; ಬಿರಿಮುಗುಳಾಗಲಿಲ್ಲ. ಪರಿಮಳದ ಹವೆ ಹಾಯ ತೊಡಗಿದೆಯಲ್ಲದೆ, ಗಾಳಿ ಬೀಸಲಿಲ್ಲ. ತುಂಬಿಗೆ ಸುದ್ದಿ ಮುಟ್ಟಿದೆಯಲ್ಲದೆ ಅದು ಬಂದು ಝೇಂಕರಿಸಲಿಲ್ಲ. ಆದರೇನು? ಇಂದಿನ ಈ ಪರಿಯನ್ನು ನೋಡಿ ರಸಿಕಶಿಖಾಮಣಿ ನೀಲಕಂಠನ ಮನಸ್ಸು ಮುಂದಿನ ಆ ಪರಿಯನ್ನೆಣಿಸುತ್ತಾ ಭಾವನೆಯ ದೋಣಿಯನ್ನೇರಿ ಅಲೆದಾಡುತ್ತಿತ್ತು. ಕೃಷ್ಣರಾಯನು ಹಾಸುಗೆಯನ್ನು ಬಿಡಿಸಿ ಇಬ್ಬರನ್ನೂ ಕುಳಿತುಕೊಳ್ಳಿಸಿ ತಾನೂ ಕುಳಿತನು. ಅಷ್ಟರಲ್ಲಿ ರಾಮಯ್ಯನೂ ಬಂದು ಉಪಹಾರಕ್ಕೆ ಕೈದೋರಿಸುತ್ತಾ "ತೆಗೆದುಕೊಳ್ಳಿರಿ" ಎಂದು ಕುಳಿತನು.

**ಗೋವಿಂದ:**—(ನಗುತ್ತಾ) ನಮ್ಮ ಶಾಸ್ತ್ರಿಗಳಿಗೆ ಇದರಲ್ಲೆಲ್ಲ ಅಷ್ಟೊಂದು ಆದರವಿಲ್ಲ.

**ನೀಲ:**—ನನ್ನ ಅಭಿಪ್ರಾಯವನ್ನೆಲ್ಲ ಕಣಿಹೇಳಲಿಕ್ಕೆ ಆಚಾರ್ಯರು ಅಭ್ಯಾಸಮಾಡಿದ್ದೀರೇನು?

**ಗೋವಿಂದ:**—ಅದೇನೂ ಇಲ್ಲ. ಇಂಥದರಲ್ಲಿ ನಿಮಗೆ ಆದರವಿಲ್ಲವೆಂದು ಬಳಕೆಯಿಂದ ಗೊತ್ತಾಗಿದೆಯಷ್ಟೆ. ಅದನ್ನೇ ಹೇಳಿಬಿಟ್ಟೆ. "ತಿಂಡಿ ತೀರ್ಥ ಗೋವಿಂದನಿಗೆ, ಭಾವನಾಭಂಗಿ ನೀಲಕಂಠನಿಗೆ" ಎಂದು ವಕೀಲರೂ ಹೇಳುತ್ತಾರಲ್ಲವೆ?

**ನೀಲ:**—(ನಗುತ್ತಾ) ಅಂತೂ ತಿಂಡಿಯೆಲ್ಲ ನಿನಗೆ, ಭಂಗಿಯೆಲ್ಲ ನನಗೆ. ಇಂಥ ಸ್ನೇಹಿತರು ಹುಡುಕಿದರೂ ಸಿಕ್ಕಲಿಕ್ಕಿಲ್ಲ. ಇರಲಿ, ನನ್ನ ಆ ಭಂಗಿ ಏಣಬೇಕಾದರೆ ನಿಮ್ಮ ಸಂಗೀತದ ಪಾನಕದಲ್ಲಿ ಬೆರಸಬೇಕು.

**ಗೋವಿಂದ:**—ಹುಂ, ಏನು ನನ್ನ ಸಂಗೀತಸಂಸ್ಕೃತಿಯನ್ನೆಲ್ಲ ಪುಡಿ ಮಾಡಿ ಇಲ್ಲಿಗಾಳಿಗೊಪ್ಪಬೇಕು, ಎಂದು ಭಾವಿಸಿದ್ದೀರೊ ಶಾಸ್ತ್ರಿಗಳು?

**ಕೃಷ್ಣ:**—ಅದೇನು "ಇಲ್ಲಿ" ಎನ್ನುತ್ತೀರಿ?

**ಗೋವಿಂದ:**—ಹೌದು; ಇಲ್ಲಿ ಪ್ರಾಕೃತಿಕವಾದ ಸಂಗೀತದ ತಂಗಾಳಿ ಬೀಸುತ್ತಿದೆ. ನನ್ನ ಸ್ವರವೆಂದರೆ "ಕಾರ್ಖಾನೆ"ಯಿಂದ ಹೊರಡುವ ಗಾಳಿ.

**ರಾಮು:**—ಹಾಗೆಂದರೇನು?

**ಕೃಷ್ಣ:**—ನಾವು ಬರುವಾಗ ಬಾಗಿ ಹಾಡುತ್ತಿದ್ದಳು. ಆ ನಾದ ರೀತಿಗಳನ್ನು ಕೇಳಿ ಸಂಗೀತ ವಿದ್ವಾಂಸರಾದ ನಮ್ಮ ಆಚಾರ್ಯರು ಸಂತೋಷಪಟ್ಟಿದ್ದರು. ಮಕ್ಕಳ ತೊದಲ್ನುಡಿಯಲ್ಲಿಯೂ ಸವಿದೋರುತ್ತಿದೆ ಹಿರಿಯರಿಗೆ.

**ಗೋವಿಂದ:**—ಆ ಹಾಡೂ "ತೊದಲ್ನುಡಿ"ಯಂತಾಗುವುದೆ? ಆ ಬೆಲ್ಲದ ಸವಿಯನ್ನು ಬಲ್ಲವನೇ ಬಲ್ಲ. ನಿಮಗೆಲ್ಲ ಹಿತ್ತಿಲಗಿಡು ಮದ್ದಲ್ಲವೆಂದು ತೋರುತ್ತದೆ.

**ರಾಮು:**—ಹೋ ಹ್ನುಂ. ಹಾಗೇನು? ಹೌದು. ನನ್ನ ತಾಯಿಯಂತೆ ಹಾಡು ಹೇಳುವ ಹೆಂಗಸರು ಈ ಊರಲ್ಲಿರಲಿಲ್ಲ. ಅಜ್ಜಿಯ ಗುಣ ಹಾಗೇ ಬಂದಿದೆ ಮೊಮ್ಮಗಳಿಗೆ.

**ಗೋವಿಂದ:**—ಇರಬಹುದು. ಆದರೆ ಇದು ಬರಿಯ ಹಳ್ಳಿಯ ಹಾಡಲ್ಲ. ಒಂದಿಷ್ಟು ಪಳಗಿದರೆ ನಿಮ್ಮೂರನ್ನೆ "ಹಾಡಿನ ಹಳ್ಳಿ"ಯಾಗಿ ಮಾರ್ಪಡಿಸೀತು.

**ನೀಲ:**—ಇರಲಿ; ಆಚಾರ್ಯರು ಈ ಹೊತ್ತು ಬಹಳ ದಣಿದು ಹೋದಂತೆ ತೋರುತ್ತದೆ.

**ಗೋವಿಂದ:**—ಯಾವುದರಿಂದ?

**ನೀಲ:**—ಪ್ರತಿಯೊಂದು ಕೆಲಸದೆಡೆಯಲ್ಲೂ, ರಾಗವನ್ನೊ ಅನು ಪಲ್ಲವಿಯನ್ನೊ ಎತ್ತಿ ಸ್ವರದೊಡನೆ ತುರಿಸುತ್ತಾ ಇರುವುದು ನಿಮ್ಮ ಸ್ವಭಾವ. ಈಗ ಒಂದೂ ತೋರುವುದಿಲ್ಲ.

**ಗೋವಿಂದ:**—(ನಕ್ಕು) ಹುಂ, "ತುರಿಸುತ್ತಾ" ಎಂದುದು ನೂರ ಕ್ಕೊಂದು ಮಾತು. ಆದರೆ, ಆತುರಿಕೆ ಸುರುವಾಗ ಪರಮಾನಂದ, ನಿಲ್ಲುವಾಗ ಪ್ರಾಣಸಂಕಟವಾಗುತ್ತದೆ, ಎಂಬುದನ್ನು ಮನಗಂಡು ಇಲ್ಲಿ ಎಚ್ಚರವಾಗಿದ್ದೇನೆ. ಏನು ಶಾಸ್ತ್ರಿಗಳೆ, ಸಂಗೀತಾಚಾರ್ಯನೆನಿಸಿಕೊಂಡು ಅದರ "ಓಂ ನಮ"ಕ್ಕೂ ಮಸಿ ಬಳಿದು ಬಿಡುವುದೆ?

**ಕೃಷ್ಣ:**—ಅದೆಲ್ಲ, ಇರಲಿ; ಒಂದು ಹಾಡಿಗೂ ಎಡೆ ಇಲ್ಲವೆ? ನಮ್ಮ ಬಾಗಿಗೆ ನಿಮ್ಮಂಥವರ ಹಾಡುಗೇಳುವುದೆಂದರೆ ಜೀವ.

**ಗೋವಿಂದ:**—ಬೆಳಗಾದ ಮೇಲಾಗಲಿ, ರಾಯರೇ.

**ಕೃಷ್ಣ:**—ಆಗಲಿ. ಅದಕ್ಕೇನು? ಬಹಳ ದಣಿವಾಗಿರಬಹುದು ಆಚಾರ್ಯರಿಗೆ.

**ಗೋವಿಂದ:**—ಅದೇನೂ ಇಲ್ಲ. ಆದರೆ, ನಾನು ಹಾಡಿ ಈ ರಾತ್ರಿಯು ಲ್ಲಿಯೂ ಕಾಕಾಕ್ಷಿಗೆ ಉಪದ್ರವವನ್ನೇಕೆ ಮಾಡಬೇಕು?

**ರಾಮ:**—(ಬಿರುಸಿನಿಂದ) ಅದೇನು ಸ್ವಾಮಿ ಹಾಗೆನ್ನುತ್ತೀರಿ.?

**ಗೋವಿಂದ:**—"ಏನು" ಎಂದರೆ? ನಿಜಸ್ಥಿತಿ ಇರುವುದೇ ಹಾಗೆ.

**ರಾಮ:**—ನಮ್ಮೂರವರನ್ನೆಲ್ಲ ತಮಾಷೆ ಮಾಡುವುದು ಚೆನ್ನಾಗಿಲ್ಲ ಸ್ವಾಮಿ.

**ಗೋವಿಂದ:**—(ಆಶ್ಚರ್ಯಗೊಂಡು) ಏನು ನಿಮ್ಮೂರವರನ್ನು ತಮಾಷೆ ಮಾಡಿದೆನೆ ನಾನು? ಹುಟ್ಟಿದ ಮೇಲೆ ಮರೆತೂ ಅಂಥ ಕೆಲಸಕ್ಕಿಳಿದವ ನಲ್ಲವಷ್ಟೆ!!

**ರಾಮ:**—ಮತ್ತೆ "ಕಾಕಾಕ್ಷಿ"ಯೆಂದೇಕೆ ಹೇಳಿದಿರಿ?

**ಗೋವಿಂದ:**—ಅದು ತಮಾಷೆಯಲ್ಲ. ಎಲ್ಲಿಯೇ ಆಗಲಿ; ಕಾಕಾ ಕ್ಷಿಯ ಸ್ವಭಾವವೇ ಹಾಗೆ.

**ರಾಮಯ್ಯ:**—"ಕಾಕಾಕ್ಷಿ"ಗೆಂದೇನು? ಒಬ್ಬೊಬ್ಬರಿಗೆ ಒಂದೊಂದು ಸ್ವಭಾವ.

**ಗೋವಿಂದ:**—ಹಾಗೆಂದರೆ?

**ನೀಲ:**—ಆಚಾರ್ಯರೆ, ತಡೆಯಿರಿ. ನೀವಿಬ್ಬರೂ ನಿಜವಾದ ಅರ್ಥವನ್ನು ಗಮನಿಸದೆ ಭ್ರಮೆಗೊಂಡಿರೆಂದು ತೋರುತ್ತದೆ. ಬಹುಶಃ ನೀವೆಂದ ಕಾಕಾಕ್ಷಿಯೇ ಬೇರೆ; ಅವರೆಣಿಸಿದ "ಕಾಕಾಕ್ಷಿ"ಯೆ ಬೇರೆ.

**ರಾಮ:**—ಹಾಗೆಂದರೆ?

**ನೀಲ:**—ನೀವು ಭಾವಿಸಿದುದು ಯಾದೋ ಒಬ್ಬನ ಒಳಹೆಸರಾಗಿ ತೋರುತ್ತಿದೆ. ಅಲ್ಲವೆ?

**ರಾಮ:**—ಹೌದು; ನಮ್ಮೂರ ನಾಗಪ್ಪಯ್ಯನನ್ನು ಕೆಲವರು "ಕಾಕಾಕ್ಷಿ" ಎಂದು ಹಿಂದಿನಲ್ಲಿ ತಮಾಷೆಮಾಡುತ್ತಾರೆ. ಅದು ತಪ್ಪಲ್ಲವೆ?

**ನೀಲ:**—ಸರಿ; ಆದರೆ ಈ ಊರ ಬಳಕೆಯೆ ಇಲ್ಲದ ಆಚಾರ್ಯರಿಗೆ ನಿಮ್ಮ ನಾಗಪ್ಪಯ್ಯನ ಆ ಒಳಹೆಸರು ಹೇಗೆ ಗೊತ್ತಿದ್ದೀತು ರಾಯರೆ? ಅವರು ಹೇಳಿದ ಕಾಕಾಕ್ಷಿ ಎಂಬುದಕ್ಕೆ "ಕಾಗೆಯ ಕಣ್ಣು" ಎಂದು ಮಾತ್ರ ಅರ್ಥ.

**ರಾಮ:**—ಹಾಗಾದರೆ ಯಾಕೆ ಆ ಮಾತನ್ನೆ ಹೇಳಿದುದು?

**ನೀಲ:**—ಸುಮ್ಮನೆ ತಮಾಷೆಗಾಗಿ.

**ರಾಮ:**—ಅದಕ್ಕಾಗಿಯೆ ನಾನೂ ಹೇಳಿದುದು; ತಮಾಷೆ ಮಾಡುವುದು ಚೆನ್ನಾಗಿಲ್ಲವೆಂದು.

ಅದನ್ನು ಕೇಳಿ ನೀಲಕಂಠನಿಗೆ ನಗೆಯೂ ಬೇಸರಿಕೆಯೂ "ನಾನು ತಾನು" ಎಂದುಕ್ಕಿತು. ಇಂಥ ಅರಿಗಂಟಿನ ಮೂಢರು ಬಳಕೆಯುಳ್ಳ ಕಿರಿಯರಾದರೆ "ಬೆಪ್ಪಾ, ಹಾಗಲ್ಲ, ಹೀಗೆ" ಎನ್ನಬಹುದು. ರಾಮಯ್ಯನೇನೋ ಹಿರಿಯನು, ಪರಿಚಯವಿಲ್ಲದವನು; ಹೊಸಗೆಳೆಯನಾದ ಕೃಷ್ಣರಾಯನ

ತಂದೆ, ಸತ್ಕಾರವನ್ನೊಂದಿದ ಮನೆಯ ಯಜಮಾನ; ಆದರೆ ಮೂಢನೆಂದರೆ ಶತಮೂಢ; ಅಂಥವನ ಮನಸ್ಸಿನ ಕೆಸರನ್ನು ತೊಳೆವುದೂ, ಮಸಿಯಕಾಳನ್ನು ತೊಳೆದು ಬಿಳಿಮಾಡುವುದೂ ಒಂದೇ ಎಂದುಕೊಂಡನು. ಆಗ "ಅರಸಿಕೇಷು ಕವಿತ್ವನಿವೇದನಂ ಶಿರಸಿ ಮಾಲಿಖ ಮಾಲಿಖ ಮಾಲಿಖ" ಎಂಬ ಮಾತೂ ನೆನಪಾಯಿತು. ತಂದೆಯ ಮಾತನ್ನು ಕೇಳಿ ಕೃಷ್ಣನಿಗೂ ಬೇಸರವಾಗಿತ್ತು. ಮೆದುವಾಗಿಯಾದರೂ ಮಾತಿಗೆ ಎದುರಾಡಿದರೆ ಅವನಿಗೆ ಸಿಟ್ಟು ಬಂದು ಬಿಡುವುದುಂಟು. ಅದರಿಂದ ತಂದೆಯ ತಪ್ಪೆಣಿಕೆಯನ್ನು ಸರಿಗೊಳಿಸಲಿಕ್ಕೆ ಎಡೆ ನೋಡುತ್ತಿದ್ದನು. ಲಕ್ಷ್ಮಮ್ಮ ಬಾಗಿಯರ ಮೋರೆಗಳೂ ಲಜ್ಜೆಯಿಂದ ಮುದುಡಿಕೊಂಡುವು. ಆಗ ಬೇಸತ್ತ ನೀಲಕಂಠನ ಕಡೆಗಣ್ಣು ಕೃಷ್ಣರಾಯನದಕ್ಕೆದುರಾಯಿತು. ತಾನು ಮತ್ತೂ ಮಾತಾಡುತ್ತಿದ್ದರೆ ರಾಮಯ್ಯನ ಸಿಟ್ಟು ಏರಿಬಿಡಬಹುದೋ ಎಂಬ ನೀಲಕಂಠನ ಸಂದೇಹದ ಸನ್ನೆಯೆ ಆ ನೋಟದ ಗುಟ್ಟು.

**ಕೃಷ್ಣ**:—ಅಪ್ಪಾ, ಆಚಾರ್ಯರು ನಾಗಪ್ಪಯ್ಯನ ತಮಾಷೆಗಾಗಿ ಹಾಗೆಂದುದಲ್ಲ.

**ರಾಮ**:—ಮತ್ತೆ ಯಾರ?

**ಕೃಷ್ಣ**:—ಗುರುತೇ ಇರಲಾರದ ನಾಗಪ್ಪಯ್ಯನನ್ನವರು ತಮಾಷೆ ಮಾಡುವುದಾದರೂ ಹೇಗೆ?

**ರಾಮ**:—ಮತ್ತೆ ಯಾರನ್ನು ತಮಾಷೆ ಮಾಡಿದುದು?

**ಕೃಷ್ಣ**:—ತನ್ನನ್ನೇ.

**ರಾಮ**:—ಹಾಗೆಂದರೇನೋ?

**ಕೃಷ್ಣ**:—ತಾನು ಈ ರಾತ್ರಿಯಲ್ಲಿ ಹಾಡಿದರೆ ಕಾಕಾಕ್ಷಿಗೆ ಉಪದ್ರವವಾದೀತೆಂದಲ್ಲವೆ ಅವರು ಹೇಳಿದುದು?

**ರಾಮ**:—ಹೌದು.

**ಕೃಷ್ಣ**:—ತನ್ನ ಕಂಠ ಸ್ವರವು ಕಾಗೆಯದರಂತೆ. ಅದನ್ನು ಕೇಳಿದರೆ ನಿದ್ದಿಸಿದ ಕಾಗೆಗಳೆಲ್ಲ ಬೆಳಗಾಯಿತೆಂದು ಭ್ರಮಿಸಿ ಎಚ್ಚತ್ತಾವು.

ಆದರಿಂದ ಕಾಗೆಗಳ ಕಣ್ಣುಗಳು ಉಪದ್ರವಗೊಂಡಾವಲ್ಲವೆ? ತನ್ನದು ವಿಕಾರ ಸ್ವರವೆಂಬುದನ್ನೇ ತಮಾಷೆಗಾಗಿ ಅವರು "ಕಾಕಾಕ್ಷಿಗೆ ಉಪದ್ರವ ವನ್ನೇಕೆ ಮಾಡಬೇಕು?" ಎಂದರು.

ಒಂದು ನಿಮಿಷಗಳೆದು ರಾಮಯ್ಯನು "ಹೋ ಹ್ಹಂ" ಎಂದನು. ಅವನು ಸ್ವಭಾವಕ್ಕಿಳಿದನೆಂಬುದರ ಸನ್ನೆಯೆ ಆ ನಗೆ. "ಹೊಸಬರೆದುರಿನಲ್ಲಿ ರಾಮಯ್ಯನ ನಿಜವೇಷವು ತೆರೆಸೀರೆಯ ಬಳಿಗೆ ಬಂದೇನೋ ಆಯಿತು; ರಂಗ ಸ್ಥಳಕ್ಕಾದರೂ ಬಾರದಿದ್ದರೆ ಸಾಕಿನ್ನು" ಎಂದು ಲಕ್ಷ್ಮಮ್ಮನು ಪ್ರಾರ್ಥಿಸು ತ್ತಿದ್ದುದು ಸಾರ್ಥಕವಾಯಿತು. "ಕಳ್ಳನಿಗೆ ಅಳ್ಳೆಯಲ್ಲಿ ಶಂಕೆ"ಯಾಗುವಂತೆ ತನಗೆ ಭಿನ್ನಾರ್ಥವುಂಟಾದುದಕ್ಕೆ ರಾಮಯ್ಯನಿಗೂ ಲಜ್ಜೆಯಾಯಿತು. ಆದರೂ ಆ ಲಜ್ಜೆಯ ಮುಗಿಲನ್ನು ನಗೆಯಿಂದ ಮುಸುಕಿಕೊಂಡನು. ಗಂಟೆಯೂ ಹತ್ತಾಯಿತು.

**ರಾಮು:**—ಆಚಾರ್ಯರೆ, ಕ್ಷಮಿಸಿರಿ. ಸ್ವಲ್ಪ ಅಚಾತುರ್ಯ ವಾಯಿತು.

**ಗೋವಿಂದ:**—ನಿಮ್ಮದು ಅಚಾತುರ್ಯವಲ್ಲ. ನಾನೇ ಹಾಗೆ ಮಾತಾಡಬಾರದಾಗಿತ್ತು.

**ನೀಲ:**—ಸರಿ. ಈಗಲಾದರೂ ಗೊತ್ತಾಯಿತೆ ಆಚಾರ್ಯರೆ? ರಾಮಯ್ಯನವರಲ್ಲಿ ಅಂಥ ತಪ್ಪೇನೂ ಇಲ್ಲ. "ಕಾಕಾಕ್ಷಿ" ಎಂಬ ಒಳ ಹೆಸರು ಈ ಊರಲ್ಲಿ ಆ ನಾಗಪ್ಪಯ್ಯನಿಗೆ ಪ್ರಸಿದ್ಧವಾಗಿರಬಹುದು. ಪದಗಳಿಗೆ ಎರಡರ್ಥವಿರುವಾಗ ಪ್ರಸಿದ್ಧಾರ್ಥವೆ ಮೊದಲು ಹೊಳೆದು ತೋರುವುದು ಪ್ರಕೃತಿ. ಲಕ್ಷಣಶಾಸ್ತ್ರವೂ ಹಾಗೇ ಸಾರುತ್ತಿದೆ.

**ರಾಮು:**—ಶಾಸ್ತ್ರದಲ್ಲಿಯೂ ಹಾಗಿದೆಯೆ? ಸರಿ ಸರಿ.

**ನೀಲ:**—ನಾಲ್ವರು ಹೊಸಬರು ನೆರೆದಿರುವಾಗ ಹಿಂದು ಮುಂದು ನೋಡಿಕೊಂಡೆ ಮಾತಾಡತಕ್ಕದು. ಈ ವಿಷಯವು ಗೊತ್ತಿದ್ದರೂ ಹುಡುಗಾಟಿಕೆಯಲ್ಲಿ ಬಳಕೆಗೆ ಬರುವುದಿಲ್ಲ. ಓದಿ ಬರುವುದೆ ಬೇರೆ; ತಿಳಿದು ಬರುವುದೆ ಬೇರೆ. ಅಂಥ ತಿಳಿವಿಗೆ, ವಯಸ್ಸಾಗಿ ಲೋಕಾನುಭವವು ನೆಲೆಗೊಳ್ಳಬೇಕು.

**ಶ್ಯಾಮು:**—ಹೋಹ್ಹುಂ; ಅಂಥ ಹುಡುಗಾಟಿಕೆ ಏನಾಗಿದೆ ಈಗ? ಇರಲಿ; ಗಂಟೆ ಹತ್ತಾಯಿತು. ನೀವೆಲ್ಲ ಬಹಳ ದಣಿದವರು, ಬೆಳಗ್ಗೆ ಮಾತಾಡುವ.

ಅತಿಥಿಗಳ ಒಪ್ಪುಗೆವಡೆದು ರಾಮಯ್ಯನು ಕೆಳಗಯ್ದಿದನು. ಅವ ನೊಡನೆ ಲಕ್ಷ್ಮಮ್ಮನೂ ಬಾಗಿಯೂ ಹೋದರು. ದೂರದಿಂದ ಬಂದುದು, ರಾತ್ರಿ ಏರಿದುದು, ಅದರ ಮೇಲೆ ರಾಮಯ್ಯನ ಕಿರಿಕಿರಿ, ಇವುಗಳಿಂದಾಗಿ ಮೂವರ ಮನಸ್ಸನ್ನೂ ಮಂಕು ಮುಸುಕಿತ್ತು. ಕೃಷ್ಣರಾಯನಿಗಂತೂ ಮಾತೇ ತೋರುತ್ತಿರಲಿಲ್ಲ. ಜಾಣ್ಮೆಯ ಮಾತೊಂದನ್ನು ಆರಿಸಿ ವೃಥಾ 'ಹಾಲಿನಲ್ಲಿ ಹುಳಿ ಹಿಂಡಿದೆನಲ್ಲಾ' ಎಂಬ ಬೇಸರವು ಗೋವಿಂದಾಚಾರ್ಯನ ತಲೆಯಲ್ಲೆಲ್ಲ ಹರಡಿತ್ತು. ನೀಲಕಂಠನಾದರೋ ಇಂಥ ಬೇಸರಗಳ ಪಾನಕ ಗಳನ್ನೆಷ್ಟೋ ಬಾರಿ ಕುಡಿದವನು. ಆದರೂ, ಆ ಇಬ್ಬರ ಪಶ್ಚಾತ್ತಾಪವನ್ನು ಹಾಗೇ ಉಳಿಸಿ ಮಲಗಲಿಕ್ಕೆ ಮನಸ್ಸೊಪ್ಪಲಿಲ್ಲ ಅವನಿಗೆ.

**ನೀಲ:**—ಏನು, ಈ ಐದು ನಿಮಿಷದೊಳಗೆ ರಾಯರ ಮೋರೆಯನ್ನು ನಿದ್ದೆ ಆವುಕಿ ಬಿಟ್ಟಂತಿದೆ!

**ಕೃಷ್ಣ:**—ಹೌದು.

**ಗೋವಿಂದ:**—(ವ್ಯಸನದಿಂದ) ಮಾಡುವುದೇನು? ನನ್ನ ನಾಲಿಗೆ ಯಾವಾಗಲೂ ಸಡಿಲು. ಅದನ್ನು ಬಿಗಿ ಹಿಡಿದುಕೊಳ್ಳುತ್ತಿದ್ದರೆ ರಾಯರಿಗೆ ಈ ಬೇಸರವಾಗುತ್ತಿತ್ತೆ?

**ನೀಲ:**—(ನಗುತ್ತಾ) "ಉಂಡ ಮೇಲೆ ಜಾತಿ ಗೇಳುವುದು" ನಮ್ಮ ಆಚಾರ್ಯರ ಹುಟ್ಟುಗುಣ. ಯಾವ ಗಟ್ಟವನ್ನು ಹತ್ತಿದರೂ ಇಸ್ನಮು ಹೋದೀತೇ?

**ಗೋವಿಂದ:**—ಹೌದು; ಹಾಗೇ ಹೇಳಬೇಕಷ್ಟೆ.

**ಕೃಷ್ಣ:**—ಅದೊಂದೂ ಇಲ್ಲ ಆಚಾರ್ಯರೇ. ಹಾಗೆ ಮಾತಾಡು ವುದು ನಮ್ಮ ತಂದೆಯವರ ಸ್ವಭಾವ. ನಾಲಿಗೆ ಸಡಿಲೆಂದು ನೀವು ವ್ಯಸನಗೊಂಡಂತೆ, ತಮ್ಮ ಅವಿಚಾರಕ್ಕಾಗಿ ನಮ್ಮ ತಂದೆಯವರಿಗೆ ವ್ಯಸನ

ವಾಗಿದೆಯೆ? ಇಲ್ಲ. ಹಾಗಿರುವಾಗ ವೃಥಾ ಮರುಕಗೊಂಡು ನನ್ನ ಹೃದಯ ವನ್ನೂ ಮತ್ತಷ್ಟು ಯಾಕೆ ಬೇಯಿಸುತ್ತೀರಿ.

**ಗೋವಿಂದ:**—ಇಲ್ಲ; ಹಾಗಾದರೆ ವ್ಯಸನಗೊಳ್ಳುವುದಿಲ್ಲ. ಆದರೆ ಈ ಸಂದರ್ಭದಲ್ಲಿ ನಿಮ್ಮಿಬ್ಬರ ಅರ್ಥ ವ್ಯಾಖ್ಯಾನಗಳಿಲ್ಲದಿರುತ್ತಿದ್ದರೆ ನನ್ನ ಗತಿ ಏನಾಗಬೇಕಿತ್ತೊ?

**ನೀಲ:**—ಹಿಂದಿನ ಆಚಾರ್ಯರ ಸೂತ್ರಗಳಿಗೆ ಅವರ ಪರೋಕ್ಷದಲ್ಲಿ ಒಬ್ಬೊಬ್ಬರು ಒಂದೊಂದು ಅರ್ಥವನ್ನು ಬರೆದರೆಂಬುದು ಆಶ್ಚರ್ಯವಲ್ಲ. ಇಂದಿನ ಈ ಆಚಾರ್ಯರ ಸೂತ್ರಕ್ಕೆ ಅವರೆದುರಿನಲ್ಲೆ ಭಿನ್ನಾರ್ಥವನ್ನು ಬರೆದುದು ಮಾತ್ರವಲ್ಲ; ಅವರನ್ನೂ ಒಪ್ಪಿಸಿದುದು ಆಶ್ಚರ್ಯವು.

**ಗೋವಿಂದ:**—ಹಾಗಾದರೆ ನನ್ನನ್ನೂ ಆ ಆಚಾರ್ಯಪದವಿಯ ಲ್ಲೇರಿಸುತ್ತೀರೇನು?

**ನೀಲ:**—ಹೌದು; ಸಂದೇಹವೇನು? ಇರಲಿ; ರಾಯರೆ, ಪುಣ್ಯ ಪುರುಷನಾದ ಆ ನಾಗಪ್ಪಯ್ಯನ ಚರಿತ್ರೆ ಏನು?

**ಕೃಷ್ಣ:**—ಅವನು ಪುಣ್ಯಪುರುಷನೆಂದು ನಿಮಗೆ ಹೇಗೆ ಗೊತ್ತಾಯಿತು.

**ನೀಲ:**—ಹೆಸರು ಹೀಗೆ ವ್ಯಾಖ್ಯಾನಕ್ಕೆಡೆಯಾಗಬೇಕಾದರೆ ಅವನು ಪುಣ್ಯಪುರುಷನೆ ಆಗಿರಬೇಕೆಂಬುದನ್ನು ಅನುಮಾನಿಸಲೂ ಬಹುದಲ್ಲವೆ?

**ಕೃಷ್ಣ:**—ಇದೇನೋ ಮಾತಿಗೆ ಮಾತಾಯಿತಷ್ಟೆ. ನೀವು ಏನೇ ಹೇಳಿರಿ. ಈ ಊರ ಪರಿಚಯವು ನಿಮಗಿದೆಯೆಂಬುದು ನನ್ನೆದೆಯನ್ನು ಹೊಕ್ಕುಬಿಟ್ಟಿದೆ.

**ನೀಲ:**—ನಾನು ಚಿಕ್ಕವನಿದ್ದಾಗ ಬಂದವನು ಕಾಡೂರ ಭೀಮಯ್ಯ ನವರಲ್ಲಿ ಕೆಲವು ದಿನ ಇದ್ದೆನೆಂದು ಮೊದಲೆ ಹೇಳಿದ್ದೆನಷ್ಟೆ. ಆಗ ಭೀಮಯ್ಯನವರೂ ಈ "ಕಾಕಾಕ್ಷಿ"ಯ ಉಪಟಳವನ್ನು ಸೂಚಿಸಿದ್ದರು.

**ಕೃಷ್ಣ:**—ಹಾಗೆ ಒಳಗೊಳಗಿನ ವಿಷಯವನ್ನು ನಿಮ್ಮಲ್ಲವರು ಸೂಚಿಸ ಬೇಕಾದರೆ ನೀವು ಬಹಳ ದಿವಸವಿದ್ದು ಪಳಗಿದವರಾಗಿದ್ದಿರಬೇಕು.

**ನೀಲ:**—ಹೌದು. ನಾನು ಮನೆಯವನೆ ಆಗಿಬಿಟ್ಟಿದ್ದೆನು. ಆ ಗಂಡಹೆಂಡಿರಿಗೆ ನಾನೆಂದರೆ ಪುತ್ರವಾತ್ಸಲ್ಯ. ಅದರಿಂದ ಈ ಸಾರಿಯೂ ನಾನು ಅಲ್ಲಿಗೆ ಬಂದೇ ಇಲ್ಲಿಗೆ ಬರಬೇಕಿತ್ತು.

**ಕೃಷ್ಣ:**—ನೀವು ಅಲ್ಲಿಗೇ ಮೊದಲು ಬರುತ್ತಿದ್ದರೆ ಆ ಮೇಲೆ ಇಲ್ಲಿಗೆ ಬರುವುದು ಅಸಾಧ್ಯವಾಗುತ್ತಿತ್ತು. ನಮ್ಮ ತಂದೆಯವರಿಗೂ ಭೀಮಯ್ಯ ನವರಿಗೂ ಎಣ್ಣೆ ಸೀಗೆ.

**ನೀಲ:**—ಅದೇಕೆ?

**ಕೃಷ್ಣ:**—ಅದಕ್ಕೆ ಆ ಕಾಕಾಕ್ಷಿ ನಾಗಪ್ಪಯ್ಯನೆ ಕಾರಣ. ಮಧ್ಯಸ್ಥ ನಾಗಿದ್ದು ಭೀಮಯ್ಯನವರಿಂದ ತಂದೆಯವರಿಗೆ ಅಡವು ದಸ್ತೈವಜು ಬರೆ ಯಿಸಿದವನೂ, ಆ ಮೇಲೆ ತಂದೆಯವರಿಗೆ ಸಲ್ಲದ ಬೋಧನೆಗೊಟ್ಟು ಅವರ ಆಸ್ತಿಯನ್ನೆಲ್ಲ "ಏಲಂ" ಮಾಡಿಸಿದವನೂ ಅದೆ ನಾಗಪ್ಪಯ್ಯ.

**ನೀಲ:**—(ಆಲೋಚಿಸಿ) ಆಗಲಿ; ಅದರಿಂದ ನನಗಿಲ್ಲಿಗೆ ಬರಲಿಕ್ಕೆ ತಡೆ ಏನು?

**ಕೃಷ್ಣ:**—(ಒಂದಿಷ್ಟು ತಡೆದು) ನಿಮ್ಮಂಥ ಉದಾತ್ತ ವಿಚಾರಿಗಳಿಗೆ ಸರಿಯದು. ಆದರೆ, ಈ ಹಳ್ಳಿಯವರ ಪದ್ಧತಿ ತೀರ ವಿಪರೀತ.

**ನೀಲ:**—ಅದಕ್ಕೆ ನಾವೇನು ಮಾಡುವುದು? ಒಂದಿಷ್ಟು ವಿದ್ಯಾಭ್ಯಾಸ ವನ್ನು ಮಾಡಿಯೂ, ಆ ಹಿಂದಣ ಕುರುಡು ದಾರಿಯನ್ನು ಬಿಡದಿದ್ದರೆ, ಏನು ಮಾಡಿದಂತಾಯಿತು ನಾವು?

**ಕೃಷ್ಣ:**—ಅದೇನೋ ಹೌದು.

**ನೀಲ:**—ಹಾಗಾದರೆ ನಾಳೆ ಬೆಳಗ್ಗೆ ಭೀಮಯ್ಯನವರಲ್ಲಿಗೆ ಹೋಗ ಬೇಕು. ನೀವೂ ಬರುತ್ತೀರಷ್ಟೆ.

**ಕೃಷ್ಣ:**—(ಸ್ವಲ್ಪ ತಡೆದು) ನಾನು ಬಂದರೆ ಅವರೆಲ್ಲ ಏನೆಣಿಸಿಕೊಳ್ಳು ವರೊ? ನಮ್ಮಿಂದಾಗಿಯೆ ಬಾರದ ಬನ್ನಕ್ಕೆ ಬಂದವರವರು. ನಾನು ಯಾವ ಒಳಸಂಚುಗಳಿಗೆ ಸೇರದವನಾದರೂ ಆ ಕಷ್ಟ ಪಡುವವರ ಕಣ್ಣಿಗೆ ಕಸವಾಗುವುದೇಕೆ?

**ನೀಲ:**—ಅದೆಲ್ಲ ಹಾಗಿರಲಿ; ನಾನಿದ್ದೇನಲ್ಲವೆ?

ನೀಲಕಂಠನ ಈ ಮಾತನ್ನು ಕೇಳುವಾಗ ಕೃಷ್ಣರಾಯನ ಮನಸ್ಸು ಏನೋ ಒಂದು ತೆರನಾಯಿತು. ಆದರೆ ಅಷ್ಟರಲ್ಲಿ ಗಂಟೆಯೂ ಹತ್ತುವರೆ ಯಾಗಿತ್ತು; ನಿದ್ದೆಯೂ ಗರಿಗಟ್ಟಿತ್ತು. ಅದರಿಂದ ಮುವಮ್ಮಾತನ್ನಾಡದೆ "ಆಗಲಿ" ಎಂದನು. ಎಲ್ಲರೂ ಮಲಗಿದರು.

---

೫.

ಭೀಮಯ್ಯನು ಸತ್ತುಹೋಗಿ ಬೂದಿಗೂಡುವ ವರೆಗೆ ಮಾತ್ರವೆ ಕಾಡೂರಲ್ಲಿದ್ದುದು ದೋಪಿ. ಆ ಮೇಲೆ ಮಕ್ಕಳೊಡನೆ ಅಕ್ಕನನ್ನು ತನ್ನ ನಾಗೂರ ಮನೆಗೆ ಕರಕೊಂಡು ಹೋಗಿದ್ದನು ಶಿವರಾಯನು. ಕಟ್ಟಕಡೆಗೆ ಸಪಿಂಡೀಕರಣದ ವರೆಗಿನ ಕ್ರಿಯಾಭಾಗವಾದರೂ ಸತ್ತಲ್ಲೇ ಸಾಗಬೇಕೆಂಬುದು ಸಾಲ್ವಳಿಕೆ. ಮಾಡುವುದೇನು? ಶಿವರಾಯನೆಂದರೆ ಒಬ್ಬಂಟಿಗನು. ಅದರಿಂದ ಅಕ್ಕನನ್ನು ಹೇಗಾದರೂ ಸಮಾಧಾನ ಪಡಿಸಿದ್ದನು. "ಶಿವರಾಯನು ತಮ್ಮನಾದರೂ ಮೊದಲೊಮ್ಮೆ ವೃಥಾ ತನ್ನಲ್ಲಿ ಕವಲೆಣಿಸಿದವನು. ಒಕ್ಕರುಳಿನ ಮರುಕವು ಈಗ ಅವನನ್ನೇನೋ ಮೆದುಮಾಡಿದೆ; ಆದರೂ ಆ ರಾಮಯ್ಯನ ತಂಗಿಯದಲ್ಲವೆ ಅವನ ತಲೆದಿಂಬಿನ ಮಂತ್ರ? ಅದಂತಿರಲಿ; ತಾವು ಬಚ್ಚ ಬಡವರು; ಅವರು ಹಣದ ಹೆಮ್ಮೆಯವರು. ಈ ಆಡನ್ನು ಆ ಆನೆಯ ಲಾಯದಲ್ಲಿ ಕಟ್ಟುವುದೆಂತು?" ಎಂಬ ಕವಲೆಣಿಕೆ ದೋಪಿಗೆ ಮೊತ್ತಮೊದಲು ತಲೆದೋರಿತ್ತು. ಆದರೆ ಆ ಎಣಿಕೆಯನ್ನು ಬಿಗಿವಿಡಿಯಲಿಕ್ಕೆ ಸಾಧ್ಯವಾಗಲಿಲ್ಲ ಅವಳಿಗೆ. ಅನಾಥಳು, ಮಾನವತಿ; ಎರಡು ಮೂರು ಕಿರುಮಕ್ಕಳನ್ನವುಕಿಕೊಂಡು ಆಗದವರ ಎಡೆಯುದ ಆ ಕಾಡೂರಿನಲ್ಲಿ ಇರುವುದಾದರೂ ಹೇಗೆ? ಮುಂದೆ ಹೇಗೂ ಆಗಲಿ; ಇಂದು "ಕಾಲಕ್ಕೆ ತಕ್ಕ ಕೋಲ"ವನ್ನು ಕಟ್ಟಲೆಬೇಕು; ಎಂದೆಣಿಸಿ ತಮ್ಮನೊಡನೆ ಹೋದಳು. ಹೋದಮೇಲೆ ಕೆಲದಿನಗಳು ಮಡಿಚಿದಂತೆ ತನ್ನೆಣಿಕೆಯೆಲ್ಲ ಬಿಸಿಲ್ದೊರಿಯಾಗಿ ತೋರಿತವಳಿಗೆ. "ರಾಮಯ್ಯನ ತಂಗಿ" ಎಂಬ ಬೂತಗನ್ನಡಿಯಿಟ್ಟು ನೋಡಿದುದೇ ಆ ಪುಟ್ಟಮ್ಮನ ಮೋರೆ ಹಾಗೆ ತೋರಲು ಕಾರಣವು. ರಾಮಯ್ಯನ ತಂಗಿಯಾದರೇನು? ಪುಟ್ಟಮ್ಮನೆಂದರೆ ಅವನ ಹೆಂಡತಿ ಲಕ್ಷ್ಮಮ್ಮನ ಹಜ್ಜೆಯಲ್ಲಿ ಹಜ್ಜೆಯಿಟ್ಟು ನಡೆದವಳು. ಲಕ್ಷ್ಮಮ್ಮನ ನಡೆನುಡಿಯೆಂದರೆ ಬಂಗಾರದ ಒರೆಯಲ್ಲಿ ದೊರೆವಡೆದುದು. ಈ ವಿಷಯವೆಲ್ಲ ಮೆಲ್ಲಮೆಲ್ಲನೆ ದೋಪಿಗೆ ಗೊತ್ತಾಯಿತು. ದೋಪಿಯನ್ನು "ಮುಖದಲ್ಲಿ ನೋಡಲೆ"ಂದೊಮ್ಮೆ ಲಕ್ಷ್ಮಮ್ಮ ಶಿವರಾಯನಲ್ಲಿಗೆ ಹೋಗಿದ್ದಳು. ಆಕೆ ತನ್ನನ್ನು ನೋಡಿ ಮಾತಾಡುವ ಸಂದಿ.

ನಲ್ಲಿ ದೋಷಿಗುಂಟಾದ ಮಾನಸಿಕಸಂಕಷ್ಟವಷ್ಟಿಷ್ಟಲ್ಲ. ಆದರೆ ಲಕ್ಷ್ಮ್ಮನನ್ನು ಕಂಡು ಮಾತಾಡಿದ ಮೇಲೆ "ಇಂಥ ಬಂಗಾರದ ನಡತೆಯಲ್ಲಿಯೂ ಚೆಂಬನ್ನು ಬೆರಸಬಹುದೆ ನಾನು?" ಎಂದು ಪಶ್ಚಾತ್ತಾಪಗೊಂಡಿದ್ದಳು.

ಪುಟ್ಟಮ್ಮನ ಪ್ರೇಮ, ಭಕ್ತಿಗಳೆರಡೂ ಒಂದಾಗಿ ಬೆರಸಿ ದೋಷಿಯನ್ನೊಂದಿತ್ತು. ಅದರಿಂದ, ಮೊದಲೊಮ್ಮೆ ನರಕವೆಂದು ಭ್ರಮೆಗೊಳಿಸಿದ ತಮ್ಮನ ಮನೆ ಈಗ ಸ್ವರ್ಗವಾಗಿ ಆನಂದಗೊಳಿಸಿತು ಅಕ್ಕನನ್ನು. ಓಲೆ ಮೂಗುತಿಯ ಭಾಗ್ಯವೊಂದನ್ನು ದುರದೃಷ್ಟವು ನುಂಗಿಬಿಟ್ಟರೂ ಮತ್ತಾವ ಸುಖಕ್ಕೂ ಅವಳಿಗೆ ಕಡಿಮೆಯಿದ್ದಿಲ್ಲ. ಆದರೂ ಕುಟ್ಟೆ ಹುಳುವಿನಂತೆ ಗಂಗಾಧರನ ಎಣಿಕೆಯೊಂದು ಅವಳೆದೆಯನ್ನು ಒಳಗೊಳಗೇ ಕುಟ್ಟುತ್ತಿತ್ತು. ಅದನ್ನರಿತ ಪುಟ್ಟಮ್ಮ ಶಿವರಾಯರು ಆಗಾಗ ಅವಳನ್ನು ಸಮಾಧಾನಗೊಳಿಸುತ್ತಿದ್ದರು.

ಭೀಮಯ್ಯನ ಉತ್ತರಕ್ರಿಯೆಯನ್ನು ವಿಧಿವತ್ತಾಗಿ ನಾಲ್ವಳಿಕೆಗೆ ತಕ್ಕಂತೆ ನಡೆಯಿಸಿದ್ದನು ಶಿವರಾಯನು. ಆ ಕೀರ್ತಿಶೇಷನ ಜೀವನ ಕಾಲವು ದೂರದೂರವಾದಂತೆ, ಅವನಲ್ಲಿದ್ದ ಭಕ್ತಿಪ್ರೇಮಗಳು ಹತ್ತಿರ ಹತ್ತಿರವಾಗುತ್ತ ಬಂದುವು. ಅವನ ಬೂದಿಯಿಂದ ಅಸ್ಥಿಯನ್ನಾರಿಸುತ್ತಿದ್ದಾಗಲೆ, ಹರಿಹಂಚಾದ ಆಸ್ತಿಯಲ್ಲಿ ಏನಾದರೂ ಉಳಿಯಿಸಬೇಕೆಂಬ ಎಣಿಕೆ ಶಿವರಾಯನಿಗೆ ಉಂಟಾಗಿತ್ತು. ಗಂಗಾಧರನನ್ನು ಕಂಡುಹಿಡಿವುದೆ ಪ್ರಥಮಕರ್ತವ್ಯವೆಂದೆಣಿಸಿ ಒಮ್ಮೆ ಗೋಕರ್ಣದತ್ತಕಡೆಗೆ ಒಬ್ಬನನ್ನು ಕಳುಹಿದನು; ಫಲಕಾರಿಯಾಗಲಿಲ್ಲ. ಆದರೂ ಅವನ ಆಸೆಯ ಕುಡಿ ಬಾಡಿರಲಿಲ್ಲ.

ಭೀಮಯ್ಯನು ತೀರಿಹೋಗಿ ತಿಂಗಳೊಂದಾಗಿತ್ತು. ಆ ದಿನವೆ ಮೊತ್ತ ಮೊದಲ ಮಾಸಿಗ. ಗಂಟೆ ಒಂಬತ್ತು ಕಳೆದಿತ್ತು. ಪುರೋಹಿತರು ಬಂದಿರಲಿಲ್ಲ. ಹೊಸಬರಾರೂ ಇಲ್ಲದ ಸಮಯವನ್ನು ನೋಡಿ ಮೆಲ್ಲನೆ ಅಂಗಳಕ್ಕಿಳಿದು ತುಳಸಿಯನ್ನು ಕೊಯ್ಯುತ್ತಿದ್ದಳು ದೋಷಿ. ಚಾವಡಿಯೊತ್ತಿನ ಕೋಣೆಯಲ್ಲಿ ಮಕ್ಕಳೊಡನೆ ಕಾಫಿಗುಡಿಯುತ್ತಿದ್ದನು ಶಿವರಾಯ. "ಶಿವ, ಭಟ್ಟರು ಬಂದರೆಂದು ತೋರುತ್ತಿದೆ" ಎಂದು ಹೇಳುತ್ತಾ

ದೋಪಿ ಚಾವಡಿಗೇರಿದಳು. ಶಿವರಾಯನು ನಿಲುಕಿನೋಡಿದನು; ಹೊರಗೆ ಬಂದನು. "ಏನಕ್ಕ, ನಮ್ಮ ಕಿಟ್ಟಪ್ಪನೂ ಭಟ್ಟರೊಳಗೆ ಸೇರಿದನೆ?" ಎಂದು ನಗುತ್ತಾ ಕೇಳಿದನು. "ಏನು ಕಿಟ್ಟಪ್ಪನೆ? ನಾನು ಸರಿಯಾಗಿ ನೋಡಲೂ ಇಲ್ಲ; ನೋಡಿದರೆ ಕಾಣುವುದೂ ಇಲ್ಲ. ಯಾರೋ ಬರುವಂತೆ ತೋರಿತು; ಭಟ್ಟಕ್ಕಳೇ ಆಗಿರಬೇಕೆಂದು ಎಣಿಸಿಹೋಯಿತು. ಕಿಟ್ಟಪ್ಪಾ, ಸಿಟ್ಟು ಗೊಳ್ಳಬೇಡ" ಎನ್ನುವಾಗ ಅವಳ ಕಣ್ಣಿನಲ್ಲಿ ನೀರು ತೊಟ್ಟಿಕ್ಕಿತು. "ಸಿಟ್ಟೇನಮ್ಮಾ, ಕೆಲವು ಸರ್ತಿ ಹೂವಿನ ಮಾಲೆ ಹಾವಾಗಿ ತೋರಿಬಿಡು ವುದೂ ಉಂಟು" ಎಂದು ಹಸೆಯಲ್ಲಿ ಕುಳಿತುಕೊಂಡನು. ಅವನೊಡನೆ ಗೋವಿಂದಾಚಾರ್ಯನೂ ಕುಳಿತನು. ನೀಲಕಂಠನು ಮಾತ್ರ ಜಗಲಿ ಯಲ್ಲಿ ಅತ್ತಿತ್ತ ಅಡಿಯಿಡುತ್ತಾ ಇದ್ದನು. "ಕುಳಿತುಕೊಳ್ಳಿ ಶಾಸ್ತ್ರಿ ಗಳೆ" ಎಂದು ಕೃಷ್ಣರಾಯನು ಒತ್ತಾಯಿಸುತ್ತಿದ್ದರೂ ಆಗಾಗ ಎಡೆಗಡಿದು "ಹುಂ ಹುಂ" ಎನ್ನುತಿದ್ದನಲ್ಲದೆ ಕುಳಿತುಕೊಳ್ಳಲಿಲ್ಲ. ಅವನ ನೋಟದ ಗಾಳಿಪಟವು ಆಗ ಎಲ್ಲೆಲ್ಲಿಯೋ ಅಲೆದಾಡುತ್ತಿತ್ತು. ಮನಸ್ಸಿನ ದಾರವನ್ನು ಮಾತ್ರ ಎದೆಗೈ ಬಿಗಿವಿಡಿದಿತ್ತು. ದೋಪಿಯ ಕಣ್ಣು ಅವನನ್ನೆ ಅರಯ್ಯುತ್ತಿತ್ತು. ಶಿವರಾಯನಿಗೆ ಆಗಂತುಕರ ಪರಿಚಯವನ್ನು ಕೃಷ್ಣರಾಯನು ಮಾಡಿಸು ತ್ತಿದ್ದನು. "ಇವರೇ ನೀಲಕಂಠ ಶಾಸ್ತ್ರಿಗಳೆಂಬವರು" ಎಂಬುದನ್ನು ಕೇಳಿ ದೊಡನೆ "ರಾಯರೆ, ತಡೆಯಿರಿ. ಈ ಪಾಪಿಯ ಪರಿಚಯ ಮಾಡಿಸುವುದು ಹಾಗಲ್ಲ" ಎಂದ ನೀಲಕಂಠನ ಕಣ್ಣು ಹೊನಲುಕ್ಕಿತು; ಕೊರಳು ಗದ್ಗದ ವಾಯಿತು. ಒಡನೆ ಜಗಲಿಯಿಂದ ಚಾವಡಿಗೆ; ಚಾವಡಿಯಿಂದ ಬಾಗಿಲ ಬಳಿಗೆ ಸರಿದನು. ಆಗ ಸ್ತಬ್ಧಳಾಗಿದ್ದ ದೋಪಿಯ ನೆಡುಗಣ್ಣು ಅವನ ಮೋರೆಯಲ್ಲಿ ನಟ್ಟಿತ್ತು. ನೀಲಕಂಠನು ಆಕೆಯ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಗ ಅವನ ಬಾಯಲ್ಲಿ ಏನೇನೋ ಗುಡು ಗುಡಿಸುತ್ತಿತ್ತು. ಅದೇನೆಂದು ಬಹುಶಃ ಅವನಿಗೂ ಗೊತ್ತಿರಲಿಲ್ಲ. ನಮ ಸ್ಕಾರಕ್ಕಾಗಿ ಬಾಗಿದಾಗ, ಕೈಗಳನ್ನವನ ತಲೆಯಲ್ಲಿಟ್ಟು ದೋಪಿಯೂ ಕುಳಿತು ಹೋದಳು. ದೋಪಿಯ ಕಾಲುಗಳಲ್ಲಿ ನೀಲಕಂಠನ ಮೋರೆ, ಅವನ ಹಿಂದಲೆಯಲ್ಲಿ ಆಕೆಯ ಕೆನ್ನೆ. ಇಬ್ಬರ ದುಃಖಕ್ಕೂ ಪಾರವಿಲ್ಲ.

ಇಷ್ಟೆಲ್ಲ ಸಂಗತಿ ನಡೆದುದು ನಿಮಿಷದೊಳಗೆ. ಮಾತಾಡುತ್ತಿದ್ದವರು ಬೆರಗಾಗಿ ಹತ್ತಿರ ಬಂದು ನಿಂತಿದ್ದರು; ಮಿಂದು ಮಡಿಯುಟ್ಟು ಕಡೆಯುತ್ತಿದ್ದ ಪುಟ್ಟಮ್ಮನು ಅಲ್ಲಿಂದಲೇ ಓಡಿ ಬಂದು ಹಿಂದೆ ನಿಂತಿದ್ದಳು. ಗಲಭೆಯಿಂದಾಗಿ ತಮ್ಮ ಜಗಳದ ಅರಿಗಂಟುಗಳೆಲ್ಲ ಸಡಿಲಿ ಹೋದ ಹಸುಗೂಸುಗಳು ಈ ನೋಟದಲ್ಲೆ ಮುಳುಗಿಹೋಗಿದ್ದುವು.

**ಶಿವ:**—"ಕೃಷ್ಣ, ಇದೇನು?" ಎಂದು ಕಣ್ಸನ್ನೆಯಿಂದ ಕೇಳಿದನು.

**ಕೃಷ್ಣ:**—ನನಗೊಂದೂ ತಿಳಿಯದು. ಭೀಮಯ್ಯನವರಲ್ಲಿಗೆ ಒಮ್ಮೆ ಹೋಗಿದ್ದೆನೆಂದು ಶಾಸ್ತ್ರಿಗಳು ಮೊದಲೆ ಹೇಳಿದ್ದರು; ಮತ್ತು ಅವರ ಮನೆಯ ವಿಚಾರವನ್ನೂ ಕುತೂಹಲದಿಂದ ವಿಚಾರಿಸಿದ್ದರು. ನಾನು ಮಂಗಳೂರಿಂದ ರಜೆ ಸಿಕ್ಕಿದೊಡನೆ ಹೋದುದಲ್ಲವೆ? ಅದರಿಂದ ಭೀಮಯ್ಯನವರು ತೀರಿ ಹೋದ ಸಂಗತಿ ಆಗ ಗೊತ್ತಿರಲಿಲ್ಲ. ನಿನ್ನೆ ಮನೆಗೆ ಬಂದರೂ, ಮಾತಿನ ಮೇಲೆ ಮಾತಾಯಿತಲ್ಲದೆ, ಆ ಪ್ರಸ್ತಾವಕ್ಕೆಡೆಯಾಗಲಿಲ್ಲ. ಶಾಸ್ತ್ರಿಗಳ ಒತ್ತಾಯದಂತೆ ಈ ಹೊತ್ತು ಬೆಳಗ್ಗೆ ಕಾಡೂರಿಗೆ ಹೊರಟವರು ನಾವು. ಆಗ ಅಮ್ಮ ಹೇಳಿದಳು ಕಾಡೂರಿನ ಸ್ಥಿತಿಗತಿಯನ್ನು. ಅದನ್ನರಿತೊಡನೆ ಶಾಸ್ತ್ರಿಗಳು ಕೊರಗಿ ಹೋಗಿದ್ದಾರೆ.

**ಶಿವ:**—ಅಕ್ಕಾ, ಇದೇನು?

**ದ್ರೌಪಿ:**—(ಗದ್ಗದಿಸುತ್ತ) ಬೇರೇನು? ಮುಸಿಯುದ್ದಿ ಹೊರೆದ ನನ್ನ ಭಾಗ್ಯಾಕ್ಷರವು.

**ಶಿವ:**—(ಆಶ್ಚರ್ಯದಿಂದ) ಹಾಗೆಂದರೇನು?

**ದ್ರೌಪಿ:**—ಇದು ನಮ್ಮ ಅಣ್ಣಾಜಿಯೆಂದು ನಿನಗಿನ್ನೂ ಗೊತ್ತಾಗಲಿಲ್ಲವೆ?

ಹೊತ್ತಿದ ಮನೆ ಚಿಗುರಿತು; ಮಾಸಿಗದ ಮನೆ ಮದುವೆಯ ಮನೆಯಾಯಿತು. ಶಿವರಾಯನ ಮನಸ್ಸಿನ ನಾಟ್ಯಕ್ಕೆ ಸರಿಯಾಗಿ ತಾಳ ಬಾರಿಸಬಲ್ಲವನೆ ಇರಲಿಲ್ಲವೆನ್ನಬಹುದು. ಪುಟ್ಟಮ್ಮನಿಗೆ ಕಯ್ಯದು ಕೊರಳಿನಲ್ಲಿ, ಕೊರಳಿನದು ಕಾಲಲ್ಲಾಯಿತು. ಗೋವಿಂದಾಚಾರ್ಯ ಕೃಷ್ಣರಾಯರು ಬೆರಗಾಗಿ ಗಂಗಾಧರನನ್ನೇ ನೋಡುತ್ತಿದ್ದರು. "ಕಟ್ಟಕಡೆಗಾದರೂ ಬಂದ

ಬುದ್ಧಿಗೆ ಬೆಲೆಯೊದಗಿತು” ಎಂದನು ಶಿವರಾಯ. “ಆ ಬಂದ ಬುದ್ಧಿಗೆ ಬಿತ್ತಾದುದು ನಾನಲ್ಲವೆ?” ಎಂದು ನಗುತ್ತಾ ಒಂದಾಣಿಗುಟ್ಟಿದಳು ಪುಟ್ಟಮ್ಮ. ತಿರುಗಿ ಆಕೆಯನ್ನು ನೋಡಿದ ಶಿವರಾಯನ ಕಣ್ಣಿನಲ್ಲಿ ಕಿನಿಸು, ತುಟಿಯಲ್ಲಿ ನಗೆ, ಕದಪಿನಲ್ಲಿ ಆ ಯೆರಡರ ಕೂಟ. ಒಂದರೆ ನಿಮಿಷಗಳೆದು “ಓಹೋ, ಬುದ್ಧಿಯ ಮುದ್ದೆಯಲ್ಲವೆ ನೀನು?” ಎಂದು ನಕ್ಕುಬಿಟ್ಟನು. ಇಷ್ಟಾಗುವಾಗಲೂ ಗಂಗಾಧರನು ನಮಸ್ಕರಿಸಿಕೊಂಡೆ ಇದ್ದನು; ದೋಪಿ, ಅವನ ತಲೆಯನ್ನೆತ್ತಿ ತೊಡೆಯ ಮೇಲಿಟ್ಟು ಕುಳಿತುಕೊಂಡೇ ಇದ್ದಳು. ಆಗ, ಮಾಸಿಗಕ್ಕಾಗಿ ರಾಮಯ್ಯನಲ್ಲಿಂದ ಲಕ್ಷ್ಮಮ್ಮ ಬಾಗಿಯರೂ ಬಂದಿದ್ದರು. ಅವರು ಬರಿಯ ಮಾಸಿಗಕ್ಕಾಗಿಯೆ ಬಂದುದಾಗಿರಲಿಕ್ಕಿಲ್ಲ; ಈ ಹೊಸಬರು ಬಂದಿರುವುದೂ ಅವರ ಆಗಮನಕ್ಕೆ ಒಂದು ಕಾರಣವಾಗಿದ್ದಿರಬಹುದು. ಅವರೂ ಈ ಆಶ್ಚರ್ಯವನ್ನು ನೋಡುತ್ತಾ ಬಾಗಿಲ ಬಳಿಯಲ್ಲಿ ನಿಂತಿದ್ದರು.

**ಶಿವ:**—ಅಕ್ಕ, ಹೋಗುವಾಗ ಮರಿಯಾಗಿದ್ದವನು ಮಲ್ಲನಾಗಿ ಬಂದಿರುತ್ತಾನೆ. ಗುರುತೇ ಸಿಕ್ಕಲಿಲ್ಲ ನನಗೆ.

**ದೋಪಿ:**—“ಮೊತ್ತಮೊದಲು ನನಗೂ ಹಾಗೇ ಆಯಿತು. ಕಣ್ಣಿಗೆ ಹೊಲಬಾಗಲಿಲ್ಲ; ಎದೆಗಾಯಿತು” ಎನ್ನುವಾಗ ಕಣ್ಣೀರು ಸುರಿಯುತ್ತಿತ್ತು.

**ಶಿವ:**—ಆನಂದದ ಸಮಯದಲ್ಲಿ ಅಳಬಾರದಕ್ಕಾ.

**ದೋಪಿ:**—“ಹೌದು; ಆನಂದವೇ ಆದರೂ ಒಂದರ ಬಿಸಿ ಒಂದಕ್ಕೆ ತಟ್ಟುವಾಗ ಎದೆಗರಗಿ ಹೀಗಾಯಿತು.” ಎಂದು ಗಂಗಾಧರನನ್ನುದ್ದೇಶಿಸಿ “ಅಣ್ಣಾ, ಏಳು,” ಎಂದಳು.

**ಗಂಗಾ:**—ಅಮ್ಮ, ನನ್ನ ಪಾಪಗಳನ್ನೆಲ್ಲ ಕ್ಷಮಿಸುವೆಯಾದರೆ ಏಳುತ್ತೇನೆ.

**ದೋಪಿ:**—“ನಿನ್ನದೇನು ಪಾಪ? ಪಾಪಮಾಡಿ ಈ ಬವಣೆಗೆ ಬಂದವಳೆಂದರೆ ನಾನು. ಮನೆಯನ್ನು ಮರೆಯದೆ ಈಗಲಾದರೂ ಬಂದೆಯಷ್ಟೆ.” ಎಂದು ಎತ್ತಿ ಕುಳಿತುಕೊಳ್ಳಿಸಿದಳು.

**ಗಂಗಾ:**—ಬಂದರೇನು? ಬರುವಾಗ ಬೆಳಗಾಗಿ ಹೋಯಿತಷ್ಟೆ.

**ಶಿವ:**—ದೈವ ಗತಿಯದು. ಅದನ್ನು ತಡೆಯ ಬಹುದಾದರೆ ದೈವ ವೆಂಬುದೊಂದೇಕೆ? ನಾವೆ ದೈವವಾಗಬಹುದಲ್ಲವೆ?

**ಗಂಗಾ:**—ಮಾವ, ಸರಿಯದು. ಆದರೂ ಅವಿಚಾರದಿಂದೊದಗಿದ ಮನಸ್ತಾಪವು ಒಳಗೊಳಗೇ ಸುಡುತ್ತಿದೆ.

**ಶಿವ:**—ಅದೇನು?

**ಗಂಗಾ:**—ಎರಡು ತಿಂಗಳ ಮೊದಲೊಮ್ಮೆ ಹೊರಟೆನು. "ತುಂಬಾ ಕೆಲಸವಿದೆ. ಎಂಟು ದಿನ ಕಳೆದು ಹೋಗಬಹುದು" ಎಂದರು ವಕೀಲರು. ಆ ಎಂಟು ದಿನ ಕಳೆಯಿತು. ಮರಳ ದಿಣ್ಣೆಯಲ್ಲಿಟ್ಟ ಕಾಲಿನಂತೆ ಹೊರ ಡುವ ಎಣಿಕೆಯೆ ಜಾರುತ್ತಾ ಹೋಯಿತು. ಅಲ್ಲದಿದ್ದರೆ ತಂದೆಯವರ ಬಾಯಿಗೆ ನೀರೆರೆವ ಪುಣ್ಯವಾದರೂ ಒದಗುತ್ತಿತ್ತು.

**ಶಿವ:**—ಅದನ್ನೆ ಅದೃಷ್ಟವೆನ್ನುವುದು. ನೀನೇನು ತಿಳಿದೂ ಬಾರ ದಿದ್ದುದೆ? ಇನ್ನು ಕೊರಗುತ್ತಿದ್ದರೆ ವೃಥಾ ಕಣ್ಣುಗಟ್ಟಿ ಕಾಡಿನೊಳಗೆ ಹೊಕ್ಕಂತಾಗುವುದಲ್ಲದೆ ಫಲವೇನೂ ಇಲ್ಲ. ಪ್ರಾಣಿಗಳೆಂದರೆ ಅದೃಷ್ಟದ ಕಯ್ಯ ಬೊಂಬೆಗಳು.

**ಗಂಗಾ:**—ತಿಳಿದೂ ಬಾರದಿದ್ದವನಾದರೆ ಈಗ ಕೊರಗಲಿಕ್ಕೂ ಇರಲಿಲ್ಲ.

**ಶಿವ:**—ಆ ವಿಷಯವಂತಿರಲಿ; ಅದನ್ನು ತೊಡೆದು ಬಿಡು ಮನಸ್ಸಿ ನಿಂದ. ಆದರೆ, ಈ ವರೆಗೆ ನೀನು ಒಂದು ಪತ್ರವನ್ನೂ ಬರೆಯದುದೇಕೆ?

**ಗಂಗಾ:**—ಪುನಃ ಕೇಳಿದುದು ಅದೆ ಪ್ರಶ್ನೆಯು ಬಾಲವೇ ಆಯಿತಲ್ಲ. ಆ ಅದೃಷ್ಟವೆಂಬ ಬಾವಿಗೆ ಅದನ್ನೂ ಕಡಿದುಹಾಕಿಬಿಡಲಿಲ್ಲವೇಕೆ?

**ಶಿವ:**—ಹೌದು; ಅದೂ ಅದೃಷ್ಟವೇ. ಆದರೆ ಇಷ್ಟು ಕಾಲದ ವರೆಗೂ ಬರೆಯದಿರಲಿಕ್ಕೆ ಬಾಹ್ಯ ಕಾರಣವೇನಾದರೂ ಇದೆಯೋ ಎಂದು ಕೇಳಿದೆ.

**ಗಂಗಾ:**—ನಾನು ಮನೆಯಿಂದ ಹೊರಟವನು ಗೋಕರ್ಣಕ್ಕೆ ಹೋದೆನಷ್ಟೆ? ಆದರೆ ನನಗೇನೋ ಅಲ್ಲಿಂದ ಹೊರಡಬೇಕೆಂದೇ ತೋರಿತು.

ಅಥವಾ ಆ ಕ್ಷೇತ್ರದರ್ಶನವಾದೊಡನೆ ನನ್ನ ಪಾಪನಿವೃತ್ತಿಯಾಗಿ ಹಾಗೆ ತೋರಿದುದಾಗಿರಲೂ ಬಹುದು.

**ಶಿವ:**—ಹಾಗೆಂದರೆ?

**ಗಂಗಾ:**—ಹೆಸರ್ಗೊಂಡ ಹಲವು ಪುಣ್ಯಕ್ಷೇತ್ರಗಳೊಳಗೆ ಗೋಕರ್ಣವೂ ಒಂದು. ತಂತಮ್ಮ ಪಾಪಪರಿಹಾರಕ್ಕಾಗಿ ಪಾಪಿಗಳು ಹೋಗುವ ಕ್ಷೇತ್ರವೇ ಪುಣ್ಯಕ್ಷೇತ್ರವೆಂಬುದು. ಪುಣ್ಯಲಾಭವಾದೊಡನೆ ಅವರು ಹೋಗಿ ಬಿಡುತ್ತಾರೆ; ಆಗದವರು ಅಲ್ಲೆ ಉಳಿಯುತ್ತಾರೆ; ಎನ್ನಬೇಕಲ್ಲವೆ? ಹೇಗೂ ಇರಲಿ; ನನಗಲ್ಲಿ ವಿದ್ಯಾಭ್ಯಾಸಕ್ಕೆ ಎಡೆಯಾಗಲಿಲ್ಲ. ಧಾರವಾಡಕ್ಕೆ ಹೋದೆನು.

**ಶಿವ:**—ನೀನೊಬ್ಬನೆ ಹೋದುದೊ?

**ಗಂಗಾ:**—ಅಲ್ಲ; ಕಾರ್ವಾರದಲ್ಲಿ ಕಲೆಕ್ಟರಾಗಿದ್ದ ಶ್ರೀನಿವಾಸ ನಾಯಕರೆಂಬವರು ಗೋಕರ್ಣಕ್ಕೆ ಬಂದಿದ್ದರು. ವಿನಾಯಕಭಟ್ಟರೆ ಅವರ ಪುರೋಹಿತರಾಗಿದ್ದುದರಿಂದ ನನಗವರ ಪರಿಚಯವಾಯಿತು. ಅವರೊಡನೆ ಹೋಗಿ ಆರೇಳು ವರ್ಷವೂ ಧಾರವಾಡದಲ್ಲಿದ್ದೆ. ಅಲ್ಲಿಂದ ಅವರಿಗೆ ಬೆಳ್ಗಾವಿಗೆ ವರ್ಗವಾಯಿತು. ನಾನೂ ಬಸವನ ಹಿಂದಣ ಬಾಲವಾದೆ.

**ಶಿವ:**—ಅವರಲ್ಲಿ ನಿನಗೇನು ಕೆಲಸ?

**ಗಂಗಾ:**—"ಚಹಾತಿಂಡಿಗಳನ್ನು ಕಚ್ಚೇರಿಗೆ ಕೊಂಡು ಹೋಗಿ ಕೊಡುವುದು." ಎಂದು ಗೋವಿಂದಾಚಾರ್ಯನ ಮುಖವನ್ನು ನೋಡಿದನು.

**ಗೋವಿಂದ:**—ರಾಯರೆ, ನಿಮ್ಮ ಅಳಿಯ ಒಳ್ಳೆಯ ಆಸಾಮಿ. ಆಗಲೆ ಗಂಗಾಧರನು ಹೋಗಿ ನೀಲಕಂಠನಾಗಿ ಬಿಟ್ಟಿದ್ದ. "ಊರಾವುದು?" ಎಂದು ಕೇಳಿದರೆ "ಕನ್ನಡನಾಡು" ಎಂದು ಗಂಟೆಗೊಂದೇ ಸ್ವರ. ಅಲ್ಲವಾದರೆ ನಾನಾದರೂ, ಇವರ ಗೊತ್ತುಗುರಿಯನ್ನು ಬರೆಯುತ್ತಿದ್ದೆ ನಿಮಗೆ. ಅಯ್ಯಬ್ಬ! "ಒಳಗಿನ ಗುಟ್ಟು ಶಿವನೇ ಬಲ್ಲ" ಎಂಬ ಗಾದೆ ಸರಿಯಾಯಿತು. ಆ ಬೆಳ್ಗಾವಿಯ ಒಳಗುಟ್ಟನ್ನು ತಿಳಿಯಲಿಕ್ಕೆ ಈ "ಶಿವನ" ಸನ್ನಿಧಿವರೆಗೆ ಬರಬೇಕಾಯಿತು" ಎಂದು ನಕ್ಕನು.

**ಶಿವ:**—(ನಗುತ್ತಾ) ನಿಮಗೂ ಅಣ್ಣಾಜಿಗೂ ಅಲ್ಲಿಯೇ ಬಳಕೆಯಾಯಿತೆ?

**ಗೋವಿಂದ**·—"ಹೌದು. ಬೆಳ್ಗಾವಿಗೆ ವರ್ಗವಾದ ಮೇಲೆ ನಾಯಕರಲ್ಲಿ ನಾನೆ "ಸೌಟು ರೈಟರ್" ಆಗಿದ್ದೆನು." ಎಂದು ಮತ್ತಷ್ಟು ನಕ್ಕನು.

**ಗಂಗಾ:**—ಹೆಸರು ಬದಲಿಸಿದುದು ನಾನಲ್ಲ ಸ್ವಾಮಿ. ಗೋಕರ್ಣದಲ್ಲಿದ್ದಾಗ ನಾನೂ ಸಾಗರದ ಒಬ್ಬ ಹುಡುಗನೂ ಸಮುದ್ರಸ್ನಾನಕ್ಕೆ ಹೋಗಿದ್ದೆವು. ನಮಗಿಬ್ಬರಿಗೂ ಒಂದೆ ಹೆಸರು. ಅವನು ಸಮುದ್ರದಲ್ಲಿ ಮುಳುಗಿ ಹೋದನು. ಆ ಮೇಲೆ ವಿನಾಯಕಭಟ್ಟರು ನನ್ನನ್ನು ನೀಲಕಂಠನೆಂದೆ ಕರೆಯತೊಡಗಿದರು.

**ಗೋವಿಂದ:**— ಅದೇಕೆ?

**ಗಂಗಾ:**—ಸಮುದ್ರದಲ್ಲುದಿಸಿದ ವಿಷಬಾಧೆಯನ್ನು ಪರಿಹರಿಸಿದ ಮೇಲಲ್ಲವೆ "ಗಂಗಾಧರ"ನು "ನೀಲಕಂಠ"ನಾದುದು.

**ಗೋವಿಂದ:**—ಆಗಲಿ; ಕೇಳಿದಾಗ ಊರನ್ನೂ ತಿಳಿಸದಿದ್ದುದೇಕೆ ನೀವು?

**ಗಂಗಾ:**—ನಿಮ್ಮಲ್ಲಿ ತಿಳಿಸದಿದ್ದುದು ಮಾತ್ರವೆ? ಇಲ್ಲಿಗೆ ಒಂದು ಕಾಗದವನ್ನೂ ಬರೆಯಲಿಲ್ಲ. "ಅದೂ ಯಾಕೆ?" ಎನ್ನುತ್ತೀರೋ "ಯಾರಿಗೆ ಗೊತ್ತು" ಎಂಬುದೇ ಮರುಮಾತು.

**ಶಿವ:**—ಹಾಗೆಂದರೆ?

**ಗಂಗಾ:**—ಆ ಸಾಗರದ ಹುಡುಗನು ನನ್ನ ಅತಿಸ್ನೇಹಿತನಾಗಿದ್ದನು. ಅವನು ಹಾಗೆ ತೀರಿ ಹೋದೊಡನೆ ನನ್ನ ಮನಸ್ಸಿನಲ್ಲೊಂದು ವೈರಾಗ್ಯಭಾವನೆಯುಂಟಾಗಿ ಬಳೆಯುತ್ತಾ ಬಂತು. ಅಂಥ ಅಪಾಯ ಸಂದರ್ಭದಲ್ಲಿ, ಕಾಲುದಪ್ಪಿದವನು ಕಾಲೂರಿದ್ದವನನ್ನು ಬಿಗಿವಿಡಿದುಕೊಳ್ಳುವುದು ಪ್ರಕೃತಿಯಷ್ಟೆ?. ಆದರೆ ಆ ಪುಣ್ಯಾತ್ಮ ಹಾಗೆ ಮಾಡಲಿಲ್ಲ. "ಗಂಗ, ದಡಕ್ಕೆ ಸರಿ; ನನ್ನ ಕಾಲು . . . ." ಎನ್ನುವಷ್ಟರಲ್ಲಿ ಮುಳುಗಿದವನನ್ನು ಮತ್ತೆ ಕಾಣಲಿಲ್ಲ. ಅರ್ಧಗಂಟೆ ಕಳೆವಾಗ, ತೆರೆಗಯ್ಯಿಂದ ತಳ್ಳಲ್ಪಡುತ್ತಾ ಶವವು ತೀರದಲ್ಲಿ ಬಂದು ಬಿತ್ತು. ಆ ನೋಟವು, ನನ್ನ ಮನಸ್ಸಿಗೆ ಪ್ರಪಂಚವನ್ನೂ ಮಸಣವನ್ನಾಗಿ ತೋರಿಸತೊಡಗಿತು.

**ದೋಪಿ:**—ಒಮ್ಮೆ ನೀನೇ ಮುಳುಗಿಹೋದೆಯೆಂದು ಇಲ್ಲಿಯೂ ಸುದ್ದಿಯಾಗಿತ್ತು. ಅದಕ್ಕೆ ಇದೇ ಕಾರಣವಿರಬಹುದು.

**ಶಿವ:**—ಇರಲಿ; ನೀನು ಸಂಸ್ಕೃತ ಇಂಗ್ಲಿಷು ಮೊದಲಾದುವನ್ನು ಅಭ್ಯಾಸಮಾಡಿರುತ್ತೀಯಂತೆ. ಅದೆಲ್ಲಿ?

**ಗಂಗಾ:**—ಹಾಗೆಂದುದು ಯಾರು?

**ಶಿವ:**—ಕಿಟ್ಟಪ್ಪನು ಭಾವನವರಿಗೆ ಬರೆದ ಪತ್ರ.

**ಗಂಗಾ:**—ಹೇಳುವಷ್ಟು ವಿದ್ಯಾರ್ಜನೆಯೊಂದೂ ನನ್ನಲ್ಲಿಲ್ಲ. ಮಾಡುವುದಾದರೂ ಹೇಗೆ? ಪರೀಕ್ಷೆಗಾಗಿ ಓದಿದುದೇನೂ ಇಲ್ಲ. ಏನಾದರೂ ಒದಗಿದುದಿದ್ದರೆ ಅದಕ್ಕೆ ಆ ಮಹಾತ್ಮರಾದ ಶ್ರೀನಿವಾಸನಾಯಕರ ಉದಾರಹೃದಯವೇ ಕಾರಣ.

**ಶಿವ:**—ಅವರು ಯಾವ ಜಾತಿಯವರು?

**ಗಂಗಾ:**—ನಾಡವರು. ಕೆಲಸದವರು, ಇತರ ಜಾತಿಯವರು ಎಂಬ ಹೀನಭಾವನೆ ಇರಲೇ ಇಲ್ಲ ಆ ಪುಣ್ಯಾತ್ಮರಿಗೆ. ನನ್ನ ಕೆಲಸವೆಂದರೆ ದಿವಸಕ್ಕೆ ಬರಿಯ ಒಂದು ಗಂಟೆ ಮಾತ್ರ. ಧಾರ್ವಾಡದಲ್ಲಿದ್ದಾಗ ಮನೆ ಹುಡುಗರಿಗೆ ಕಲಿಸಲಿಕ್ಕಾಗಿ ಬರುತ್ತಿದ್ದ ಉಪಾಧ್ಯಾಯರ ಸಮಯ ನೋಡಿ ನಾನೂ ಕಲಿಯುತ್ತಾ ಬಂದೆನು. ನಾಯಕರ ಪುಸ್ತಕ ಭಂಡಾರವೆಂದರೆ ಬಹಳ ದೊಡ್ಡದು. ಏಳೆಂಟು ವರ್ಷಗಳಲ್ಲಿ ಅವುಗಳನ್ನೆಲ್ಲ ಓದಿ ಮುಗಿಸಿದೆನು. ಅದೇ ನನ್ನ ವಿದ್ಯಾಭ್ಯಾಸ.

**ಶಿವ:**—ಆ ಮೇಲೆ ನೀನು ಮೈಸೂರಿಗೆ ಯಾಕೆ ಬಂದುದು?

**ಗಂಗಾ:**—ಪುಣ್ಯಾತ್ಮರಾದ ನಾಯಕರು ಬೆಳ್ಗಾವಿಯಲ್ಲಿ ತೀರಿಹೋದರು. ಸರಿಯಾಗಿ ಹೇಳಬಹುದಾದರೆ ಆಗ "ಮರ ಬಿಟ್ಟ ಮಂಗ" ನಂತಾದೆ ನಾನು. ಎಲ್ಲೆಲ್ಲಿಯೋ ಅಲೆದಾಡಿದೆ. ಸಾಗರದಲ್ಲಿದ್ದಾಗ, ವಕೀಲರ ತಂದೆ ಗೋವಿಂದರಾಯರನ್ನು ಕಂಡೆನು. ಮಾತಾಡಿಸಿದರು. "ನಮ್ಮಲ್ಲಿಗೆ ಬರುತ್ತೀಯೊ?" ಎಂದರು. "ಹೊಕ್ಕುದೇ ಮನೆ ಹೋದುದೇ ನಾಡು" ಎಂದು ನಿರ್ಧರಿಸಿದವನು ನಾನು. ಅವರೊಡನೆ ಬಂದು ಈಗ ಎರಡು ವರ್ಷಗಳಿಂದ ಮೈಸೂರಲ್ಲಿದ್ದೇನೆ. ಅಲ್ಲಿ ಪುನಃ ಈ

ಆಚಾರ್ಯರು ಸಿಕ್ಕಿದರು. ಇವರೀಗ ಮೈಸೂರಿನಲ್ಲಿ ಸಂಗೀತಗಾರರಾಗಿ ಇದ್ದಾರೆ. ಇವರ ಹುಟ್ಟೂರು ಉಡುಪಿ.

**ಗೋವಿಂದ:**—"ಹೌದು; 'ಸಂಗೀತಗಾರ'ರಾಗಿ ಎಂದರೆ ಸಾಸೆ" ಎಂದನು. ಎಲ್ಲರೂ ನಕ್ಕರು.

**ಶಿವ:**—ಹಾಗಾದರಿವರು ನಮ್ಮೂರವರೆ ಆಯಿತು. ಇರಲಿ; ಈಗ ಬರಲಿಕ್ಕಾದರೂ ಎಡೆ ಹೇಗಾಯಿತು?

**ಗಂಗಾ:**—ಕೃಷ್ಣರಾಯರು ಮೈಸೂರಿನಲ್ಲಿ ವಕೀಲರ ಮನೆಗೂ ಬಂದರು. ಮಾತಿಗೆ ಮಾತಾಗಿ ಊರಿನ ನೆನಪು ಒಳಗೊಳಗೇ ಮಸೆಯಿತು. ಮನೆಯವರ ಕುಶಲವನ್ನು ವಿಚಾರಿಸಿದೆ. "ಹೋಗುವ" ಎಂದು ಕೃಷ್ಣರಾಯರೂ ಒತ್ತಾಯಿಸಿದರು. ಹೊರಟುದರಿಂದ ಬಂದು ಹೋಯಿತು. ಆದರೇನು? ಬರುವಾಗ ಹೀಗಾಯಿತು. ಬಹುಶಃ ಇದು ನನ್ನಿಂದೊದಗಿದ ಅಸಡ್ಡೆಗೆ ದೇವರು ಕೊಟ್ಟ ಶಿಕ್ಷೆಯೋ ಏನೊ?

**ಶಿವ:**—ಅದಂತಿರಲಿ; ಆ ಅದೃಷ್ಟದ ವಿಷಯವಾಗಿ ನೀನಿನ್ನು ಬೇಸರಪಡಬಾರದು. ಹಾಗೆಲ್ಲ ಬೇಸರಪಡುವುದಾದರೆ ನನಗೆ ಆನಂದದ ಕಾಲಸ್ನಿಡಲಿಕ್ಕೂ ಎಡೆ ಇಲ್ಲವೆಂದಾದೀತು.

**ಕೃಷ್ಣ:**—ಮಾವ, "ತಾನು ಮೊದಲೆ ನಿಮ್ಮೂರಿಗೊಮ್ಮೆ ಬಂದವನು ಭೀಮಯ್ಯನವರಲ್ಲಿ ಇಳಿದಿದ್ದೆನು" ಎಂದು ಮಾತ್ರವೆ ಶಾಸ್ತ್ರಿಗಳು ಹೇಳಿದುದು. ಮನೆಯನ್ನು ವಿಚಾರಿಸಿದಂತಾಯಿತೇ ಅದು?

**ಶಿವ:**—ಯಾವ ಶಾಸ್ತ್ರಿಗಳೊ?

**ಕೃಷ್ಣ:**—ಆಗ ಇವರು ನೀಲಕಂಠಶಾಸ್ತ್ರಿಗಳಾಗಿ ಇದ್ದರಲ್ಲವೆ?

**ಗಂಗಾ:**—ಯಾಕೆ ತಮಾಷೆ ಮಾಡುತ್ತೀರಿ ರಾಯರೆ? ಕಾರಣಾಂತರದಿಂದ ಆ ಹೆಸಗೊಂಡ ನಾನು, ಊರವರಾದರೂ ಅಪರಿಚಿತರಾದ ನಿಮ್ಮಲ್ಲಿ ಥಕ್ಕನೆ ಬಣ್ಣವನ್ನು ಬದಲಿಸಿ ಹೇಳುವುದು ಹೇಗೆ?

**ಶಿವ:**—ಕಿಟ್ಟಪ್ಪ, ಅದೆಲ್ಲ ಇರಲಿ. ಒಂದು ಮಾತೇನೊ ಖಂಡಿತವು. ನಿನ್ನಪ್ಪ ಇವರ ಬೇರನ್ನು ಕಿತ್ತ; ನೀನು ನೆಟ್ಟೆ.

**ಕೃಷ್ಣ:**—ಇವರ ಆಸ್ತಿಯನ್ನು ಏಲಮ್ ಮಾಡಿಸಿ ತಂದೆಯವರು ಅನ್ಯಾಪಾರ ಮಾಡಿದರೆಂಬುದನ್ನು ನಾನು ಬಲ್ಲೆ. ಆದರೆ ನಾನಿವರನ್ನು "ನೆಟ್ಟ" ಪುಣ್ಯಕ್ಕೆ ಈಗಲೇ ಅಧಿಕಾರಿಯಾದುದು ಹೇಗೆ?

**ಶಿವ:**—ನೀನಲ್ಲದಿದ್ದರೆ ಅಣ್ಣಾಜಿಗೆ ಊರ ನೆನಪಾಗುತ್ತಿತ್ತೆ? ಅದ ರಿಂದ ಆ ಪುಣ್ಯಕ್ಕೆ ನೀನೇ ಅಧಿಕಾರಿ.

**ಕೃಷ್ಣ:**—"ಕರಕೊಂಡು ಬಂದ ಮಾತ್ರದಿಂದಲೆ ಆ ಪುಣ್ಯವನ್ನು ಹೊರಿಸಬೇಡಿರಿ. ಆದರೆ ನಿಮ್ಮ ಪೂರ್ಣ ಸಹಾಯವಿದ್ದರೆ, ಶಾಸ್ತ್ರಿಗಳ—(ನಗುತ್ತಾ) ಅಲ್ಲ, ಅಣ್ಣಾಜಿರಾಯರ ಒಪ್ಪಿಗೆಯೂ ಇದ್ದರೆ, ಆ ಪುಣ್ಯ ವನ್ನೂ ಹೊರಬೇಕೆಂಬ ಅಭಿಲಾಷೆ ಇದೆ" ಎಂದು ಹಸನ್ಮುಖನಾಗಿ ಹೇಳಿ ದನು.

ಕೃಷ್ಣನು ಮೈಸೂರಿನಿಂದ ತಂದೆಗೆ ಬರೆದ ಕಾಗದದ ಸಾರಾಂಶವು ಶಿವರಾಯನಿಗೆ ಗೊತ್ತಾಗಿತ್ತಷ್ಟೆ. ಅದನ್ನೂ, ರಾಮಯ್ಯನಾಗಪ್ಪಯ್ಯ ರೊಡನೆ ತನಗೊದಗಿದ ಮಾತುಕತೆಯನ್ನೂ ಮನೆಯಲ್ಲಿ ಆ ದಿನವೇ ಹೇಳಿದ್ದನವನು. ಕೃಷ್ಣರಾಯನು ಬರೆದುದು ಆಗ "ನೀಲಕಂಠ" ಶಾಸ್ತ್ರಿಯ ವಿಷಯವಾಗಿದ್ದುದರಿಂದ ಅದು ಹರಿಹಂಚಾಗಿ ಹಾರಿ ಹೋಗಿತ್ತು ಮನಃ ಫಲಕದಿಂದ. ಆದರೆ, ಈಗ ಆ ನೀಲಕಂಠಶಾಸ್ತ್ರಿಯೇ ಅಣ್ಣಾಜಿಯಾಗಿ ಮಾರ್ಪಟ್ಟುದರಿಂದ ಹಾರಿಹೋದವುಗಳೆಲ್ಲ ಒಮ್ಮೆಗವಾಗಿ ರೂಪುಗೊಂಡು ಕಳೆಗೂಡಿತು. ಆ ನೀಲಕಂಠಶಾಸ್ತ್ರಿಯೆಂದರೆ ತಂದೆಯು ಹಗೆಗಾರನಾಗಿದ್ದ ಭೀಮಯ್ಯನ ಮಗನೆಂದರಿತರೂ ಕಿಟ್ಟಪ್ಪನ ಮನಸ್ಸು ಅಲುಗಾಡದುದನ್ನು ನೋಡಿ ಶಿವರಾಯನಿಗೆ ಆನಂದವಾಯಿತು. ತತ್ಕಾಲದ ಕೃಷ್ಣನ ಚಿತ್ತವೃತ್ತಿ ಯನ್ನು ಪರೀಕ್ಷಿಸಲಿಕ್ಕೆಂದೇ ಅವನು "ನಿನ್ನಪ್ಪ ಇವರ ಬೇರನ್ನು ಕಿತ್ತ; ನೀನು ನೆಟ್ಟೆ" ಎಂದು ಕೆದರಿದುದು. ತಮ್ಮನ ಆ ಮಾತಿನ ಒರೆಗೆ ದೋಪಿಯೂ ಬೆಲೆ ಗಟ್ಟಿದ್ದಳು.

**ಶಿವ:**—ಹುಂ; ಆದರೆ ಸಹಾಯ ಮಾಡಲಿಕ್ಕೆ ನಾನೆಷ್ಟರವನು?

**ಕೃಷ್ಣ:**—ನನ್ನ ಕಾಗದಿಂದಾಗಿ ನಿಮಗೂ ತಂದೆಯವರಿಗೂ, ನಾಗ ಪ್ರಯ್ಯನೆದುರಲ್ಲಿ ಏನೋ ಮಾತುಮರುಮಾತುಗಳಾದುವೆಂದು ಅಮ್ಮ ಸ್ವಲ್ಪ ಹೇಳಿದಳು. ಅದೆಲ್ಲ ಇರಲಿ; ತಂದೆಯವರಿಗೆ ಮುಪ್ಪಿನ ಭ್ರಾಂತಿ ಏರಿದೆಯೆಂದು ನನಗೆ ಗೊತ್ತಿದೆ. ನೀವು ಮಾತ್ರ ಅದಕ್ಕೆಲ್ಲ ಕಿವಿಗೊಡ ಬಾರದು.

ಮುಗಿಲುದ್ದಿ ಮಸುಕಿದ ಆಕಾಶವನ್ನು ಮಳೆಯಿಂದ ತೊಳೆದು ಬಿಸಿ ಲಿನ ಸಾರಣೆಗೊಟ್ಟಂತಾಯಿತು ಎಲ್ಲವರ ಮುಖ ಮಂಡಲ. ಅಷ್ಟರಲ್ಲಿ ಗಂಟೆಯೂ ಹನ್ನೆರಡುವರೆಯಾಯಿತು. ಶಿವರಾಯನ ಕಣ್ಣು ಅಂಗಳದಿಂದ ಮೂಡಣ ಬೆಟ್ಟುಗದ್ದೆಗೆ ಹರಿಯಿತು. "ಅದೋ ಬರುತ್ತಾರೆ ಪುರೋಹಿತರು" ಎಂದನು. "ಯಾರು ಮಾಲಿಂಗ ಉಪಾಧ್ಯರೆ?" ಎಂದು ಕೇಳಿದಳು ದೋಪಿ.

"ಹೌದು; ಗೊತ್ತಾಗುವುದಿಲ್ಲವೆ? ಆ ಪಟ್ಟೆಗಚ್ಚೆ; ಕಚ್ಚೆಯ ಕುಡಿ ಯನ್ನು ಮೊಳಪಿನ ವರೆಗೆ ಮೇಲೆತ್ತಿ ಕುತ್ತಿದ ಕೊನೆ; ಆ ಗೇಣುಗಂಬಿಯ ಹುಬ್ಬಳ್ಳಿಯ ಹಳೆಯ ಧೋತ್ರದ ಉತ್ತರಿಗೆ; ಎಡಗಯ್ಯ ಹನೆಗೊಡೆ; ಬಲಗಯ್ಯ ಬೀಸಾಟ; ಎಲ್ಲದಕ್ಕಿಂತಲೂ ಆ ಸಾಲಿಗ್ರಾಮದ ಮೈಬಣ್ಣ; ಏವಂಗುಣವಿಶಿಷ್ಟವಾದ ಲಕ್ಷಣಗಳು ಉಪಾಧ್ಯರಿಗಲ್ಲದೆ ಮತ್ತಾರಿಗೆ?" ಎಂದನು ಶಿವರಾಯ. "ತುಂಬಾ ತಡವಾಯಿತಲ್ಲ" ಎಂದಳು ಪುಟ್ಟಮ್ಮ. "ನಿಮಗೇನು ಗೊತ್ತು ಹೆಂಗುಸರಿಗೆ? ತಿಥಿ ಇರುಳಿಗೆ ಮುಟ್ಟಬೇಕಷ್ಟೆ. ಆದರಿಂದ ಬ್ರಾಹ್ಮಣರಿಗೆ ಎಣ್ಣೆಗೊಡುವಾಗ ಮಧ್ಯಾಹ್ನ ತಿರುಗಬೇಕು. ಕೆಲಸವನ್ನೆಲ್ಲ ಬಿಟ್ಟು ಮೊದಲೆ ಬಂದು ಅವರೇನು ರಾಮ ಜಪ ಮಾಡು ವುದೋ ಇಲ್ಲಿ?" ಎಂದು ನಕ್ಕನು ಶಿವರಾಯ. "ಅದೇಕೆ ಹಾಗೆಲ್ಲ ಆಗ ಬೇಕು?" ಎಂಬುದು ಪುಟ್ಟಮ್ಮನ ಪ್ರಶ್ನೆ. "ಮಧ್ಯಾಹ್ನದಿಂದ ನಡುವಿರುಳ ವರೆಗೆ ಒಂದು ದಿನ; ಅದರಿಂದ ಇರುಳಿಗೆ ಮುಟ್ಟಿದ ತಿಥಿಯೆ ಸತ್ತು ಹೋದ ತಿಥಿ; ಎಂದು ಶಾಸ್ತ್ರ. ಏನು ಸತ್ತು ಹೋದುದಕ್ಕಿಂತ ಹಿಂದಿನ ತಿಥಿಯಲ್ಲಿ ಮಾಸಿಗ ಮಾಡಿ ಬಿಡುವುದೆ?" ಎಂದು ಶಿವರಾಯನ ಉತ್ತರ ಸಹಿತವಾದ ಪ್ರಶ್ನೆ. "ಹಾಗಾದರೆ ನಾವು ಮಧ್ಯಾಹ್ನಗಳೆದೇ ಮಿಂದು ಮಡಿಯುಟ್ಟುಅಡಿ

ಗೆಗೆ ಅಡಿಗಟ್ಟ ಬೇಕಾಗಿತ್ತು.'' ಎಂದು ಅತ್ತಣ ಮಾತು. "ಯಾಕೆ?'' ಎಂದು ಇತ್ತಣ ಪ್ರಶ್ನೆ. "ಅಯ್ಯೋ, ಅದೂ ಗೊತ್ತಾಗುವುದಿಲ್ಲವೆ? ಕೋಳಿ ಕೂಗುವಾಗಲೆ ನಾವೆದ್ದು ಮಿಂದು ಮಾಡಿದ ಅಡಿಗೆಯೆಲ್ಲ ಈಗ ತಂಗುಳಾಗಿ ಹೋಯಿತಲ್ಲಾ ನಿಮ್ಮ ಶಾಸ್ತ್ರದಲ್ಲಿ.'' ಎಂದಳು ಪುಟ್ಟಮ್ಮ. ಎಲ್ಲರೂ ನಕ್ಕರು. "ಏನೋ ಕಿಟ್ಟಪ್ಪ ನಿನ್ನತ್ತೆ ಸೋಲಿಸಿ ಬಿಟ್ಟಳಲ್ಲ ನನ್ನನ್ನು.'' ಎನ್ನುತ್ತಾ "ಈಗಿನ ಹೆಂಗುಸರೇ ಹೀಗಾದ ಮೇಲೆ ಮುಂದಿನ ಹುಡುಗಿಯರ ಗತಿ ಏನೊ?'' ಎಂದು ಬಾಗಿಯ ಮೋರೆಯನ್ನು ನೋಡಿ ನಕ್ಕನು ಶಿವರಾಯ. "ಮುಂದಿನ ಹುಡುಗಿಯರ ಗತಿಗಾಗಿ ಕನಿಕರ ಪಡಬೇಕಾಗಿಲ್ಲ ಇಂದಿನ ಗಂಡುಸರು. ಸರಿಯಾದ ಹುಡುಗರೇ ತಯಾರಾಗುವರು.'' ಎಂದು ನಗುತ್ತಾ ಪುಟ್ಟಮ್ಮ ಒಳಗಯ್ದಿದಳು. "ಹಾಗಾದರೆ ನಾವು ಕೃತಾರ್ಥರಲ್ಲವೆ?'' ಎಂದು ಶಿವರಾಯನು ಲಕ್ಷ್ಮಮ್ಮ ದೋಪಿಯರ ಮುಖದಲ್ಲಿ ಕಣ್ಣಿಟ್ಟನು.

ಬಂದು ಉಪಚಾರವಾದ ಮೇಲೆ ಗಂಗಾಧರನು ಬಂದುದು ಪುರೋಹಿತರಿಗೆ ಗೊತ್ತಾಯಿತು. ಕರ್ತೃವಿನ ಶರೀರಶುದ್ಧಿ ಕ್ರಿಯಾಲೋಪಪ್ರಾಯಶ್ಚಿತ್ತಾದಿಗಳು ಸಾಂಗವಾಗಿ ಮಾಸಿಕ ಶ್ರಾದ್ಧವಾಗುವಾಗಲೇ ಗಂಟೆ ಐದಾಯಿತು. ಭೋಜನವಾದ ಮೇಲೆ ಪುರೋಹಿತರ ಬಾಯಿಂದ ಮೆಲ್ಲನೆ ಇಳಿವ "ಪಿಂಡಸ್ಯೋಪರಿ ತಿಲೋದಕಂ'' ಎಂಬ ಮಂತ್ರದೊಡನೆ ಗಂಗಾಧರನ ಕಯ್ಯಿಂದ ತಿಲೋದಕವು ಇಳಿಯುತ್ತಿತ್ತು. ಆಗ, ದೋಪಿಯ ಕಣ್ಣಿನಿಂದ ನೀರೂ ಸುರಿಯಿತು. "ಅಮ್ಮ ಅಳಬೇಡಿರಿ'' ಎಂದನು ಅಣ್ಣಾಜಿ. "ಇಲ್ಲ; ಅಳುವುದಿಲ್ಲ. 'ಅಣ್ಣಾಜಿ ಬಂದ' ಎಂದು ಕಟ್ಟಕಡೆಗೆ ಕನವರಿಸಿದರು. ಮತ್ತೆ ಮಾತು ಹೊರಡಲಿಲ್ಲ. ಅದು ನೆನಪಾಗಿ ಹೋಯಿತು'' ಎಂದು ದೋಪಿ ಕಣ್ಣೀರನ್ನೊರಸಿಕೊಂಡಳು. "ಇದೆಲ್ಲ ದೈವದ ಒಂದಾಟವಮ್ಮಾ; ಸಂಸಾರದಲ್ಲಿ ಕಹಿಯೇ ತೋರದಿದ್ದರೆ ಸವಿಯ ಬೆಲೆ ಹೇಗೆ ಗೊತ್ತಾಗಬೇಕು?'' ಎಂದನು ಅಣ್ಣಾಜಿ. ಒತ್ತಿನ ಕೋಣೆಯ ಬಾಗಿಲೆಡೆಯಲ್ಲಿ ನಿಂತು ಈ ದೃಶ್ಯವನ್ನು ನೋಡುತ್ತಿದ್ದ ಬಾಗಿಯ ಕಣ್ಣಿನಲ್ಲಿಯೂ

ನೀರುಕ್ಕಿತು. ಅದನ್ನು ಕಂಡು ಪುಟ್ಟಮ್ಮ, ಮೆಲ್ಲನೆ ಲಕ್ಷ್ಮಮ್ಮನ ಸೆರಗನ್ನೆಳೆದು ಬಾಗಿಯ ಕಡೆಗೆ ಬೆರಳೂರಿದಳು. ಅದನ್ನರಿತ ಬಾಗಿ ನಾಚಿಕೊಂಡಳು; ಮೆಲ್ಲನೆ ಒಳಸರಿದು ಅತ್ತೆಯ ಕಪಪನ್ನು ಚಿವುಟಿದಳು. ಕೋಲುಬೆರಳನ್ನಲುಗಿಸುತ್ತಾ "ಚಿವುಟು; ಬಡ್ಡಿಗೂಡಿಸಿ ಈ ಮುಯ್ಯನ್ನು ತೀರಿಸುವ ಕಾಲಕ್ಕೆ ದೂರವಿಲ್ಲ" ಎಂದು ಮಂತರಿಸಿದಳು ಪುಟ್ಟಮ್ಮ. ನೋಡುತ್ತಿದ್ದ ಲಕ್ಷ್ಮಮ್ಮನ ಮೋರೆಯಲ್ಲಿ ನಗೆಯ ಮುಗುಳೊಂದು ಮೂಡಿತ್ತು. ಈ ಚಿತ್ರದಲ್ಲೊಂದೂ ಅಣ್ಣಾಜಿಯ ಅಲೆಗಣ್ಣಿಗೆ ಮರೆಯಾಗಿಲ್ಲ. "ಥರ್ರನೆ" ತೇಗುತ್ತಾ, ಪುರೋಹಿತರು ಹೊರಗೆ ಬಂದರು. ಎಲ್ಲರಿಗೂ ಊಟವಾಗಿ ಏಳಬೇಕಾದರೆ ಗಂಟೆಯೂ ಏಳಾಯಿತು.

---

೬.

ಗಂಗಾಧರನು ಬಂದುದು ಗಾಳಿಯ ಗಂಟಾಗಿತ್ತು. ಮನೆ ಮನೆಗಳಲ್ಲಿ, ಮದುವೆ ಮಾಂಗಲ್ಯಗಳಲ್ಲಿ, ಕಂಡ ಕೇಳಿದವರಲ್ಲಿ ಆ ಸುದ್ದಿಯೆ ಸುದ್ದಿ. ಗಾಳಿಯ ಗಂಟಿನಲ್ಲಿ ಒಂದೇ ವಾಸನೆ ಹಲಗಾಲ ನೆಲೆಗೊಂಡಿರುವುದೆಂದಿಲ್ಲ; ತರತರದವುಗಳು ಹೊಕ್ಕು ಹೊರಡುತ್ತಿರುವ ಬಿಡುಗಂಟದು. ಅದರಂತೆ ಆ ಸುದ್ದಿಯಲ್ಲಿಯೂ ಇಲ್ಲದ ವಾಸನೆ ಇರಲಿಲ್ಲ. ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳೆನ್ನುತ್ತಾರಲ್ಲ? ಅವುಗಳೊಡನೆ ಆ ಸುದ್ದಿಯೂ ಒಂದೆನ್ನಬಹುದು. ಅದರಿಂದ ತಂತಮ್ಮ ಎದೆಗೊಪ್ಪುವ ಸುದ್ದಿಯನ್ನಾರಿಸಿ ಅವರವರು ಸವಿಯುತ್ತಿದ್ದರು. ಆದರೆ, ಸುರುಸುರನೆ ಒಳಗೊಳಗೆ ಸುತ್ತುತ್ತ ಇತ್ತಲ್ಲದೆ ಹೊರಗೆ ತಲೆಯೆತ್ತುವ ಶಕ್ತಿ ಅದಕ್ಕಿರಲಿಲ್ಲ.

ನಾಗೂರಿನಲ್ಲಿ ರಾಮಯ್ಯನ ಹೊಸ ಮನೆಗೂ, ಶಿವರಾಯನ "ಕರಿಯಂಗ"ಳದ ಮನೆಗೂ ಒಂದುವರೆ ಮೈಲಿನ ದೂರ. ಅದರಿಂದ ಕೃಷ್ಣರಾಯನು ಪ್ರತಿದಿನವೆಂಬಂತೆ ಹೋಗಿ ಗಂಗಾಧರನನ್ನು ಕಂಡು ಮಾತಾಡುತ್ತಿದ್ದನು. ಕೆಲವುಸರ್ತಿ ಅವನು ಕರಿಯಂಗಳಕ್ಕೆ ಹೋದರೆ ಪುನಃ ಮನೆಗೆ ಬರಲಿಕ್ಕೆ ಎರಡು ಮೂರು ದಿನಗಳು ಕಳೆದು ಹೋಗುವುದೂ ಇತ್ತು. ಆಗಾಗ ಲಕ್ಷ್ಮಮ್ಮ ಬಾಗಿಯರೂ ಅಲ್ಲಿಗೆ ಹೋಗಿ ಬರುತ್ತಿದ್ದರು. ಇದೆಲ್ಲ ರಾಮಯ್ಯನ ಮನಸ್ಸಿಗೆ ಒಪ್ಪುಗೆಯಾಗುತ್ತಿದ್ದಿಲ್ಲ. ಆದರೆ "ಶಿವರಾಯನಲ್ಲಿಗೆ ಹೋಗಬಾರದು" ಎನ್ನುವಷ್ಟು ಧೈರ್ಯವಿಲ್ಲದಾಗಿತ್ತು ಅವನಿಗೆ. ಅಷ್ಟರಲ್ಲಿ ರಜೆ ಕಳೆಯಿತು. ಕೃಷ್ಣರಾಯನು "ಮೆಟ್ರಿಕ್ಯುಲೇಶನಿನ"ಲ್ಲಿ ತೇರ್ಗಡೆಗೊಂಡನೆಂಬುದೂ ತಿಳಿಯಬಂತು. ಉಡುಪಿಗಯ್ದಿದ ಗೋವಿಂದಾಚಾರ್ಯನು ಪುನಃ ಬಂದನು. ಆ ವರೆಗೆ ಗಂಗಾಧರನು ಮಾವನ ಮನೆಯ ಮೆಟ್ಟಿಲನ್ನೂ ಇಳಿದಿರಲಿಲ್ಲವೆನ್ನಬಹುದು. ಮುಂದಿನ ಜೀವನಕ್ರಮವನ್ನು ಒಳಗೊಳಗೇ ಪೋಣಿಸುತ್ತಿದ್ದನು; ಶಿವರಾಯನೇ ಮೊದಲಾದವರಲ್ಲಿ ಅದನ್ನೆ ಆಗಾಗ ಆಲೋಚನೆ ಮಾಡುತ್ತಿದ್ದನು. ಅಂತೂ ಅದರ ಹೊಲಬು ಹೊರಗೆ ಹೊಳೆಯಲಿಲ್ಲ. ಈ ದಡದಲ್ಲಿಳಿದ ಈ ಸಾಲು ಆ ದಡದಲ್ಲಿ ತಲೆಯೆತ್ತುವ ವರೆಗೆ ಹೇಗೋ ಹಾಗೆ ನೋಟಕರ ಸಂದೇಹ ಭ್ರಾಂತಿಗಳೊಡನೆ ಮಗ್ನನಾಗಿಯೆ ಇದ್ದನು.

ಆಚಾರ್ಯನು ಬಂದನು; ಕೃಷ್ಣರಾಯನು, ಶಾಲಾವಿದ್ಯಾಭ್ಯಾಸವನ್ನು ಮುಂದುವರಿಸುವುದಿಲ್ಲ, ಎಂಬುದು ನಿರ್ಧಾರವಾಯಿತು. ಮೂವರೂ ಸೇರಿ ಆ ನಾಗೂರ ನಡುವೆ ಒಂದು ಸಾಲೆಯನ್ನು ತೆರೆಯಬೇಕೆಂದು ಸಾಮಾನ್ಯವಾಗಿ ನೆಲೆಗೊಳಿಸಿದರು. ಆದರೆ, ಅದು ಹೇಗೆ ಸಫಲವಾದೀತು, ಎಂಬ ವಿಷಯದಲ್ಲಿ ಕೆಲವು ಸಂದೇಹಗಳುಂಟಾದುವು.

**ಶಿವ**:—ಅದೆಲ್ಲ ಹೌದು; ಆದರೆ ನಿಮ್ಮ ಸಾಲೆ ಜನರ ಮನಸ್ಸನ್ನು ಸೆಳೆವುದು ಹೇಗೆ?

**ಗಂಗಾ**:—ಕಲಿಸುವ ವಿಷಯದಿಂದ.

**ಶಿವ**:—ಬೇರೆ ಸಾಲೆಗಳಲ್ಲಿ ಕಲಿಸುವುದಕ್ಕಿಂತಲೂ ಶ್ರೇಷ್ಠವಾದ ವಿಷಯವು ನಿಮ್ಮದರಲ್ಲೇನಿದೆ?

**ಗಂಗಾ**:—ಅದಕ್ಕೂ ಇದಕ್ಕೂ ಸಂಬಂಧವೇ ಇಲ್ಲ. ಹಳ್ಳಿಯದು ಹಾಗಿರಲಿ; ಪಟ್ಟಣಗಳಲ್ಲಿಯೂ ಈಗ ಸಾಗುತ್ತಿರುವ ವಿದ್ಯಾಭ್ಯಾಸದಿಂದ ಏನು ಫಲವೊದಗಿದೆ ನಾಡಿಗೆ? ಆಯವ್ಯಯದ ಪಟ್ಟಿಯನ್ನಿಟ್ಟರೆ ಆಯಕ್ಕಿಂತಲೂ ವೆಚ್ಚವೆ ಹೆಚ್ಚಾದೀತು. ವೆಚ್ಚವೆ ಹೆಚ್ಚಾಯಿತೆಂದರೆ ನಾಡಿನ ಆರ್ಥಿಕ ಶರೀರಕ್ಕೆ ಕ್ಷಯರೋಗ ಪ್ರಾಪ್ತಿಯಾಯಿತೆಂದೆ ಭಾವಿಸಬೇಕು.

**ಶಿವ**:—ನೀವಿಲ್ಲಿ ತೆರೆವ ಸಾಲೆಯಿಂದ ಆ ರೋಗವು ವಾಸಿಯಾಗುವುದು ಹೇಗೆ?

**ಗಂಗಾ**:—ಹೌದು. ಇಡೀ ನಾಡಿನ ಕಷ್ಟವು ಇಷ್ಟರಿಂದ ವಾಸಿಯಾಗದು. ಆದರೇನು? ನಮ್ಮ ತೋಟಕ್ಕೆ ಬೇಲಿ ಹಾಕಿಕೊಳ್ಳುವುದು ನಮ್ಮ ಕರ್ತವ್ಯ. ಅದನ್ನರಿತು ಉಳಿದವರು ಎಚ್ಚರಗೊಳ್ಳಬಹುದು

**ಶಿವ**:—ಇರಲಿ; ನಡೆಯುತ್ತಿರುವ ವಿದ್ಯಾಭ್ಯಾಸಕ್ಕಿಂತಲೂ ನಿಮ್ಮದರಿಂದ ಒದಗಬಹುದಾದ ಹೆಚ್ಚಿನ ಫಲವೇನು? ಆ ವಿಷಯದ ಹೊಲಬು ನನಗೇನೂ ತಿಳಿಯದು. ವಿವರಿಸಿ ಹೇಳು.

**ಗಂಗಾ**:—ಮನೆಗಿಂತ ದೊಡ್ಡ ಮೆಟ್ಟುಗಲ್ಲಾಗಿದೆ, ಈಗಿನ ವಿದ್ಯಾಭ್ಯಾಸದ ವೆಚ್ಚವೆಂದು ಎಲ್ಲರಿಗೂ ಗೊತ್ತಿದೆಯಷ್ಟೆ. ಹೋಗಲಿ;

'ಪ್ರೈಮರಿ' ವಿದ್ಯಾಶಾಲೆಯಲ್ಲಿ ಕಲಿತವರ ಕತೆಯಂತಿರಲಿ; ಉಚ್ಚ ವಿದ್ಯಾಲಯದ ಹೊಟ್ಟೆಯನ್ನು ಹೊಕ್ಕು ಹೊರಟವರ ಹಾಡೂ ಹಾಗೆಯೆ. ಕಣ್ಣುಗಟ್ಟಿ ಕಾಡಿನಲ್ಲಿ ಬಿಡಲ್ಪಟ್ಟವರಂತೆ ಅವರಿರುತ್ತಾರೆ. ಪರಾಶ್ರಯ ವೊಂದಲ್ಲದಿದ್ದರೆ ಈಗಿನ ವಿದ್ಯಾವಂತರೆಂಬ ಹಲವರ ಜೀವನವು ಸಾಗ ಲಿಕ್ಕಿಲ್ಲ. ಹಾಗಾದರೆ, ಆ ವಿದ್ಯಾವಂತರಿಗೂ ಈ ವಿದ್ಯಾಹೀನರಿಗೂ ಭೇದ ವೇನು? ಗುರುಕುಲದಿಂದ ಹೊರಟ ತರುಣರೆಂದರೆ, ಕಗ್ಗತ್ತಲೆಯಲ್ಲಿ ಕೈದೀಪ ಹಿಡಿದು, ಉಳಿದವರಿಗೂ ದಾರಿದೋರಿಸುತ್ತಿದ್ದರಂತೆ. ಈಗ ಸಾಲೆಗಳೇನೋ ಅಲ್ಲಲ್ಲಿ ಅಂಗಡಿಗಳಂತೆ ಬಾಯ್ದೆರೆದಿರುತ್ತವೆ. ಸಮಾಜದಲ್ಲಿ ನೆಲೆಗೊಂಡಿರ ಬೇಕಾದ ಆ ಓಜಸ್ವಿತೆ, ಈಗ ಇದೆಯೆ? ಇಲ್ಲ. "ನೆರೆಮನೆ ಹೊತ್ತಿದರೆ ಕರುಗಟ್ಟಬಹುದು" ಎಂಬ ಭಾವನೆಯೆ ಹೆಚ್ಚಾಗುತ್ತಿದೆ. ಎಲ್ಲರಲ್ಲಿಯೂ ಈ ಭಾವನೆ ಬಲಿಯುವಾಗ ಆ "ನೆರೆಮನೆಯೂ ಇಲ್ಲ; ಕಟ್ಟಬೇಕಾದ ಕರುವೂ ಇಲ್ಲ" ಎಂದಾಗಬಹುದು.

**ಶಿವ:**—ಹೇಳಿಕೆ ಏನೋ ಸರಿ. ಆದರೆ, ನಿಮ್ಮ ಪ್ರಯತ್ನದಿಂದ ಅಂಥ ಓಜಸ್ವಿತೆ ತಲೆದೋರುವುದು ಹೇಗೆ?

**ಗಂಗಾ:**—ನಮ್ಮಲ್ಲಿ ಆ ಶಕ್ತಿ ಇದ್ದರೆ ಮಾತ್ರವೆ ಅದನ್ನು ಹುಡುಗ ರಲ್ಲಿ ಮೊಳೆಯಿಸಬಹುದೆಂಬುದು ಮೊದಲಿನ ಮಾತು. ಆ ಶಕ್ತಿ ನಮ್ಮಲ್ಲಿದೆಯೋ ಇಲ್ಲವೊ ಎಂಬುದು ಹೇಳಿಕೆಯಿಂದಲ್ಲ; ಮಾಡಿಕೆ ಯಿಂದಲೆ ಗೊತ್ತಾಗಬೇಕು. ಹುಡುಗರಲ್ಲಿ ಜ್ಞಾನಸಂಸ್ಕೃತಿ ಕಾರ್ಯ ಸಂಸ್ಕೃತಿಗಳೆರಡೂ ಉದ್ಬುದ್ಧವಾಗಿ ಪಸರಿಸಬೇಕು. ಆಗ ಬುದ್ಧಿಯ ಸಂಕುಚಿತತ್ವವು ಮಾಯವಾಗಿ ವಿಶಾಲತೆ ನೆಲೆಗೊಳ್ಳುವುದು. ಆಗಲೆ, ಹಳ್ಳಿಯ ಈಗಿನ ಶೋಚ್ಯಾವಸ್ಥೆ ಹೆಸರಳಿದು ಹೋಗುವುದು.

**ಶಿವ:**—ಆಗಲಿ; ಆದರೆ ಅಂಥ ಸಾಲೆಯನ್ನು ನಡೆಯಿಸಬೇಕಾದರೆ ಸರಿಯಾದ ಧನಾನುಕೂಲತೆ ಬೇಕಷ್ಟೆ?

**ಗಂಗಾ:**—ಯಾಕೆ?

**ಶಿವ:**—ಕಟ್ಟೋಣವಾಗಬೇಕು; ಉಪಾಧ್ಯಾಯರಿಗೆ ಸಂಬಳವಾಗ ಬೇಕು; ಸರಕಾರದವರು ಮಂಜೂರು ಮಾಡಲಿಕ್ಕೆ ಬೇಕಾದ ಪೂರ್ವ

ಸಿದ್ಧತೆ ಎಲ್ಲ ಆಗಬೇಕು. ಅದಕ್ಕೆ ಸ್ವಲ್ಪವುಟ್ಟಿಗಾದರೂ ಬಂಡವಾಳ ವಿರಬೇಕು.

**ಗಂಗಾ:**—ಸರಕಾರದ ಒಪ್ಪಿಗೆಯನ್ನು ಪಡೆಯಬೇಕೆಂದಾದರೆ ಅಷ್ಟೆಲ್ಲ ಆಗಬೇಕೆಂಬುದೇನೋ ಸರಿ. ಅಷ್ಟೊಂದು ದೊಡ್ಡ ಸಂಸ್ಥೆಯನ್ನು ನಡೆಯಿಸ ಬೇಕಾದುದರಿಂದ ಸರಕಾರವು ಕಟ್ಟಾಯದ ನಿಯಮವನ್ನೇರ್ಪಡಿಸಿದೆ. ಅದು ನ್ಯಾಯವೇ ಎನ್ನುವ. ಆದರೆ ನಮ್ಮದು ಅಂಥ ಸಂಸ್ಥೆಯಲ್ಲ. ನಮ್ಮ ಮೂವರ ಜೀವನಕ್ಕೆ ಬೇಕಾದಷ್ಟು ಹಣವನ್ನು ನಾವು ಹೇಗೂ ಸಂಪಾದಿಸ ಬಲ್ಲೆವು. ತತ್ಕಾಲಕ್ಕೆ ಒಂದು ಚಪ್ಪರಹಾಕಿ ಕೊಂಡರೆ ಸಾಕು; ಮಳೆಗಾಲ ಬರುವಾಗ ಮತ್ತೆ ಆಲೋಚಿಸಿಕೊಳ್ಳುವ.

**ಶಿವ:**—ಏನೋ? ನನ್ನೆಣಿಕೆಯಲ್ಲಿ ಇದು ದೋಣಿಯಲ್ಲಿ ಕಡಲನ್ನು ದಾಟುವ ಪ್ರಯತ್ನ.

**ಗಂಗಾ:**—ಅಲ್ಲ; ದೋಣಿಯಲ್ಲಿ ಹೊಳೆಯನ್ನು ದಾಟುವುದು. ನಮ್ಮ ಪ್ರಯತ್ನವು ಈಗ ಈ ಹಳ್ಳಿಯೊಂದನ್ನೆ ಹೊದ್ದಿಕೊಂಡಿದೆಯಲ್ಲವೆ? ಸರಕಾರದ ಸಂಚಿಯಲ್ಲಿ ಸೇರಿದರೆ ಸಮುದ್ರದಲ್ಲಿ ಸಕ್ಕರೆಯನ್ನು ಸೂಸಿದಂತಾದೀತು. ಮಾತ್ರವಲ್ಲ; ಅವರು ಗುಡ್ಡಕ್ಕೆಳೆವಾಗ ನಾವು ನೀರಿಗೆಳೆವಂತಾಗಲೂ ಬಹುದು. ಯಾವುದಕ್ಕೂ ಒಂದೆರಡು ವರ್ಷ ಹೀಗೇ ನಡೆಯಲಿ.

**ಶಿವ:**—ಆಗಲಿ; ನಮ್ಮ ಭದ್ರವಾದ ಹಳೆಯ ಮನೆ ಇದೆಯಷ್ಟೆ. ಅದ ರಲ್ಲಿ ಒಕ್ಕಲಿಲ್ಲ. ಅದೇ ಸಾಲೆಯ ಕಟ್ಟೋಣವಾಗಿರಲಿ ಪ್ರಕೃತಕ್ಕೆ. ಕೃಷ್ಣನ ಮಾತಂತಿರಲಿ; ನೀವಿಬ್ಬರೂ ಮನೆಯಲ್ಲೆ ಇರಬೇಕು.

**ಕೃಷ್ಣ:**—(ನಗುತ್ತಾ)ಅದೇನು ನನ್ನನ್ನು ಮಾತ್ರ ಹೊರದೂಡುತ್ತೀರೊ?

**ಶಿವ:**—ನಿನಗೇನು ಕುಬೇರನಿಗೆ?

**ಕೃಷ್ಣ:**—ಆ ಕುಬೇರನ ಅವಸ್ಥೆ ಗೊತ್ತಿಲ್ಲವೆ ನಿಮಗೆ? ಊರಿಂದೋಡಿ ಬಡಗಣ ಬೆಟ್ಟವೊಂದರಲ್ಲಿ ಅಡಗಿದ್ದಾನಂತೆ.

**ಶಿವ:**—ಅವನಿಗೊದಗಿದುದು ತಮ್ಮನಾದ ರಾವಣನ ಕಾಟ. ನಿನಗೆ ಅಂಥ ಕಾಟವೇನೂ ಇಲ್ಲವಲ್ಲ.

**ಕೃಷ್ಣ:**— ತಂದೆಯ ಕಾಡತೊಡಗಿದರೆ ತಮ್ಮನದಕ್ಕಿಂತಲೂ ಕಠಿಸ ವಾಗಬಹುದು.

**ಶಿವ:**— ಅದೇನು?

**ಕೃಷ್ಣ:**— ನಾನು ವಿದ್ಯಾಭ್ಯಾಸವನ್ನು ಬಿಟ್ಟು ಮನೆಯಲ್ಲಿ ಇರುವು ದೆಂದು ನಿರ್ಣಯಿಸಿದುದು ಅವರ ಮನಸ್ಸಿಗೆ ಕಷ್ಟಯವಾಗಿದೆ. ಇನ್ನು ಗಂಗಾಧರರಾಯರೊಡನೆ ಈ ಕೆಲಸಕ್ಕೆ ಕೈ ಹಾಕುವುದೂ ಗೊತ್ತಾದರೆ ಏನೆಲ್ಲ ಆಗುವುದೊ?

**ಶಿವ:**— ನೀನು ಕಲಿಯಬೇಕೆಂಬ ಭಾವನೆಯಲ್ಲವದು; ಮನೆಯಲ್ಲಿ ದ್ದರೆ ತನ್ನ ಕಯ್ಯನ್ನು ಕಟ್ಟಿದಂತಾವೀತು; ಎಂಬ ಹೆದರಿಕೆ.

**ಗಂಗಾ:**— ರಾಯರೆ, ನಮ್ಮೊಡನೆ ಸೇರಿದರೆ ಮನೆಯೊಳಗೆ ಕಲ್ಮಷ ವಾಗಬಹುದೆಂಬ ಸಂದೇಹವಿದ್ದರೆ, ನೀವೀಗ ದೂರದಲ್ಲೆ ಇದ್ದು ಬಿಡಿರಿ.

**ಕೃಷ್ಣ:**— ಅದೊಂದೂ ಇಲ್ಲ. ಅಡಿಯಲ್ಲಿ ಕಸ್ಮಲವಿದ್ದರೆ ಅದನ್ನು ಕದಡಿ ಆರಿಸಲೇಬೇಕು.

**ಶಿವ:**— ಹೌದು.

ನಿರ್ಣಯಕ್ಕೆ ಮುದ್ರೆಯಾಯಿತು. ವಿದ್ಯಾದಶಮಿಯ ದಿವಸ ಶಾಲಾ ಪ್ರಾರಂಭವೂ ಆಯಿತು. ಯಾವುದಾದರೂ ಸರಿ; ಹೊಸತೆಂದರೆ ಎಲ್ಲವರ ಕಣ್ಣು ಆ ಕಡೆಗೇ ತಿರುಗುವುದು ಪ್ರಕೃತಿ. ಅದರಲ್ಲಿಯೂ ಈ ಶಾಲೆಯಲ್ಲಿ ಹುಡುಗರು ಸಂಬಳ ಕೊಡಬೇಕಾಗಿಲ್ಲ; ಉಪಾಧ್ಯಾಯರೆಂದರೆ ಹಳ್ಳಿಯ "ಮಾಸ್ತರ"ಂತಲ್ಲ; ಬಹುಕಾಲ ಕಲಿತು ಬಂದವರು; ಇತ್ಯಾದಿ ಕಾರಣ ಗಳಿಂದ ಹಲವು ಹುಡುಗರು ಬಂದು ಸೇರತೊಡಗಿದರು. ಕನ್ನಡ ಭೂಗೋಳ ಚರಿತ್ರೆಗಳನ್ನು ಕಲಿಸಲಿಕ್ಕೆ ಗಂಗಾಧರ; ಇಂಗ್ಲಿಷು ಲೆಕ್ಕ ಕೈಗಾರಿಕೆಗಳಿಗೆ ಕೃಷ್ಣರಾಯ; ಸಂಗೀತಕ್ಕೆ ಗೋವಿಂದಾಚಾರ್ಯ; ಹೀಗೆ ಪಾಠಕ್ರಮ ವಾಯಿತು. ಸಾಲೆ ಬಿಡುವುದಕ್ಕೆ ಒಂದು ಗಂಟೆ ಮೊದಲು ಎಲ್ಲ ಹುಡುಗರನ್ನು ಕೂಡಿಸಿ, ವರ್ತಮಾನ ಪತ್ರಿಕೆಗಳಲ್ಲಿರುವ ಮುಖ್ಯವಾದ ಸುದ್ದಿಗಳನ್ನು ಯಾರಾದರೂ ಒಬ್ಬರು ವಿವರಿಸುವುದೂ ಕ್ರಮದೊಳಗೇ ಸೇರಿತ್ತು. ದಿನವ ಮೇಲೆ ದಿನವಾಗಿ ಆರೇಳು ತಿಂಗಳೂ ಕಳೆಯಿತು. ಅಷ್ಟರಲ್ಲಿ

ಚಿಕ್ಕದೊಂದು ಪುಸ್ತಕ ಭಂಡಾರವೂ ತಲೆದೋರಿತು. ಕಲಿಯುತ್ತಿರುವ ಹುಡುಗರಲ್ಲದೆ ಓದಲಿಕ್ಕಾಗಿ ಆ ಹಳ್ಳಿ ನೆರೆಹಳ್ಳಿಗಳ ಹಲವು ಯುವಕರೂ ಬರುತ್ತಿದ್ದರು. ಆ ಸಂದರ್ಭಗಳಲ್ಲಿ "ಸಾಮಾಜಿಕ ಆರ್ಥಿಕ ರಾಜಕೀಯ" ವಿಷಯುಗಳೊಳಗೆ ಯಾವುದನ್ನಾದರೂ ಎತ್ತಿಕೊಂಡು ಗಂಗಾಧರನ ಉಪ ನ್ಯಾಸವು ಎಡೆಬಿಡದೆ ನಡೆಯುತ್ತಲೇ ಇತ್ತು. ಹಾಗೆ ಬರುತ್ತಿದ್ದ ಯುವಕ ರೊಳಗೆ ನಾಗಪ್ಪಯ್ಯನ ಮಗ ನಾರಾಯಣನೂ ಒಬ್ಬನು. ಬೇರೆ ಸಾಲೆಗಳಿಗೆ ಹೋಗುತ್ತಿದ್ದವರೂ ಗುಂಪುಗೂಡಿ ಇದಕ್ಕೇ ಬರತೊಡಗಿದರು. ಆಯಾ ಸಾಲೆಗಳ ಉಪಾಧ್ಯಾಯರಿಗೆ ಇಲ್ಲಿ ನಡೆಯುತ್ತಿದ್ದ ಉಪನ್ಯಾಸಗಳನ್ನು ಕೇಳಿ ಪುಸ್ತಕಗಳನ್ನು ಓದಿ ಹೋಗುವುದು; ತಮ್ಮ ಶಾಲೆಯ "ರಿಜಿಸ್ಟರ್ ಪಟ್ಟಿ" ಯಲ್ಲಿ ದಿನಂಪ್ರತಿಯೂ ಹುಡುಗರ ಹೆಸರಿನ ಮುಂದೆ ಈ × ಗುರುತನ್ನು ಹಾಕಿ ಬಿಡುವುದು; ಇನ್‌ಸ್ಪೆಕ್ಟರು ಬರುವ ಸಮಯದಲ್ಲಿ ಮನೆಮನೆಗೆ ಹೋಗಿ ಹಿರಿಯರಿಗೆ ಕೈ ಮುಗಿದು ಆಯಾ ಹುಡುಗರನ್ನು ಎರವಿಗೆ ತಂದಿಟ್ಟು ಕೊಳ್ಳುವುದು; ಗ್ರೇಂಟಿಗಾಗುವಾಗ ಕೈತೊಳೆದು ತಯಾರಾಗುವುದು; ಇಷ್ಟೆ ಕೆಲಸವಾಯಿತು. ಅಂತೂ ಸಾಲೆಯ ಪರಿಮಳ, ಆ ಹಳ್ಳಿಯಲ್ಲಿ ಮಾತ್ರ ವಲ್ಲ, ಹಳ್ಳಿಹಳ್ಳಿಗಳಲ್ಲೆಲ್ಲ ಹಬ್ಬ ತೊಡಗಿತು.

ಈ ವಿಷಯದ ಇಳಿಯೊತ್ತುಗಳೆಲ್ಲ ನಾಗಪ್ಪಯ್ಯನಿಗೆ ತಿಳಿಯದಿರ ಲಿಲ್ಲ. ಗಂಗಾಧರನ ಕೀರ್ತಿಯ ಚಿಗುರನ್ನು ಮುರಿದುಬಿಡಲಿಕ್ಕೆ, ಒಳ ಗಿಂದೊಳಗೆ ಅವನು ಹೆಣಗುತ್ತಲೆ ಇದ್ದನು. ಆದರೆ ಒಂದರೆಡೆಯಲ್ಲಿ ಹತ್ತರಂತೆ ಕೊನರುತ್ತಿತ್ತದು. ಕೆಲದಿನಗಳೆವಾಗ ತನ್ನ ಮಗ ನಾಣನೂ ಆ ಗಂಗಾಧರನ ಶಿಷ್ಯರೊಳಗಾದನೆಂಬುದು ಅವನಿಗೆ ಗೊತ್ತಾಯಿತು. ಗೊತ್ತಾದುದೆಂದರೆ ಹುಣ್ಣಿನ ಮೇಲೆ ಉಪ್ಪು ನೀರು ತಳಿದಂತೆ. ಆ ಸುದ್ದಿ ಸಿಕ್ಕುವಾಗ ರಾತ್ರಿ ಹತ್ತು ಗಂಟೆಯಾಗಿತ್ತು; ಆದರೂ ಹುಡುಗನು ಮನೆಗೆ ಬಂದಿರಲಿಲ್ಲ. ಊಟವನ್ನು ಮುಗಿಸಿ ಕೊಟ್ಟಿಗೆಯ ತನ್ನ ಕೋಣೆಗಯ್ದಿದನು. ಬಾಗಿಲನ್ನು ಭದ್ರವಾಗಿ ಬಲಿದು ಹಸೆಬಿಡಿಸಿ ಕುಳಿತುಕೊಂಡನು. ದೀರ್ಘಾಲೋಚನೆಯೊಂದು ಅವನ ತಲೆಗೇರಿತು. "ಇದೇನಾಶ್ಚರ್ಯ! ನಾಗಪ್ಪಯ್ಯನು ಮುಟ್ಟಿದುದೆಲ್ಲ ಮಣಿಯಾಗುತ್ತಿತ್ತು ಮೊದಲು; ಈಗ ಮಸಿಯಾಗತೊಡಗಿದೆ!! ಅಂಥ ಭೀಮಯ್ಯನ ಕಲ್ಲೆದೆಯೂ ಈ ನನಗೆ ಎಡಾ

ರಾಗಿ ಅಣಂಬೆಯಂತೆ ಮೆದುವಾಗಿ ಹೋದುದನ್ನರಿತು ನನ್ನಲ್ಲಿ ಹಗೆ ಗಟ್ಟುವುದೆಂದರೆ ಊರವರಿಗೆ ಚಳಿಜ್ವರ ಹಿಡಿಯುತ್ತಿತ್ತು. ಆದರೆ ಆ ಭೀಮಯ್ಯನು ಸತ್ತುದೇ ತಡ; ಎಲ್ಲದಕ್ಕೂ "ಪ್ರಾಚೀನಾವೀತಿ." ಈಗ ಈ ನಾಡಾಡಿ ಗಂಗ ಶಿವಣ್ಣ ಕಿಟ್ಟರೆಂಬ ಮೂರು ಮೂರ್ತಿಗಳ ಕಯ್ಮೇಕ್ಕೆ. ಅಂಥ ರಾಮಯ್ಯನೆಂದರೆ ಈಗ ಹತ್ತಿಗಿಂತಲೂ ಹಗುರ. "ಬಾಗಿಯನ್ನು ನಮ್ಮ ನಾಣನಿಗೆ ಕೊಡುವುದೇ ಸೈ" ಎಂದು ರಾಮಯ್ಯನು ನನ್ನ ಕೈಗೆ ಕೈ ಹೊಡೆದಿದ್ದಾನೆ. ಅದೇ ಹುಡುಗಿಯನ್ನು ಈ ನಾಡಾಡಿಗೆ ಕೈವಿಡಿಸ ಬೇಕೆಂದು ಕಿಟ್ಟನ ಚಲವಂತೆ. ಅದೂ ಆಗಿಬಿಟ್ಟರೆ ನಾಗಪ್ಪಯ್ಯನು ಈ ಊರಲ್ಲಿ ಮುಖದೋರಿಸುತ್ತಿರುವುದಾದರೂ ಹೇಗೆ? ಒಟ್ಟಾರೆ ನಾಗಪ್ಪ ಯ್ಯನ ದೆಶೆಯಲ್ಲಿ ಈಗ ಭರಿತವಲ್ಲ; ಇಳಿತ.ಅಲ್ಲವಾದರೆ ರಾಮಯ್ಯನಿಂದ ಬರೆಯಿಸಿಕೊಂಡ ದಸ್ತೈವಜೂ ಕನ್ನಡಿಯ ಗಂಟಾಗುತ್ತಿತ್ತೆ? ಈ ಮದುವೆಗೆ ತೊಂದರೆಯಾದೀತೆಂದೆಣಿಸಿ ಒತ್ತಾಯದ ರಿಜಿಸ್ತ್ರಿಗೂ ಅರ್ಜಿಹಾಕಲಿಲ್ಲ. ಅಥವಾ, ಹೀಗೆಲ್ಲ ಆಕಾಶ ಪುರಾಣವನ್ನೋದುತ್ತಿರಬಹುದೆ? ವಿರೋಧಿ ಗಳು ಎಡೆನೋಡಿ ಕಾಲುನಕ್ಕಿ ತಲೆಯಡಿಯ ಗಂಟನ್ನು ಹಾರಿಸಲಿಕ್ಕೆ ಹವ ಣಿಸುತ್ತಿದ್ದಾರೆ. ಪುಸ್ತಕಗಳನ್ನೋದಲಿಕ್ಕೆ ಉಪನ್ಯಾಸಗಳನ್ನು ಕೇಳಲಿಕ್ಕೆಂದು ನಮ್ಮ ನಾಣನನ್ನು ಸೆಳೆಯುತ್ತಾರಂತೆ. ಪಾಪ! ಈ ಮಾನಿಗೆ ಗೊತ್ತಿದೆಯೆ ಆ ಸನ್ಯಾಸದ ಗುಟ್ಟು?

ಇರಲಿ; ಈ ಸಮಯದಲ್ಲಿ ಎದೆಗೆಡಬಾರದು. ನನಗೆ ಈ ಪ್ರಪಂಚ ದಲ್ಲಿ ಬೇರೆ ಯಾವ ಸುಖವಿದೆ? ನಾಣನ ಆಸೆಯೊಂದೆ ಇರುವುದು. ಅವ ನನ್ನು ಒಂದು ನೆಲೆಯಲ್ಲಿ ನಿಲ್ಲಿಸಿ ಬಿಟ್ಟರೆ ನನ್ನ ಕೆಲಸವಾಯಿತು. ಅವನ ತಾಯಿ "ಈ ತಬ್ಬಿಲಿಯನ್ನು ತಳ್ಳಿಬಿಡಬೇಡಿರಿ" ಎಂದು ಕಣ್ಣೀರಿನೊಡನೆ ಪ್ರಾಣವನ್ನೂ ಸುರಿಸಿದ ನೋಟವು ಈಗಲೂ ತೋರುತ್ತದೆ. ಅದು ಮರೆತುಹೋಗುವುದುಂಟೆ? ಆ ಮೇಲೆ ಈಕೆಯನ್ನೇನೋ ಕೈವಿಡಿದೆನು. ಇದೊಂದು ಪಶುವೇ ಆದರೂ ನಾಣನ ಏಳ್ಗೆಗಾಗಿ ಒಂದು ರೀತಿಯಲ್ಲಿಟ್ಟು ಕೊಂಡಿದ್ದೇನೆ. ಅದರಿಂದಲ್ಲವೆ ಆ ರಾಮಯ್ಯನು, ನಾನು ಕೈದೋರಿಸಿ ದಲ್ಲಿ ಹಾರುತ್ತಿರುವುದು? ಬಾಗಿಯನ್ನು ನಾಣನಿಗೆ ಕೊಡುವುದಕ್ಕೂ ಅಸ್ತುಗೊಟ್ಟುದು? ಈ ಗುಟ್ಟುಗಳೆಲ್ಲ ಆ ಹುಡುಗನಿಗೆ ಗೊತ್ತಿಲ್ಲ. ಮಾತಾ

ಡಿದರೆ ಕೋಪಿಸಿಕೊಳ್ಳುತ್ತಾನೆ. ಹೋಗಲಿ; ಮಗುವಿನ ಮಲಕ್ಕಾಗಿ ತೊಡೆಯನ್ನೇ ಕಡಿಯಬಹುದೆ? ತೊಳೆದುಕೊಳ್ಳಬೇಕು. ಅದರಿಂದಲೆ ಈಗ ಕಂಗೆಡಬಾರದು. ಗುತ್ತಿನ ನಾಜ್ಞಪ್ಪ ಕೊಂಡೆಯ ಮನಸ್ಸನ್ನು ಒಲಿಸಿಕೊಳ್ಳಬೇಕು; ಹುಡುಗನ ಆಗುಹೋಗುಗಳನ್ನೆಲ್ಲ ಅವನಿಗೊಪ್ಪಿಸಿ ಬಿಡಬೇಕು. ಮದುವೆಯ ವಿಷಯವನ್ನಾಮೇಲೆ ನೋಡುವ. ಭೀಮಯ್ಯನು ಸತ್ತುಹೋಗಿ ಇನ್ನೂ ವರ್ಷಾಂತಿಕವಾಗದುದರಿಂದ ಈಗಲೇ ಅವನಿಗೆ ಮದುವೆಯಾಗುವ ಸಂದರ್ಭವಿಲ್ಲವಷ್ಟೆ.'' ಎಂದೆಣಿಸುತ್ತಿದ್ದಾಗ ಹನ್ನೆರಡು ಗಂಟೆ ಕಳೆದಿತ್ತು. ನಾಗಪ್ಪಯ್ಯನ ಸಮಾಧಿಯೂ ಇಳಿಯುತ್ತಾ ಬಂದಿತ್ತು. ಆಗ ಹೊರಗಣಿಂದ ಬಾಗಿಲನ್ನು ತಟ್ಟಿದಂತಾಯಿತು.

**ನಾಗ**:—ಅದಾರು?

''ನಾನು''

**ನಾಗ**:—ನಾನು, ಎಂದರೆ?

''ನಾನು; ಗೊತ್ತಾಗಲಿಲ್ಲವೆ?''

**ನಾಗ**:—ನಾನೆಂಬುದೂ ಹೆಸರೇನು?

''ಏನು ನನ್ನನ್ನೂ ತಮಾಷೆ ಮಾಡುತ್ತೀಯೆ?''

**ನಾಗ**:—ನನಗೆ ತಮಾಷೆ ಮಾಡುವ ಅಭ್ಯಾಸವೇ ಇಲ್ಲ.

''ಸ್ವರದಿಂದಾದರೂ ಗೊತ್ತಾಗಲಿಲ್ಲವೆ ನಾಗಪ್ಪಯ್ಯ?''

**ನಾಗ**:—ನಾನೇನು ಸಂಗೀತಗಾರನೆಂದು ಭಾವಿಸಿದಿರೆ? ನನಗೆ ಸ್ವರಜ್ಞಾನವೇನೂ ಇಲ್ಲ; ನಾಗಪ್ಪಯ್ಯನೆಂಬುದು ಬರಿಯ ಹೆಸರು ಮಾತ್ರ.

''ಅಂತೂ ಬಾಗಿಲುದೆರೆವುದಿಲ್ಲವಲ್ಲವೆ? ಆಯಿತು.''

**ನಾಗ**:—ಸಿಟ್ಟು ಮಾಡಬೇಡಿರಿ ಸ್ವಾಮಿ. ಮೊದಲೆ ಕಾಡೂರು; ಅದರ ಮೇಲೆ ನಡುವಿರುಳು; ಸಾಲದುದಕ್ಕೆ ಹಲವರು ಹರಿದು ತಿನ್ನುವ ಹಗೆಗಾರರು. ಅದರಿಂದ, ಸ್ವರದ ಹೊಲಬಾಗುತ್ತಾ ಬಂದರೂ ಕೇಳಬೇಕಾಯಿತು. ''ನಾನು'' ಎಂದರೆ 'ಉತ್ತಮ ಪುರುಷ'ನೆಂದು ಗೊತ್ತಿದೆ. ಆದರೂ ಬೇರೆಯವರಿಗೆ 'ಮಧ್ಯಮ'ನಾಗಿ ತೋರುವುದುಂಟಲ್ಲ.

"ನಿನ್ನ ಪುರಾಣವೆಲ್ಲ ನನಗೆ ಗೊತ್ತಾಗುವುದಿಲ್ಲ; ಹೋಗುತ್ತೇನೆ" ಎಂದು ವ್ಯಕ್ತಿ ಮೆಟ್ಟಿಲನ್ನಿಳಿಯಿತು.

"ಅದು ರಾಮಯ್ಯನವರಲ್ಲವೆ?" ಎಂಬ ಮಾತು ಬಡಗಣ ದಿಕ್ಕಿನಿಂದ ಕೇಳಿತು. ಒಡನೆ ನಾಗಪ್ಪಯ್ಯನ ಕಣ್ಣು ತೆಂಕಣ ಪಾರ್ಶ್ವಕ್ಕೆ ತಿರುಗಿತು. ಮನೆಯ ಮೆಟ್ಟಿಲಲ್ಲಿ ಕೈದೀಪವನ್ನು ಹಿಡಿದುಕೊಂಡು ನಿಂತಿದ್ದ ಪಾಕಮ್ಮನನ್ನು ಕಂಡನು. ಪಾಕಮ್ಮನೆಂದರೆ ನಾಗಪ್ಪಯ್ಯನ ಎರಡನೆಯ ಹೆಂಡತಿಯೆಂಬುದನ್ನು ವಾಚಕರು ಊಹಿಸಿಕೊಳ್ಳಬಹುದು. ಕೂಡಲೆ ಎದ್ದು ಬಾಗಿಲನ್ನು ತೆರೆದನು. "ಓಹೋ ರಾಮಯ್ಯನವರೆ? ಕ್ಷಮಿಸಿರಿ. ಒಳಗೆ ಬನ್ನಿರಿ" ಎಂದನು.

**ರಾಮು:**—ಏನು ಬಾಗಿಲುದೆರೆಯಲಿಕ್ಕೂ ಇಷ್ಟೆಲ್ಲ ಆಚಾರಗಳು ನಡೆಯಬೇಕೆ?

**ನಾಗ:**—ಬೇಸರಗೊಳ್ಳಬೇಡಿರಿ ಸ್ವಾಮಿ. ಈಗ ನಾಗಪ್ಪಯ್ಯನ ಅವಸ್ಥೆಯೆಂದರೆ ಮೊದಲಿನಂತಲ್ಲ. ಸ್ವರಭಾವದಿಂದ ನೀವೆಂದು ಗೊತ್ತಾದರೂ ಈ ನಡುವಿರುಳು ಬಾಗಿಲುದೆರೆದು ಬಿಡುವಷ್ಟು ಧೈರ್ಯವಾಗಲಿಲ್ಲ.

**ರಾಮು:**—ಅದೇನು ಅವಸ್ಥೆ?

**ನಾಗ:**—ನಿಮ್ಮ ಶಿವರಾಯ ನನ್ನ ವಿಷಯದಲ್ಲಿ ಏನು ಮಾಡಿಯಾನು, ಏನು ಮಾಡಲಿಕ್ಕಿಲ್ಲ, ಎಂಬ ನಿರ್ಧಾರವು ನನಗಿಲ್ಲ. ಬಲವಂತನ ಹಗೆಯೊದಗಿ ಬಿಟ್ಟಮೇಲೆ ಮಾಡುವುದೇನು? ಬಡವನಾದರೂ ಸತ್ತು ಬಿಡಲಿಕ್ಕಾಗುವುದೆ? ಇಲ್ಲ; ಆದಷ್ಟು ಎಚ್ಚರವಾಗಿರುತ್ತೇನೆ. ವಿಚಾರಿಸಿಕೊಳ್ಳದೆ ಬಾಗಿಲು ತೆರೆದುಬಿಟ್ಟರೆ ಜೀವಕ್ಕೇ ಸಂಚಕಾರವಾಗುವ ಸಂಭವವೂ ಇದೆ.

**ರಾಮು:**—ಅದಕ್ಕೆ ದೃಷ್ಟಾಂತವಿದೆಯೆ?

**ನಾಗ:**—ಸರಿ; ಅಂಥ ದೃಷ್ಟಾಂತವೂ ಒದಗಬೇಕಿತ್ತೆಂದೋ ನಿಮ್ಮೆಣಿಕೆ?

**ರಾಮು:**—ಅಲ್ಲ; ಆದರೆ ಸುಮ್ಮನೆ ಹಾಗೆಲ್ಲ ಭಾವಿಸುವುದು ತಪ್ಪಲ್ಲವೆ?

**ನಾಗ:**—ಅಂಥ ದೃಷ್ಟಾಂತವೊದಗುತ್ತಿದ್ದರೆ ನಿಮ್ಮಲ್ಲಿ ಹೀಗೆ ಹೇಳುವವನೇ ಇಲ್ಲದಾಗುತ್ತಿತ್ತು.

**ರಾಮು:**—ಹಾಗಲ್ಲವಯ್ಯ. ರಾತ್ರಿಯಲ್ಲಿ ನಿನ್ನನ್ನಾರಾದರೂ ಕಾಡಿದುದುಂಟೆ?

**ನಾಗ:**—ಇಲ್ಲ; ಶಿವರಾಯನ ಉಪಟಳವೇರುತ್ತಿದೆಯೆಂದರಿತ ಮೇಲೆ ನಾನು ಸುಮಾರು ಹತ್ತು ಗಂಟೆ ಕಳೆದ ಮೇಲೆ ಹೊರಬರುವುದನ್ನೆ ಬಿಟ್ಟಿದ್ದೇನೆ.

**ರಾಮು:**—ನಾನು ಕರೆದೊಡನೆ ಬಾಗಿಲುದೆರೆದು ಹೊರಗೆ ಬಂದಳು ಪಾಕಮ್ಮ. ನಾಣನಿನ್ನೂ ಬರಲಿಲ್ಲವಂತೆ. ಅವರಿಗೆಲ್ಲ ಈ ಉಪಟಳವಿಲ್ಲವೆ?

**ನಾಗ:**—ಇಲ್ಲ. ಶಿವರಾಯನಿಗೆ ನನ್ನಲ್ಲಷ್ಟೇ ಹಗೆ. ಮಾತ್ರವಲ್ಲ; ಅವರೆಲ್ಲ ಕೂಡಿ ಮೆಲ್ಲನೆ ನಾಣನಿಗೂ ಬಲೆಬೀಸಿದ್ದಾರೆಂದು ತೋರುತ್ತದೆ.

**ರಾಮು:**—ಅದು ಹೇಗೆ ಗೊತ್ತಾಯಿತು?

**ನಾಗ:**—ಇವನು ಆ ಸಾಲೆಗೆ ಆಗಾಗ ಹೋಗುತ್ತಾನಂತೆ. ಅವರ ಹಿಂದೆಯೆ ತಿರುಗುತ್ತಾನಂತೆ. ಮಾಡುವುದೇನು? ಎಲ್ಲವೂ ನನ್ನ ಯೋಗ್ಯತೆ. ಇರಲಿ; ಊಟವಾಗಿದೆಯೆ?

**ರಾಮು:**—ಆಗಿದೆ. ಸಾಲದುದಕ್ಕೆ ಪಾಕಮ್ಮ ತಿಂಡಿಯನ್ನೂ ಕೊಟ್ಟಳು.

**ನಾಗ:**—ಏನು ಈ ಎಡೆಸಮಯದಲ್ಲಿ ಹೊರಟಿರಿ?

**ರಾಮು:**—ಇಲ್ಲ; ಸ್ವಲ್ಪ ಆಗಲೇ ಬಂದಿದ್ದೇನೆ. ಮನೆಯವರೆಲ್ಲ ಶಿವನಲ್ಲಿಗೆ ಹೋಗಿದ್ದಾರೆ. ಬೇಸರವಾಯಿತು. ಇತ್ತಲಾಗಿ ಬಾರದೆ ಸುಮಾರು ದಿನವೂ ಆಯಿತು. ಹೊರಟುಬಿಟ್ಟೆ.

**ನಾಗ:**—(ನಗುತ್ತಾ) ಆಗಲಿ; ಪಾಲಿಗೆ ಬಂದುದೇ ಪರಮಾನ್ನ. ಈ ಇಕ್ಕಟ್ಟಿನಲ್ಲಿ ನೀವೂ ಮರೆತುಬಿಟ್ಟಿರೋ ಎಂಬ ಸಂದೇಹವು ಕೊರೆಯುತ್ತಿತ್ತು ನಮ್ಮನ್ನು. ಇರಲಿ; ಅದೇನು ಎಲ್ಲರೂ ಶಿವನಲ್ಲಿಗೆ ಹೋಗಿದ್ದಾರೆನ್ನುತ್ತೀರಿ?

ರಾಮು:—ಹೌದು; ಅಲ್ಲಿಗೆ ಹಾಗೆ ಹೋಗುವುದು ಒಂದು ರೋಗವೆ ಆಗಿಬಿಟ್ಟಿದೆ ನಮ್ಮ ಮನೆಗೆ.

ನಾಗ:—ಬಾಗಿಯೂ ಹೋಗಿದ್ದಾಳೆಯೋ?

ರಾಮು:—ಹೌದು; ಅವಳಿಲ್ಲದಿದ್ದರೆ ಉಳಿದವರು ಯಾಕೆ ಹೋಗುತ್ತಾರೆ?

ನಾಗ:—ಅದೇನು, ಒಂದು ರೀತಿಯಲ್ಲಿ ಹೇಳುತ್ತೀರಿ?

ರಾಮು:—ಹೌದು; ಅದೊಂದು ರೀತಿಯೇ. ಆ ಗಂಗಾಧರನೆಂದರೆ ನಮ್ಮವರಿಗೆ ಅವತಾರ ಪುರುಷನೇ ಆಗಿಬಿಟ್ಟಿದ್ದಾನೆ. ಅವನಿಗೆ ಬಾಗಿಯನ್ನು ಕೊಡಬೇಕೆಂದು ಅವರೆಣಿಕೆ. ಅವನು ಮಹಾಬುದ್ಧಿಶಾಲಿ; ಅವನಂತಿರುವ ಚೆಲುವರು ಹುಡುಕಿದರೆ ಸಿಕ್ಕಲಿಕ್ಕಿಲ್ಲ; ಸಾಲದುದಕ್ಕೆ ನಮ್ಮ ಶಿವರಾಯನ ಅಳಿಯ; ಸರ್ವಗುಣ ಸಂಪನ್ನ. ನೀನು ಪೂರ್ವಾಪರವನೆಲ್ಲ ಬಲ್ಲವನಷ್ಟೆ. ನೀನೇ ಹೇಳು. ಬಾರದ ಬನ್ನನನ್ನೊದಗಿಸಿ ಭೀಮಯ್ಯನನ್ನು ಧ್ವಂಸ ಮಾಡಿದುದು ನಾನಲ್ಲವೆ? ಅದೇ ನಾನು ಈಗ ಅದೇ ಭೀಮಯ್ಯನ ಮಗನ ಕಯ್ಯಲ್ಲಿ ಕಯ್ಯನ್ನಿರಿಸಿ ಮಗಳನ್ನು ಧಾರೆಯೆರೆದು ಕೊಡುವುದು ಯಾವ ಮುಖದಲ್ಲಿ? ನನ್ನನ್ನು ಜೀವಚ್ಛವವಾಗಿ ಮಾಡಬೇಕೆಂದು ಅವರ ಭಾವನೆ.

ನಾಗ:—(ಕಯ್ಯನ್ನು ಕಯ್ಯಲ್ಲಿಟ್ಟು ತಿರುಗಿಸುತ್ತಾ) ಅಂಥ ದೊಡ್ಡ ವಿಷಯಕ್ಕೆ ಉತ್ತರಗೊಡುವುದಂತಿರಲಿ; ಅದನ್ನು ತಿಳಿದುಕೊಳ್ಳಲಿಕ್ಕಾದರೂ ನನ್ನಂಥವನಿಗೆ ಶಕ್ತಿ ಎಲ್ಲಿದೆ?

ರಾಮು:—ಹಾಗೇಕೆ ಹೇಳುತ್ತಿ? ನಾನೊಬ್ಬ ಮಾತ್ರವೆ ಇರುವಾಗ ಅಂಥ ಕೊಂಕುಮಾತುಗಳೇಕೆ?

ನಾಗ:—ಅದೇನೋ ಸರಿ. ಆದರೆ "ಬಾಯಿಂದ ಬಿದ್ದುದು ಭಗಂಧರ"ವೆಂಬ ಮಾತು ನನ್ನಂಥ ಬಡವರ ವಿಷಯದಲ್ಲಿ ಅಕ್ಷರಶಃ ಸರಿಯಾಗುತ್ತಿದೆ. ಕೇಳಿದುದು ನಿಮ್ಮ ಬಾಯಲ್ಲಿ ಉಳಿವುದಿಲ್ಲ. ಆ ಮೇಲೆ ಪುಷ್ಪಾಂಜಲಿ ಸುರಿಯುತ್ತಿದೆ ಈ ತಲೆಯಲ್ಲಿ.

**ರಾಮು:**—ಅದಕ್ಕೇನು ಮಾಡಲಿ? ನೀನು ಮಾತಾಡದೆ ಸುಮ್ಮ ನಿರುತ್ತಿ ಎಂದೇ ಭಾವಿಸುವ. ಅವರ ತಾಳಕ್ಕೆ ಸರಿಯಾಗಿ ಕುಣಿಯುತ್ತಿರ ಲಿಕ್ಕೆ ನನಗೆ ಸಾಧ್ಯವೆ? ಅಲ್ಲ. ಆಗ ಅದೂ ನಿನ್ನ ಬೋಧನೆಯೆನ್ನುತ್ತಾರೆ. "ಅಂಡೆಬಾಯಿಗಟ್ಟಬಹುದು, ದೊಂಡೆ ಬಾಯಿಗಟ್ಟಲಿಕ್ಕೆ ಸಾಧ್ಯವಿಲ್ಲ".

**ನಾಗ:**—ಅದೇನೋ ಸರಿ. ಇರಲಿ; ಗಂಗಾಧರನಿಗೆ ಮಗಳನ್ನು ಕೊಡಬಾರದೆಂದೆ ನಿಮ್ಮೆಣಿಕೆಯೊ?

**ರಾಮು:**—ಹಾಗೆಂದರೇನು ನಾಗಪ್ಪಯ್ಯ? ನಾಣನಿಗೇ ಕೊಡುವು ದೆಂದು ನಿಶ್ಚಯಿಸಿದ ಮೇಲೆ ತದ್ವಿರುದ್ಧವಾಗಿ ನಡೆವುದು ಹೇಗೆ? ಒಂದು ವೇಳೆ ಕಾರಣಾಂತರದಿಂದ ಈ ಮದುವೆ ತಪ್ಪಿಹೋದರೂ, ರಾಮಯ್ಯನು ಜೀವಂತನಾಗಿರುವಾಗ ಆ ಮದುವೆಯಾಗಲಿಕ್ಕಿಲ್ಲ.

**ನಾಗ:**—ನೀವೇನೋ ನಾಣನಿಗೇ ಕೊಡುವುದೆಂದು ನಿಶ್ಚಯಿಸಿದ್ದೀರಿ ಎನ್ನುವ. ಹುಡುಗಿಯ ಬಂಧುಬಾಂಧವರಿಗೆ ಅದೊಪ್ಪಿಗೆ ಇಲ್ಲವಾದರೆ?

**ರಾಮು:**—(ಕೋಪಿಸಿ) ಯಾವ ಸುಟ್ಟ ಬಂಧುಬಾಂಧವರಿಗೆ? ನಾನೇನು ಅವರಿಂದ ಹೊರಗಿನವನೆ?

**ನಾಗ:**—ಆದರೆ, ಇಂಥ ವಿಚಾರದಲ್ಲಿ ಹುಡುಗಿಯ ತಾಯಿಯ ಅಭಿಪ್ರಾಯವೆ ಪ್ರಬಲವಲ್ಲವೆ? ಮಾತ್ರವಲ್ಲ; ಪ್ರಾಯಬಂದ ಹುಡುಗಿಯ ಮನಸ್ಸು ಹೇಗಿದೆಯೆಂದು ತಿಳಿದುಕೊಳ್ಳಲಿಕ್ಕೆ ತಾಯಿಗೇ ಸಾಧ್ಯ.

**ರಾಮು:**—ಏನು, ಎತ್ತಿನಲ್ಲಿ ಕೇಳಿ ಹೊರೆಯೇರಿಸುವುದೆ? ಇದೇ ಮಾತನ್ನು ಕೇಳಿ ಬಿಟ್ಟೆ ನಮ್ಮ ಕಿಟ್ಟಪ್ಪನಲ್ಲಿಯೂ.

**ನಾಗ:**—ಏನೆಂದು ಹೇಳಿದನು?

**ರಾಮು:**—ಹೇಳುವುದೇನು? ಏನಾದರೂ ಹೇಳುವುದು. ಆದರೆ, ಗಂಗಾಧರನಿಗೇ ಕೊಡಬೇಕೆಂಬ ಮೊದಲಿನ ನಿರ್ಧಾರವು ಈಗ ಸ್ವಲ್ಪ ಕಡಿಮೆಯಾಗಿದೆ.

**ನಾಗ:**—ಕಾರಣವೇನು?

**ರಾಮು:**—ಮತ್ತೇನು? ಅದಕ್ಕೆ ನಾನೊಪ್ಪುವುದಿಲ್ಲವೆಂಬುದೇ ಕಾರಣ ವಾಗಿರಬೇಕು.

**ನಾಗ:**—ಮತ್ತೆ ಯಾರಿಗೆ ಕೊಡುವುದಂತೆ?

**ರಾಮು:**—ಆ ವಿಷಯದಲ್ಲಿ ಅವರ ಗುರಿ ಏನೂ ತೋರುವುದಿಲ್ಲ. "ಎಲ್ಲಿಯಾದರೂ ಹುಡುಕಬೇಕು" ಎನ್ನುತ್ತಾರೆ.

**ನಾಗ:**—ಎಡೆಬಿಡದೆ ಬಾಗಿಯನ್ನೂ ಕರಕೊಂಡು ಲಕ್ಷ್ಮಮ್ಮನವರು ಶಿವರಾಯನಲ್ಲಿಗೆ ಹೋಗುತ್ತಾರೆಂದು ನೀವೇ ಹೇಳುತ್ತೀರಿ. ಹಾಗೆ ಹೋಗುವುದನ್ನು ನೋಡಿದರೆ, ಹೀಗೆ ಹೇಳುವುದರ ಬೆಲೆ ಎಷ್ಟೆಂದು ಗೊತ್ತಾಗುವುದಿಲ್ಲವೆ?

**ರಾಮು:**—ಹೋಗುತ್ತಿರುವುದರಿಂದೇನು?

**ನಾಗ:**—ಇರಲಿ; ಬೇರೆ ಹುಡುಕುತ್ತಾರೆಯೆ?

**ರಾಮು:**—ಸುದ್ದಿ ಏನೂ ಇಲ್ಲ.

**ನಾಗ:**—ನೋಡಿರಿ; ಗಂಗಾಧರನಿಗೆ ಇನ್ನೂ ಎರಡು ತಿಂಗಳ ವರೆಗೆ ಮದುವೆಯಾಗಲಿಕ್ಕೆ ಸಾಧ್ಯವಿಲ್ಲ. ಆ ಮೇಲೆ ನಾಲ್ಕಯ್ದು ತಿಂಗಳು ಲಗ್ನ ಮುಹೂರ್ತವಿಲ್ಲ. ಅದರಿಂದ ಮದುವೆಯೆಂಬುದು ಹೇಗೂ ಬರುವ ವರ್ಷಕ್ಕೆ ಬೀಳುವುದು. ಹಾಗೆಂದ ಮೇಲೆ ಸುಮ್ಮನೆ ಈಗ ನಿಮ್ಮ ಮನಸ್ಸಿನಲ್ಲೇಕೆ ಬೇಸರವನ್ನುಂಟು ಮಾಡಬೇಕು? ಅದರಿಂದಲೆ ಶಿವ ರಾಯಾದಿಗಳು ನಿಮ್ಮೆಣಿಕೆಗೆ ಅರ್ಧಸಮ್ಮತಿಯಿರುವಂತೆ ನಟಿಸುತ್ತಿರು ವುದು.

**ರಾಮು:**—ಎರಡು ತಿಂಗಳ ವರೆಗೆ ಗಂಗಾಧರನ ಮದುವೆಗೆ ಅಡ್ಡಿ ಏನು?

**ನಾಗ:**—(ನಗುತ್ತಾ) ಗಂಗಾಧರನೆಂದರೆ ಭೀಮಯ್ಯನ ಮಗನೆಂದ ಲ್ಲವೆ ಅವರ ಹೇಳಿಕೆ?

**ರಾಮು:**—(ನಕ್ಕು) ಹೌದು; ಅದರಲ್ಲಿ ಸಂದೇಹವಿಲ್ಲ;

**ನಾಗ:**—ಇರಲಿ; ಅವನೇ ಮಾಸಿಕವನ್ನೂ ಮಾಡುತ್ತಿರುವುದರಿಂದ ಭೀಮಯ್ಯನ ಮಗನೆಂದೇ ಹೇಳುವ. ಮಗನಾದ ಮೇಲೆ ತಂದೆಯ ವಾರ್ಷಿಕಶ್ರಾದ್ಧವಾಗುವ ವರೆಗೆ ಮದುವೆಯಾಗ ಕೂಡದಲ್ಲವೆ? ಭೀಮಯ್ಯನು ತೀರಿಹೋಗಿ ಈಗ ಹತ್ತು ತಿಂಗಳು ಕಳೆಯಿತಷ್ಟೆ. ಹುಂ, ಶಿವರಾಯನ ಈ ಯುಕ್ತಿಯೆಲ್ಲ ನಾಗಪ್ಪಯ್ಯನಿಗೋ ಗೊತ್ತಾಗದಿರುವುದು?

**ರಾಮ:**—(ಆಲೋಚಿಸಿ) ಓಹೋ, ಸರಿಯದು. ಈ ವರೆಗೆ "ಹುಡುಗಿ ಕೊರಳಿಗೆ ಬಂದಿದ್ದಾಳೆಂದು ನಿಮಗೆ ಗೊತ್ತೇ ಆಗುವುದಿಲ್ಲ; ಮದುವೆಯಾಗದಿದ್ದರೂ ನೆರೆದು ಮಿಂದವಳಂತೆ ತೋರುತ್ತಾಳೆ" ಎಂದು ಹರಟುತ್ತಲೆ ಇದ್ದಳು. ಕಿಟ್ಟಪ್ಪ ಬಂದು ಗಂಗಾಧರನ ಬಳಕೆಯಾದ ಮೇಲೆ ಈಗ ಆ ಸುದ್ದಿಯೇ ಅವಳಿಗಿಲ್ಲ. ನಮ್ಮ ಬಾಗಿಗೂ ಕೂಡ ಶಿವರಾಯನ ಮನೆಗೆ ಹೋಗುವುದೆಂದರೆ ಉತ್ಸವಕ್ಕೆ ಹೋಗುವಂತೆ.

**ನಾಗ:**—ಇವರು ಹೇಳಿಕೊಟ್ಟ ಬುದ್ಧಿಯೆ ಅವಳ ಕೆಲಸದಲ್ಲಿ ಹೊರಡುತ್ತಿದೆ. ಅದರಲ್ಲಿ ಆಶ್ಚರ್ಯವೇನು? ನನ್ನದೇನೋ ಪರುಕು ಬಾಯಿ. ಕಂಡುದನ್ನು ಕಂಡಂತೆ ಹೇಳಿ ಬಿಡುವುದು ಅಭ್ಯಾಸವಾಗಿ ಬಿಟ್ಟಿದೆ. ಒಮ್ಮೊಮ್ಮೆ ನಿಮಗೂ ಕೆಂಡದಂಥ ಸಿಟ್ಟುಬಂದು ಬಿಡುತ್ತಿದೆ.

**ರಾಮ:**—ಛೀ; ಹಾಗೆಂದೂ ಭಾವಿಸಬೇಡ. ನಿನ್ನಲ್ಲಿಯೂ ಕೋಪಿಸಿಕೊಂಡರೆ, ಅದು ನನ್ನಲ್ಲಿಯೆ ಕೋಪಿಸಿಕೊಂಡಂತೆ.

**ನಾಗ:**—"ಅಷ್ಟಾದರೂ ನಿಮಗೆ ವಿಶ್ವಾಸವಿದೆಯಷ್ಟೆ. "ಮೆಯ್ಯೆರಡು ಜೀವವೊಂದು" ಎಂಬಂತೆ ನಿಮ್ಮಲ್ಲಿ ನಡಕೊಂಡಿದ್ದೇನೆ. ಅದು ನಿಮ್ಮ ಮನಸ್ಸಿಗೂ ಬಂದಿದೆಯೆಂದಾದರೆ ನಾನು ಪುಣ್ಯಶಾಲಿ" ಎನ್ನುವಾಗ ಕಣ್ಣೀರೂ ಸುರಿಯಿತು.

**ರಾಮ:**—ನೀನು ಅಷ್ಟೆಲ್ಲ ಹೇಳಬೇಕೆ? ನಿನಗೆ ನನ್ನಲ್ಲಿದ್ದ ಪ್ರೇಮವನ್ನರಿತುಕೊಳ್ಳದಿರಬೇಕಾದರೆ ಎದೆಗುರುಡನಾಗಬೇಕು. ಅದಿರಲಿ; ಮುಂದೇನು ಮಾಡುವುದು?

**ನಾಗ:**—ಏನು ಹೇಳುವುದು ಸ್ವಾಮಿ? ನಿಮ್ಮ ಕಿಟ್ಟನಿಗೆ ವಿದ್ಯಾಭ್ಯಾಸವೆಂದು ಸುರುಮಾಡಿದಿರಲ್ಲ; ಆಗಲೇ, ನಿಮ್ಮ ಮನೆಗೆ ಕುಟ್ಟೆ ಹುಳು

ಹಿಡಿಯಲಿಕ್ಕೆ ಪ್ರಾರಂಭವಾಗಿದೆ. ಆ ವಿದ್ಯಾಭ್ಯಾಸದ ಹನುಮಂತನ ಬಾಲವೇ ಇಡೀ ಲಂಕಾಪಟ್ಟಣವನ್ನು ಸುತ್ತಿದುದೀಗ.

**ರಾಮು:**—ಹೌದು. ಹಾಕಿದ ಅಂಗಿ ಹಾರಿದರೆ ಹೋಗುವುದೆ?

**ನಾಗ:**—ಅದೇನೋ ಹೌದು. ಇವರ ಗಾಳಿ ಬೀಸಿ ನಮ್ಮ ಸಾಣನೂ ದಾರಿ ಬಿಡುವ ಚಿಹ್ನೆ ತೋರುತ್ತಿದೆ. ಮಕ್ಕಳ ಹೇಸಿಕೆಗಾಗಿ ತೊಡೆಯನ್ನೇ ಕಡಿದು ಬಿಡುವುದೆ? ಅಲ್ಲ; ಸ್ವಲ್ಪ ಹೆಚ್ಚು ಎಚ್ಚರದಿಂದಿರಬೇಕು.

**ರಾಮು:**—ಆ ಎಚ್ಚರವೆಂದರೇನು?

**ನಾಗ:**—ನೋಡಿರಿ; ಆ ಭೀಮಯ್ಯನಿರುವ ವರೆಗೆ, ಒಂದಲ್ಲವಾದರೆ ಇನ್ನೊಂದು ರೂಪದ ಕಿರಿಕಿರಿ ತಪ್ಪಿದೆಯೆ?

**ರಾಮು:**—ಇಲ್ಲ.

**ನಾಗ:**—ಇವನು ಭೀಮಯ್ಯನ ಮಗನೆಂದು ನೀವೂ ಒಪ್ಪುತ್ತೀರಿ. ಅದರೊಡನೆ 'ತಂದೆಯಂತೆ ಮಗ' ಎಂಬ ಗಾದೆಯನ್ನೂ ಒಪ್ಪಲೇಬೇಕು.

**ರಾಮು:**—ಆಗಲಿ; ಮಾಡುವುದೇನು?

**ನಾಗ:**—ಸ್ವಾಮಿ, ಕೈ ಕಟ್ಟಿ ಹೋದೊಡನೆ "ಏನುಮಾಡುವುದು?" ಎನ್ನುತ್ತೀರಿ. ಒಂದಿಷ್ಟು ಸಡಿಲಿದ ಕೂಡಲೆ ಶಿವರಾಯನಿಗೆ ನೀವೇ ಕೈ ಗೊಡುತ್ತೀರಿ. ಗುಟ್ಟನ್ನೆಲ್ಲ ಬಿಚ್ಚಿ ಬಿಡುತ್ತೀರಿ. ಆ ಹೊತ್ತು, ದೋಪಿಯ ಗುಟ್ಟನ್ನು ನಾಗಪ್ಪಯ್ಯನು ಹೇಳಿದುದೆಂದು, ಶಿವರಾಯನಲ್ಲಿ ಹೇಳಿದಿರಿ. ಆ ಮೇಲೆ ನೀವೇನೋ ತಪ್ಪಿಸಿಕೊಂಡರೂ ಪರಿಣಾಮವೇನಾಯಿತು ನೋಡಿರಿ. ಲಕ್ಷ್ಮಮ್ಮನಿಗೆ ನಿಮ್ಮಲ್ಲಿ ಇದ್ದ ನಂಬುಗೆಯೂ ಮಾಯ ವಾಯಿತು. ಮರುಗುತ್ತಕ್ಕೆ ಮದ್ದೇ ಇಲ್ಲವೆನ್ನುವುದು ಸುಳ್ಳಲ್ಲ.

**ರಾಮು:**—ಇಲ್ಲ. ಇನ್ನು ಮುಂದೆ ಏನೆಂದರೂ ಹೇಳುವುದಿಲ್ಲ.

**ನಾಗ:**—"ಹಾಗಾದರೆ ಹೇಳುತ್ತೇನೆ, ಕೇಳಿರಿ. ಈ ಗಂಗಾಧರ ನೆಂದರೆ ನಿನ್ನೆ ಬಂದ ಮಳೆಗೆ ಈ ಹೊತ್ತು ಮೊಳೆತ ಚಗಟೆ. ಅದನ್ನು ಕಿತ್ತು ಬಿಡುವುದು ದೊಡ್ಡ ಕೆಲಸವೆ?" ಎಂದು ಬಾಗಿಲುದೆರೆದು ಒಳಗಿ ನಿಂದಲೇ ನಿಲುಕಿ ದೀಪ ಹಿಡಿದು ಅಂಗಳವನ್ನು ನೋಡಿದನು.

**ರಾಮು:**—ಏನು ನೋಡುತ್ತೀಯೊ? ಈ ನಡುವಿರುಳಲ್ಲಿ ಅಲ್ಲಿ ಯಾರಿದ್ದಾರೆ? ಭೂತವೋ ಪಿಶಾಚಿಯೋ?

**ನಾಗ**:—"ಏನು ಹೇಳುತ್ತೀರಿ ಸ್ವಾಮಿ? ಈ ಸಮಯದಲ್ಲಿ ಕಂಬಕ್ಕೂ ಕಿವಿ ಇದೆ. ಎಲ್ಲಿಯಾದರೂ ಗುಟ್ಟು ರಟ್ಟಾಗಿ ಹೋದರೆ, ಪ್ರಯೋಗಿಸಿದ ಅಸ್ತ್ರವೇ ಮರಳಿ ಮೆಟ್ಟಲೂ ಬಹುದು." ಎಂದು ಹೇಳಿ ರಾಮಯ್ಯನ ಕಿವಿಯಲ್ಲಿ ಏನನ್ನೋ ಮಂತರಿಸಿದನು. ಮೆಲ್ಲನೆ ಪಿಶಾಚಿಯ ಆವೇಶವಾದಂತೆ ತೋರಿತು ರಾಮಯ್ಯನ ಮೋರೆ. ಮರುಳುನಗೆಯೊಂದು ತಲೆದೋರಿ "ಅಷ್ಟಾದರೆ ನಮ್ಮೆಣಿಕೆಗೆ ಕಿರೀಟವಿಟ್ಟಂತಲ್ಲವೆ?" ಎಂದು ಕೇಳಿದನು. "ಸಂದೇಹವೇಕೆ? ನಿಮ್ಮ ಎದೆಯೊಂದು ಗಟ್ಟಿಯಾಗಿರಲಿ; ಮತ್ತಿನದೆಲ್ಲ ತಾನಾಗಿ ಸಾಗುತ್ತಿದೆ." ಎಂದು ಉತ್ತರ ಸಿಕ್ಕಿತು.

ರಾಮಯ್ಯನು ಸುಮ್ಮನಾದನು. "ರಾತ್ರಿ ಬಹಳವಾಯಿತು. ಹೋಗಿ ಮಲಗಿರಿ." ಎಂದನು ನಾಗಪ್ಪಯ್ಯ. ಎದ್ದು ಹೋದನು ರಾಮಯ್ಯ. ಆ ಹೊತ್ತು ಶಿವರಾಯನು ಹೇಳಿದ ಬುದ್ಧಿವಾದವೆಂದರೆ ಬಾರಿಸಿದ ವೀಣೆ; ಕೇಳಿದ ರಾಮಯ್ಯನ ಕಿವಿಯೆಂದರೆ ಕೋಣನ ಕಿವಿ.

---

೭.

ಒಂದೆರಡು ತಿಂಗಳು ಕಳೆಯಿತು. ಹೊತ್ತೂ, ಜಾವದ ಮೇಲೆ ಒಂದೆರಡು ಗಳಿಗೆಯಾಗಿರಬಹುದು. "ಬೆಳ್ಳಾರೆ"ಯೆಂಬ ಕಳಂಜಿಮಲೆಯ ಬಡಗಣ ತಪ್ಪಲನ್ನೇರಿತ್ತು ಜೌವನಿಗರ ತಂಡವೊಂದು. ತಂಡದವರ ಉಡಿಗೆತೊಡಿಗೆಸಲಕರಣೆಗಳನ್ನು ನೋಡಿದರೆ ಸಾಕು; ಬೇಟೆಗೆ ಹೊರಟುದೆಂದು ಹೇಳಬೇಕಾಗಿರಲಿಲ್ಲ. ಮುಂಗಡೆಯಲ್ಲಿದ್ದ ವ್ಯಕ್ತಿಯೊಂದರ ಭವ್ಯಾಕಾರವೇಷಭೂಷಗಳಿಂದಲೆ ಅದು ನಾಯಕನೆಂದು ಗೊತ್ತಾಗುತಿತ್ತು. ಬೇಟೆಗಾರರ ಸಂದಣಿ ತಪ್ಪಲನ್ನೇರಿ ಶಿಖರಕ್ಕೆ ಬಂತು; ದಾರಿಯನ್ನು ಬಿಟ್ಟು ಪಡುಗಡೆಯ ಕಾಡನ್ನು ಪ್ರವೇಶಿಸಿತು. ಇಂಗಿತವನ್ನರಿತ ಸೇವಕನೊಬ್ಬನು ಹೆಗಲಿನ ಎಲವಸ್ತ್ರವನ್ನು ಹಾಸಿದನು; ಯುವಕನೊಬ್ಬನೊಡನೆ ನಾಯಕನು ಹಾಸುಗೆಯಲ್ಲಿ ಕುಳಿತನು. ಬಾಯನ್ನು ಮುಚ್ಚಿದಕಯ್ಯ ಕಿಂಕರರೊಳಗೆ ಕೆಲವರು ಹತ್ತಿರದಲ್ಲಿ, ಕೆಲವರು ದೂರದಲ್ಲಿ ಕುಳಿತುಕೊಂಡರು. ತಂಡ ಸೀಯಾಳಗಳನ್ನು ಕೆತ್ತಿ ಕೊಡುವಾಗ:—"ಏನೋ ಮಂಜು, ಕಣ್ಣು ಕಾಣುವುದಿಲ್ಲವೆ? ಈ ನಾಣಪ್ಪಯ್ಯನವರಿಗೆ ಮೊದಲು ಕೊಡು" ಎಂದನು ಮುಂದಾಳು.

**ನಾಣ**:—ಅದೇನು ಹಾಗೆನ್ನುತ್ತೀರಿ ಕೊಂಡೆಯವರೆ?

**ಕೊಂಡೆ**:—ಹೌದು. "ನೂಲು ಬಾಳು" ಎನ್ನುವುದು ಸಾಯುವಾಗಲೂ ರಾಮಜಪವಾಗಿತ್ತು ಮಾವಯ್ಯನವರಿಗೆ. ಅದನ್ನೆಂದಿಗೂ ಮರೆಯಲಾರೆನು.

**ನಾಣ**:—ಹಾಗೆಂದರೇನು?

**ಕೊಂಡೆ**:—ಓಹೋ! ಬ್ರಾಹ್ಮಣರಾಗಿದ್ದೂ ಅದರ ಅರ್ಥವನ್ನು ನನ್ನಲ್ಲಿ ಕೇಳುತ್ತೀರೇನು? ಹುಂ, ಇರಲಿ. ನೂಲ(ಜನಿವಾರ)ನ್ನು ಧರಿಸಿದ ಬ್ರಾಹ್ಮಣ್ಯಕ್ಕೆ ಮೊದಲು, ಬಾಳ(ಖಡ್ಗ)ನ್ನು ಹಿಡಿದ ಕ್ಷತ್ರಿಯರೆ ವೊದಲಾದವರಿಗೆ ಆಮೇಲೆ, ಮಾನಮರ್ಯಾದೆ ಸಲ್ಲತಕ್ಕುದೆಂದು ಅದರ ತಾತ್ಪರ್ಯವಂತೆ.

**ನಾಣಿ**— ಹಾಗಾದರೆ, ನಿಮ್ಮೊಟ್ಟಿಗೆ ಬೇಟೆಯಾಡುತ್ತಿದ್ದ ಕ್ರಿಯಾ ಶೂದ್ರನಾಗಿರುತ್ತಾನಲ್ಲವೆ ಈ ನಾಣಪ್ಪನು? ಇಂಥವನಿಗೂ ಆ ಬ್ರಾಹ್ಮಣ ಮರ್ಯಾದೆಯೆ?

**ಕೊಂಡೆ**:—ಆದರೇನು? ಶೂದ್ರರಾದ ನಮಗೆ ನೀವು ಪೂಜ್ಯರೆ ಸರಿ.

**ನಾಣಿ**:—ಅಲ್ಲ. ಬ್ರಾಹ್ಮಣನಾಗಿ ಹುಟ್ಟಿ ಕೀಳ್ಗೆಲಸವನ್ನೆಸಗುವವನು ಹುಟ್ಟು ಶೂದ್ರನಿಗಿಂತಲೂ ಅತ್ತತ್ತ. ಈಗ ನಮ್ಮೂರಲ್ಲಿ ನಿಜವಾದ ಬ್ರಾಹ್ಮಣರೆಂದರೆ ಒಬ್ಬರೆ ಇರುವುದು.

**ಕೊಂಡೆ**:—ಯಾರದು?

**ನಾಣಿ**:—ಕಾಡೂರ ಭೀಮಯ್ಯನವರ ಮಗ ಗಂಗಾಧರರಾಯರು.

**ಕೊಂಡೆ**:—ಅಷ್ಟು ಬುದ್ಧಿವಂತರೇನು?

**ನಾಣಿ**:—ಬುದ್ಧಿವಂತರೆಷ್ಟೋ ಮಂದಿ ಇರಬಹುದು ಆಡಿನ ಕೊರಳಿನಲ್ಲಿ ಆಡುತ್ತಿರುವ ಮೊಲೆಗಳಂತೆ. ವಿದ್ಯಾಬುದ್ಧಿ ವಿಚಾರಗಳನ್ನು ನಡತೆಯಲ್ಲಿ ಕರೆವವರಲ್ಲವೆ ನಿಜವಾದ ಬುದ್ಧಿವಂತರು?

**ಕೊಂಡೆ**:—ಅಂಥ ಯೋಗ್ಯತೆಯುಳ್ಳವರೋ ಗಂಗಾಧರರಾಯರು?

**ನಾಣಿ**:—ಸಂದೇಹವೇನು? ಅವರ ಒಡನಾಡಲಿಕ್ಕೂ ಪೂರ್ವ ಪುಣ್ಯವಿರಬೇಕು.

**ಕೊಂಡೆ**:—ಏನು ನಾಣಪ್ಪಯ್ಯನವರೆ, ನೀವು "ಮೂಡು" ಎಂದುದನ್ನೆ ನಿಮ್ಮ ತಂದೆಯವರು "ಪಡು" ಎನ್ನುತ್ತಾರಲ್ಲ?

**ನಾಣಿ**:—ಹೇಳುವುದು ಮಾತ್ರವಲ್ಲ; ಹಾಗೆಯೇ ಮಾಡುತ್ತಾರೆ. ನಾನೇನು ಮಾಡಲಿ?

**ಕೊಂಡೆ**:—ಅವರ ಮಾತನ್ನು ನಾನೂ ನಂಬಿದ್ದೆನಲ್ಲ!

**ನಾಣಿ**:—ಚೆನ್ನಾಗಿ ವಿಚಾರಿಸಿಕೊಳ್ಳದೆ ನಂಬಿದುದು ತಪ್ಪೆನ್ನದೆ ನಿವೃತ್ತಿ ಇಲ್ಲ.

**ಕೊಂಡೆ**:—ಅವರ ಮಾತನ್ನು ಕೇಳುವಾಗ ಅದೆ ಸತ್ಯವೆಂದು ತೋರಿತು. ಅದರಿಂದಲೇ " ಆ ಜನರ ಒಡನಾಟ ಬೇಡ"ವೆಂದು ನಿಮ್ಮನ್ನೂ ಒತ್ತಾಯಿಸಿದುದು.

**ನಾಣಿ:**—ನನಗೆಲ್ಲವೂ ಗೊತ್ತಿದೆ.

**ಕೊಂಡೆ:**—ಹಾಗೆ ಹೇಳಿದುದಕ್ಕೆ ನನ್ನ ಭ್ರಮೆಯೆ ಕಾರಣವೆಂದು ಗೊತ್ತಿದ್ದರೂ ಅದನ್ನು ನನ್ನಲ್ಲೇಕೆ ಹೇಳಲಿಲ್ಲ ನೀವು?

**ನಾಣಿ:**—ನಿಮ್ಮ ಚಿತ್ತವೃತ್ತಿ ನನಗೆ ಗೊತ್ತಿದೆ. ನಿಮ್ಮ ಮನಸ್ಸಿನಲ್ಲಿ ಬೇರೂರಿದ ಸಿದ್ಧಾಂತವನ್ನು ತತ್ಕಾಲದಲ್ಲೆ ಕಿತ್ತು ಬಿಡಲಿಕ್ಕೆ ಅಸಾಧ್ಯ; ಅದ ಕ್ಕೊಂದು ಸಮಯ ಬಂದೀತು ಎಂದೆಣಿಸಿ ಆಗ ಹೇಳಲಿಲ್ಲ.

**ಕೊಂಡೆ:**—(ನಗುತ್ತಾ) ಹೌದು; ಗೆದ್ದಲೆಯಂತೆ ನನ್ನನ್ನು ಹಿಡಿದ ದುರ್ಗುಣವದು. ಆದರೆ ಗಂಗಾಧರರಾಯರಲ್ಲಿ ಹೋಗಿ ಬರುವುದನ್ನೂ ನೀವೇಕೆ ಬಿಟ್ಟುದು?

**ನಾಣಿ:**—ಇಲ್ಲ; ಪೂರ್ಣವಾಗಿ ಬಿಡಲಿಲ್ಲ; ಒಮ್ಮೊಮ್ಮೆ ಈಗಲೂ ಹೋಗುತ್ತಿದ್ದೇನೆ. ತಂದೆಯವರು ನಿಮ್ಮ ಮೂಲಕವಾಗಿ ನನ್ನನ್ನು ತಡೆ ಯುತ್ತಾರೆಂಬುದನ್ನೂ ಅವರಲ್ಲಿ ಹೇಳಿದ್ದೆನು.

**ಕೊಂಡೆ:**—ಏನೆಂದರು?

**ನಾಣಿ:**—ಏನೂ ಹೇಳಲಿಲ್ಲ. ಹಾಗೆಲ್ಲ ಹೇಳುವುದು ಅವರ ಸ್ವಭಾವವೇ ಅಲ್ಲ. ಸುಮ್ಮನೆ ನಕ್ಕುಬಿಟ್ಟರು.

**ಕೊಂಡೆ:**—ಅಯ್ಯೋ! ಹಾಗಾದರೆ ಅಂಥ ಸಜ್ಜನರಲ್ಲಿ ದ್ರೋಹ ವನ್ನೆಣಿಸಿ ನರಕಕ್ಕೊಂದು ತಂಗುಳಿನ ಬುತ್ತಿಯನ್ನು ಕಟ್ಟಿಕೊಂಡೆನಲ್ಲ!! ಹೋಗಲಿ; ಅದು ತಪ್ಪೆಂದು ಗೊತ್ತಿದ್ದುದರಿಂದ ನೀವಾದರೂ ನನ್ನ ಮಾತಿಗೆ ಬೆಲೆಗೊಡಬಾರದಾಗಿತ್ತು. ಹಾಗಾದರೆ, ನನ್ನ ಮನಸ್ಸು ಮಾತು ಗಳಲ್ಲಿ ಕಿಲುಬು ಹಿಡಿದಿದ್ದರೂ, ಕೆಲಸವು ಪರಿಶುದ್ಧವಾಗಿಯೆ ಇರು ತ್ತಿತ್ತು.

**ನಾಣಿ:**—ಹಾಗಾದರೆ ಕೇಳಿರಿ. ನಿಮ್ಮಿಂದಾಗಿ ಅವರನ್ನು ದೂರ ಮಾಡಿದುದಲ್ಲ ನಾನು. ನನಗೇ ಒಂದು ವೈರಾಗ್ಯವು ತಲೆದೋರಿತು. ತಂದೆಯವರಿಂದಾಗಿ ತಲೆದೋರಿದುದು ಈ ವೈ; ಇದನ್ನು ಅವರಿಗೇ

ವಿರೋಧವಾಗಿ ಒಡ್ಡುವುದು ತಪ್ಪು; ಆದರೆ, ಅವರೆಂದಂತೆ ಕಂಡಾಬಟ್ಟೆಯಲ್ಲಿ ನಡೆಯಲಿಕ್ಕೆ ಮನಸ್ಸೊಪ್ಪುವುದಿಲ್ಲ. ಅದೇ ಆ ವೈರಾಗ್ಯದ ಫಲ.

ಅದನ್ನು ಕೇಳಿದ ನಾಣ್ಣಪ್ಪಕೊಂಡೆಯ ಮನಸ್ಸು ಮೆದುವಾಯಿತು; ಕೋವೆಯಲ್ಲಿಟ್ಟ ಬಂಗಾರದಂತೆ ಕರಗಿತು. ಕಣ್ಣುಗಳಲ್ಲೊಸರಿ ತುಳುಕುವ ಹನಿ ಎವೆಯಲ್ಲಿ ಜಾರಿ ಕದಪಿಗಿಳಿಯಿತು. ಎಳನೀರನ್ನು ಕೆತ್ತಿ ಕಯ್ಯಲ್ಲಿ ಹಿಡಿದುಕೊಂಡ ಮಂಜು "ಅಣ್ಣ, ಕುತ್ತಬೇಕೊ?" ಎಂದನು. ಫಕ್ಕನೆ ಸಿಟ್ಟೇರಿತು ನಾಣ್ಣಪ್ಪ ಕೊಂಡೆಗೆ.

**ಕೊಂಡೆ:**—ಯಾವುದನ್ನು?

**ಮಂಜು:**—(ಎಳನೀರನ್ನೆತ್ತಿಕೊಂಡು ಮೆಲ್ಲನೆ) ಕಣ್ಣನ್ನು.

**ಕೊಂಡೆ:**—ನಿನಗೆ ಕಿವಿ ಕೇಳುವುದಿಲ್ಲವೆ? ಬೆಪ್ಪಾ, ಕಣ್ಣನ್ನು ಕುತ್ತುವವನೇ ನೀನು.

**ಮಂಜು:**—(ಮಾತಿಲ್ಲ)

**ಕೊಂಡೆ:**—ಮೊದಲು ನಾಣಪ್ಪನವರಿಗೆ ಕೊಡೆಂದು ಹೇಳಿದುದು ಕೇಳಲಿಲ್ಲವೆ?

**ನಾಣ:**—ನನಗೆ ಬಾಯಾರಿಕೆ ಏನೂ ಇಲ್ಲ. ಎದ್ದುದೂ ಇಳಿದು ಹೋಯಿತು. ನೀವೆ ಕುಡಿಯಿರಿ.

**ಕೊಂಡೆ:**—ಹಾಗಾದರೆ ನನಗೂ ಬೇಡ.

"ಬೇಸರಗೊಳ್ಳಬೇಡಿರಿ. ಮೊದಲು ನಾನೇ ಕುಡಿಯಬೇಕಾದರೆ...." ಎಂದು ಸಮಾಧಾನಪಡಿಸಲಿಕ್ಕೆ ಸುರುಮಾಡಿದ್ದನು ನಾಣಪ್ಪಯ್ಯ. ಆದರೆ ಕೊಂಡೆಯ ಕಿವಿ, ಕೆನ್ನೆಗೊಲೆದ ಕಣ್ಣಿನೊಡನೆ ಹಿಂದಕ್ಕೆ ತಿರುಗಿತು. ನಾಣಪ್ಪನು ಮಾತನ್ನು ನಿಲ್ಲಿಸಿದನು.

**ಕೊಂಡೆ:**—ಅದೇನೋ ಕೇಳಿದಂತಾಗುತ್ತದೆ. ನರಳುತ್ತಿರುವ ಸದ್ದಲ್ಲವೆ?

**ಮಂಜು:**—(ಕಿವಿಗೊಟ್ಟು) ಅಣ್ಣ, ಅಲ್ಲ. ಗೂಬೆ ಗುಮ್ಮಳಿಸುವು ದಾಗಿರಬೇಕು.

**ಕೊಂಡೆ:**—ಗೂಬೆಗೆ ಮನುಷ್ಯಸ್ವರವೆಲ್ಲಿಂದ?

**ಮಂಜು:**—ಕೆಲಸಾರಿ, ಗೂಬೆಯ ಕೂಗೂ ಹಾಗೆ ಕೇಳುತ್ತಿದೆ.

**ಕೊಂಡೆ:**—ಗೂಬೆಯಾದರೆ ಮರದಲ್ಲಿದ್ದು ಕೂಗುವುದು. ಕೇಳಿರಿ. ಈ ಸದ್ದು ಎತ್ತರದಿಂದ ಹರಿದುಬರುವಂತೆ ಕೇಳುತ್ತಿದೆಯೆ?

**ಮಂಜು:**—(ಮತ್ತೂ ಕಿವಿಗೊಟ್ಟು) ಆ ಕೂಗು ಬೆಟ್ಟದ ಮೂಲೆಯಲ್ಲಿ ತಾಗಿ ಅಲ್ಲಿಂದ ಬರುವ ಮರುದನಿಯೆ ಕೇಳುತ್ತಿರುವುದು.

**ಕೊಂಡೆ:**—ನೀನು ಶುದ್ಧ ಮಂಕು. ಏನೋ ಗೊಣಗುತ್ತಿರು ವಂತೆಯೂ ತೋರುತ್ತಿದೆ. ಮಾತ್ರವಲ್ಲ; ಆ ಸದ್ದು ಹತ್ತಿರದಲ್ಲಿದೆ. ನಾಣಪ್ಪಯ್ಯನವರಿಗೆ ಕೇಳುವುದಿಲ್ಲವೆ?

**ನಾಣ:**—ಹೌದು. ಗೊಣಗಾಟದ ಎಡೆಯಲ್ಲಿ ಅಕ್ಷರಗಳೂ ಅಸ್ಪಷ್ಟ ವಾಗಿವೆ?

"ಹೌದು, ತಡಮಾಡಕೂಡದು" ಎಂದು ನಾಣಪ್ಪನೊಡನೆ ಕೊಂಡೆ ಎದ್ದನು. ಹಾಸಿದ ಭೈರ್ವಾಸವನ್ನೆತ್ತಿ ಕಂಕುಳಲ್ಲಿರುಕಿಕೊಂಡ ಮಂಜು, ಮೆಲ್ಲನೆ ಅಂಗಯ್ಯಿಂದ ಬಾಯನ್ನು ಮುಚ್ಚಿಕೊಂಡು "ಹಾಗಾದರೆ ಇವರ ನ್ನೆಲ್ಲ ಹೋಗಲಿಕ್ಕೆ ಹೇಳಬಹುದಲ್ಲ?" ಎಂದು ಕೇಳಿದನು. "ಯಾಕೆ?" ಎಂದನು ಕೊಂಡೆ.

**ಮಂಜು:**—ಈಗಲೆ ಸಮಯವಾಯಿತು. ಅಲೆದಾಡಿ ಬರುವಾಗ ರಾಹುವಿನ ಕಾಲವೂ ಬರಬಹುದು. ಆಳುಗಳು ತಂತಮ್ಮ ಕೆಲಸ ಕ್ಕಾದರೂ ಹೋಗಬಹುದಲ್ಲ.

**ಕೊಂಡೆ:**—(ಕೋಪಗೊಂಡು) ಕಾಣದ ರಾಹುವಂತಿರಲಿ; ಕೇಳುವ ರಾಹುವಿನ ಕೂಗನ್ನು ಗಾಳಿಗೆ ಕಟ್ಟುತ್ತೀಯಾ? ಕಿವಿ ಕಿವುಡಾದೀತು; ಕೈ ಕೋರೆಯಾದೀತು. ಎಲ್ಲರೂ ಒಟ್ಟಿಗೇ ಬರಬೇಕು." ಎನ್ನುತ್ತಾ ಸದ್ದನ್ನು ಹಿಂಬಾಲಿಸಿದನು. ಎಲ್ಲರೂ ಅವನೊಡನೆ ಹೋದರು. ಸದ್ದು

ಹತ್ತಿರ ಹತ್ತಿರವಾಯಿತು; ಮಾತ್ರವಲ್ಲ, ಅದು ಹೊಮ್ಮುತ್ತಿರುವುದು ಮೇಲ್ಗಡೆಯಿಂದಲ್ಲ; ಕೆಳಗಿನಿಂದೆಂಬುದೂ ಸ್ಫುಟವಾಗತೊಡಗಿತು. ಸದ್ದನ್ನು ಹಿಡಿದು "ಪಾತಾಳಗುಂಡಿ"ಯ ಹತ್ತಿರಕ್ಕೆ ಹೋದರು.

ಪಾತಾಳಗುಂಡಿಯೆಂದರೆ ಆಳವಾದೊಂದು ಹಾಳು ಬಾವಿ. ಕಲ್ಲನ್ನಿಡುಕಿದರೆ ಅಡಿ ಮುಟ್ಟಿದ ಸದ್ದೂ ಕೇಳದಷ್ಟು ಹೊಂಪವಾಗಿರುವುದರಿಂದಲೇ ಆಗಿರಬಹುದು, ಮೊತ್ತಮೊದಲು ಆ ಹೆಸರುಂಟಾದುದು. ಆದರೆ ಅದರ ಮೇಲೆ ಒಂದು ಪಳಮೆ ನೆಲೆಗೊಂಡು, ಈಗಲೂ ನೆರೆಹೊರೆಯ ಹಳ್ಳಿಯವರ ಮನಸ್ಸಿನಲ್ಲಿ ಬಾಯಲ್ಲಿ ಅದೇ ಪುರಾಣವಾಗಿದೆ. ಗರುಡನಿಗೆ ಹೆದರಿ ನಾಡಿನಲ್ಲಿದ್ದ ಸರ್ಪಗಳೆಲ್ಲ, ಭೂಮಿನ್ನು ಬಗಿದು ಪಾತಾಳಕ್ಕಿಳಿದುವಂತೆ. ಆ ಬಾವಿಯು ಪಕ್ಕದ ಪೊದರುಗಳೆಡೆಯಲ್ಲಿ ಹರಿಯುತ್ತಿರುವ ಹಾವುಗಳನ್ನು ಕಂಡು, ಸಪ್ಪುಸದೆಗಳಿಗಾಗಿ ಹೋದ ಹಳ್ಳಿಗರು ಈಗಲೂ, ಭಯಭಕ್ತಿಯೊಡನೆ ಕೈ ಮುಗಿದು ಪೂಜಿಸಿ ಕೃತಾರ್ಥರಾಗುತ್ತಾರೆ. ತಾವು ಕಂಡ ಪಾತಾಳದ ನಾಗದೇವನ ಮಹಿಮೆಯನ್ನು ಕತೆಗಟ್ಟಿ ಕೇಳಿಸುವುದೂ, ಪದಗಟ್ಟಿ ಹಾಡುವುದೂ ಉಂಟು. ಆ ಪಾತಾಳಗುಂಡಿಯಿಂದಲೆ ಆ ಸದ್ದು ಕೇಳುತ್ತಿದ್ದುದು. ಎಲ್ಲರೂ ಹತ್ತಿರ ಹೋದರು. ಆಗ "ಅದು ನಾಗದೇವನ ನುಡಿಗಟ್ಟೇ ಸರಿ" ಎಂದು ಮಂಜು ಗುಣುಗುಟ್ಟುತ್ತಿದ್ದನು.

**ಕೊಂಡೆ**:—ಆದರೇನು? ಹಾಗಾದರೆ ಆ ನಾಗದೇವನ ಅಪ್ಪಣೆ ಏನೆಂದು ಅರಿತುಕೊಳ್ಳಬೇಡವೆ?

**ಮಂಜು**:—ಪಾತಾಳ ಗುಂಡಿಯನ್ನು ಬಗ್ಗಿ ನೋಡಬಾರದಂತೆ. ವಿಷವಾಯು ಬೀಸಿದರೆ ಕಣ್ಣಿಗೆ ಕಿವಿಗೆ ಕೇಡಂತೆ. ಅದರಲ್ಲೊಂದು ಪಿಶಾಚಿಯೂ ವಾಸವಾಗಿದೆಯಂತೆ.

**ಕೊಂಡೆ**:—ಯಾರು ಹೇಳಿದರು ಈ ಹೊಸ ಸುದ್ದಿಯನ್ನು?

**ಮಂಜು**:—ಕಾಡೂರ ಅಯ್ಯನವರೇ ಹೇಳಿದರು.

**ಕೊಂಡೆ**:—ಯಾರು ನಾಗಪ್ಪಯ್ಯನವರೆ?

**ಮಂಜು**:—ಹೌದು ಬುದ್ಧಿ.

ಈ ಮಾತುಕತೆಗಳೆಲ್ಲ ನಿಂತುಕೊಂಡು ನಡೆದುವುಗಳಲ್ಲ; ನಡೆಯುತ್ತಿರುವಾಗಲೆ ಹೊರಟವುಗಳು. ಕರೆಗೆ ಮುಟ್ಟಿದೊಡನೆ ನಾಣ್ಣಪ್ಪ ಕೊಂಡೆಯೂ ನಾಣಪ್ಪನೂ ಪಾತಾಳ ಗುಂಡಿಗೆ ಬಗ್ಗಿ ನೋಡಿದರು. ಬಗ್ಗಿ ಪೊದರುಗಳು ಹಬ್ಬಿದ್ದುವು. ಮೊದಲಿನಂತೆ ನರಳುವ ದನಿ, ಅವರೆಡೆಯಲ್ಲಿ ನುಸುಳುವ "ರಾಮಾ ರಾಮಾ" ಎಂಬ ಮಂತ್ರಾಕ್ಷರಗಳು, ಸ್ಫುಟವಾಗಿ ಮೇಲೇಳುತ್ತಿದ್ದುವು.

**ನಾಣ**:—(ಬಗ್ಗಿ ಗಟ್ಟಿಯಾಗಿ) ಯಾರದು?

(ಸ್ವಲ್ಪ ತಡೆದು) "ನಾನು, ಒಬ್ಬ ಪಾಪಿ"

**ಕೊಂಡೆ**:—ಭಯಪಡ ಬೇಡಿರಿ. ತಳದಲ್ಲಿದ್ದೀರೊ? ಪಕ್ಕದಲ್ಲಿಯೊ?

"ಪಕ್ಕದ ಪೊದರಿನಲ್ಲಿ. ಒಂದು ಬೇರನ್ನು ಹಿಡಿದುಕೊಂಡಿದ್ದೇನೆ."

**ನಾಣ**:—ಒಂದು ಗಂಟೆಯ ವರೆಗೆ ಹಾಗೇ ಗಟ್ಟಿಯಾಗಿ ಹಿಡಿದುಕೊಳ್ಳಿರಿ.

"ಆಯಿತು."

ನಾಣ್ಣಪ್ಪನ ಸೂಚನೆಯಂತೆ ಬೇಟೆಗಾಗಿ ಬಂದ ಹೊಲೆಯರು ಬಲೆಯ ನೇಣುಗಳಿಂದ ಅಗಲವಾದ ಒಂದು ಸಂಚಿಯನ್ನು ಬಲಿದರು. ಬಲಿದ ಆ ಸಂಚಿ ಒಂದು ಸಿಕ್ಕದಂತಾಯಿತು. ಒಂದು ಬಲವಾದ ಕೊಂಬೆಯನ್ನು ಕಡಿದು, ಆ ಗುಂಡಿಯ ಇಕ್ಕಡೆಗಳಲ್ಲಿದ್ದ ಮರಗಳಿಗೆ ಗಟ್ಟಿಯಾಗಿ ಕಟ್ಟಿದರು ಕೆಲವರು. ಬಲೆಯನ್ನೆ ಹಗ್ಗವನ್ನಾಗಿ ಮಾರ್ಪಡಿಸಿ, ಸಿಕ್ಕವನ್ನದಕ್ಕೆ ಕಟ್ಟಿ ಆ ಅಡ್ಡಗಟ್ಟಿದ ಮರದ ಮೇಲಿನಿಂದ ಕೆಳಗಿಳಿಸಿದರು. ಹಲಬರೊಡನೆ ನಾಣಪ್ಪನೂ ಹಿಡಿದುಕೊಂಡನು ಹಗ್ಗವನ್ನು. ಬಾವಿಗೆ ಬಾಗಿ "ಸಿಕ್ಕ ಕೆಳಗಿಳಿಯುತ್ತಿದೆ" ಎಂದು ಗಟ್ಟಿಯಾಗಿ ಹೇಳಿದನು ಕೊಂಡೆ. "ಹುಂ, ಬಂತು . . . . ಹತ್ತಿಕೊಂಡೆನು. ಎಳೆಯಬಹುದು." ಎಂಬ ಮರು ಮಾತೂ ಕೇಳಿತು. ಸ್ವಲ್ಪ ಸಮಯದೊಳಗೆ ಅದು ಪುನಃ ಮೇಲೇರಿತು. ಏರಿದ ವ್ಯಕ್ತಿಯನ್ನು ಮೆಲ್ಲನೆ ದಡಕ್ಕಿಳಿಸಿ ಹಾಸಿದ ಬಟ್ಟೆಯಲ್ಲಿ ಕುಳಿಸಿದರು. ಪ್ರಬಲವಾದ ಗಾಯಗಳೇನೂ ತೋರಲಿಲ್ಲ. ಒಂದೆರಡು ಕಡೆ ಮಾತ್ರ ಸ್ವಲ್ಪ ನೆತ್ತರು ಸುರಿಯುತ್ತಿತ್ತು.

ಆಪತ್ತಿಗಿಂತಲೂ ಆಯಾಸದ ಲಕ್ಷಣವೆ ತೋರುತ್ತಿದ್ದುದು. "ಬಾಯಾರಿದೆ" ಎಂಬ ಮಾತು ಹೊರಟಿತು ವ್ಯಕ್ತಿಯ ಬಾಯಿಂದ. ಕೂಡಲೆ ಕುಡಿಯದೆ ಮುಡಿಪಾಗಿದ್ದ ಎಳನೀರುಗಳನ್ನು ಕೊಟ್ಟರು. ಎರಡು ಸೀಯಾಳಗಳನ್ನು ಕುಡಿದ ಮೇಲೆ ತೆಪ್ಪತ್ತ ವ್ಯಕ್ತಿ ಮೆಲ್ಲನೆ ಕಂದೆರೆಯಿತು. ಅಷ್ಟರ ವರೆಗೆ ಗಟ್ಟಿ ಮಾಡಿ ಕೊಂಡಿದ್ದ ನಾಣಪ್ಪನ ಎದೆ ಆಗ ಕರಗಿ ಹೋಯಿತು; ಕಣ್ಣೀರು ಸುರಿಯಿತು; ಕೊರಳು ನಡುಗಿತು. "ರಾಯರೆ, ನಿಮಗೂ ಈ ಅವಸ್ಥೆ ಹೇಗಾಯಿತಪ್ಪಾ!" ಎಂದು ಅತ್ತುಬಿಟ್ಟನು.

**ವ್ಯಕ್ತಿ:**—(ಮೆಲ್ಲನೆ ತಿರುಗಿ) "ಯಾರಿದು! ನಾಣಪ್ಪನೆ!! ನೀನೂ ಒದಗಿದೆಯೋ ಈ ಗಜೇಂದ್ರ. . . . ಅಲ್ಲ, ಅಜೇಂದ್ರಮೋಕ್ಷಕ್ಕೆ!!!" ಎಂದನು. ನಾಣಪ್ಪನ ಬಾಯಿಂದ ಮಾತು ಹೊರಡುವಂತಿರಲಿಲ್ಲ. ಎಲ್ಲರೂ ಆಶ್ಚರ್ಯ ಮಗ್ನರಾಗಿದ್ದರು.

**ವ್ಯಕ್ತಿ:**— ಮನುಷ್ಯಾವಸ್ಥೆಗೆ ನಾನಾ ರೂಪವಲ್ಲವೆ? ಅವುಗಳೊಳಗೆ ಇದೊಂದು ರೂಪ. ಹೇಗಾಯಿತೆಂದು ಯಾರಿಗೆ ಗೊತ್ತು?

**ನಾಣ:**—ಕಠಿನವಾದ ಪೆಟ್ಟಾಗಿದೆಯೆ?

**ವ್ಯಕ್ತಿ:**—ಅಂಥದೇನೂ ಇಲ್ಲ.

**ನಾಣ:**—ವೈದ್ಯರನ್ನು ಕರಕೊಂಡು ಬರುತ್ತೇನೆ.

**ವ್ಯಕ್ತಿ:**—ಬೇಡ; ನನಗೆ ಅಂಥ ಅಪಾಯಕರವಾದ ಗಾಯವೇನೂ ಆಗಿಲ್ಲ; ಅಪಾಯ ಸೂಚನೆಯೆ ಪ್ರಬಲವಾಗಿದ್ದುದು. ಅದೂ ಹೋಯಿತೀಗ. ಇನ್ನಿರುವುದೆಂದರೆ ಒಂದೆರಡು ಚಿಕ್ಕ ಗಾಯಗಳು. ಅವುಗಳು ಬೇಗನೆ ವಾಸಿಯಾಗಬಹುದು.

**ನಾಣ:**—ಕೊಂಡೆಯವರೆ, ಇದಾರೆಂದು ಗೊತ್ತಾಯಿತೆ?

**ಕೊಂಡೆ:**— ಹೇಗೆ ಗೊತ್ತಾಗಬೇಕು? ಕಂಡ ಮುಖವಲ್ಲ, ಕೇಳಿದ ಕಂಠವಲ್ಲ.

**ವ್ಯಕ್ತಿ:**—ಓಹೋ! ನಾಣ್ಣಪ್ಪ ಕೊಂಡೆಗಳೆಂದರೆ ತಾವೇನು? ಕಿವಿ ಕೇಳಿತ್ತು; ಕಣ್ಣು ಕಂಡಿಲ್ಲ; ಬಂದು ನೋಡಬೇಕೆಂದಿದ್ದೆ. ಈ ವರೆಗೂ ಆಗಲಿಲ್ಲ. ಅದರಿಂದ, 'ಬಗೆಗಿಲ್ಲದ ಬಳಕೆ ಕನಿಕರದ ಕಯ್ಗಿದೆ' ಎಂಬ ಮಾತಿನ ಸತ್ಯತೆಯನ್ನರಿತಂತಾಯಿತು.

**ಕೊಂಡೆ:**—(ವ್ಯಕ್ತಿಯ ಮುಖವನ್ನೇ ನೋಡುತ್ತಾ ಮೂಕನಾಗಿದ್ದನು)

**ನಾಣ:**—"ಗಂಗಾಧರರಾಯರ ವಿಷಯವನ್ನೆತ್ತಿ ಮಾತಾಡಿದೆ ವಲ್ಲವೆ?" ಎಂದು ಹುಬ್ಬಿನ ಸನ್ನೆಯಿಂದ "ಅವರೇ ಇವರು" ಎಂಬು ದನ್ನು ತಿಳಿಸಿದನು.

ನಾಣ್ಣಪ್ಪ ಕೊಂಡೆಯ ಮನಸ್ಸು ಕಣ್ಣಬ್ಬಪ್ರವಾಹದ ನಡುವಣ ದೋಣಿಯಂತಾಯಿತು. "ನಾಣಪ್ಪನವರ ಮಾತೆಲ್ಲವೂ ಮಾಣಿಕ. ನಾಗ ಪ್ಪಯ್ಯನವರಿಗೆ ಹಿಡಿದುದು ಮುದಿಭ್ರಾಂತಿ. ಈ ಮುಖ, ಈ ಮಾತು, ಈ ರೀತಿ ನೀತಿಗಳಲ್ಲಿಯೂ ದೋಷವನ್ನು ಹುಡುಕುವುದೆ? ಛೀ, ಇದ್ದರೆ ಆ ದೋಷವು ಹುಡುಕುವ ಮನಸ್ಸಿನಲ್ಲಿ ಮಾತ್ರವೇ" ಇತ್ಯಾದಿಭಾವನೆ ಗಳು ಮನಸ್ಸನ್ನೊಂದೆಡೆಯಲ್ಲಿ ಅಲುಗಾಡಿಸಿದುವು. "ಇಂಥ ಮಹ ನೀಯರಿಗೂ ಈ ಅವಸ್ಥೆಯೊದಗುವುದೆಂದಾದರೆ, ಇನ್ನು ಸಾಮಾನ್ಯರು ಬದುಕುವುದು ಹೇಗೆ ನಮ್ಮೂರಲ್ಲಿ? ಈ ತರದ ಪಾಪದ ಕಳೆಯನ್ನು ಕಿತ್ತೊಗೆಯದಿದ್ದರೆ ಗುತ್ತಿನ ಕೊಂಡೆಯಾಗಿ ಫಲವೇನು?" ಎಂಬೆಣಿಕೆಗಳು ಮತ್ತೊಂದೆಡೆಯಲ್ಲಿ ಉರಿಯೇರಿಸುತ್ತಿದ್ದುವು. ಹಲವು ಭಾವನೆಗಳು ಕುದಿ ಗೊಂಡು ಅಡಿ ಮೇಲಾಗಿ ಮಗುಚಿದುವು; ಗಂಗಾಧರನ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದನು.

**ಗಂಗಾ:**—ಕೊಂಡೆಯವರೆ, ಇದೇನು? ಹೋದ ಪ್ರಾಣವನ್ನು ತಡೆ ಗಟ್ಟಿ ನನ್ನ ಜೀವಿತಾವಧಿಯಾದ ಕೃತಜ್ಞತೆಗೆ ಪಾತ್ರರಾದವರು ನೀವೆಲ್ಲರೂ. ಅಂಥವರ ಮೇಲಾಳಾದ ನಿಮ್ಮ ಈ ಕೆಲಸವನ್ನು ನೋಡಿದರೆ ಅರ್ಥವೇ ಆಗುವುದಿಲ್ಲ.

**ಕೊಂಡೆ:**—ಅಯ್ಯ, ಸ್ವಾಭಾವಿಕವಾಗಿ ಒಂದಿಷ್ಟು ಹಿತ್ತಾಳಿ ಗಿವಿಯ ಉಬ್ಬಾಳು ನಾನು. ಅದರಿಂದ ಕೆಲವರ ಮಾತುಗೇಳಿ ತಮ್ಮಲ್ಲಿ ದೋಷಕಲ್ಪನೆಯನ್ನು ಮಾಡಿಕೊಂಡೆನು. ಅದನ್ನು ಕ್ಷಮಿಸಿದರೆ ಏಳುತ್ತೇನೆ.

**ಗಂಗಾ:**—"ಉಬ್ಬಾಳು" ತನವೆಂಬುದು ವೀರತ್ವದ ಗುರುತು. ಆ ಉಬ್ಬು ಕನಿಕರದಲ್ಲಿ ಬೆರೆಯದಿದ್ದರೆ ಮಾತ್ರವೆ ಅದು ದೋಷ; ಬೆರೆದರೆ ಗುಣ. ಗುಣಿಗಳಾಗಿದ್ದೂ ಹೀಗೆ ಭ್ರಮಿಸಬಾರದು. ಏಳಿರಿ.

**ಕೊಂಡೆ**:—(ಎದ್ದು ನಿಂತು) ಆಗಲಿ; ಇನ್ನು ಮಾತಾಡುತ್ತಾ ಕುಳಿತು ಕೊಳ್ಳಲಿಕ್ಕೆ ಇದು ಸಮಯವೂ ಅಲ್ಲ; ಸ್ಥಳವೂ ಅಲ್ಲ. ಮೊದಲು ಆಗ ಬೇಕಾದುದು ಔಷಧವೂ ಆರಯ್ಕೆಯೂ. ನಡೆದುಹೋಗಲಿಕ್ಕೆ ಸಾಧ್ಯವಿಲ್ಲ. ಅದರಿಂದ ಪಾಲಕಿಯನ್ನು ತರಿಸಿಬಿಡುತ್ತೇನೆ.

**ಮಂಜು**:—ಬುದ್ಧಿ, ಹಾಗಾದರೆ ನಾನೆ ಹೋಗಿ ಕಳುಹಿಸುತ್ತೇನೆ.

**ಕೊಂಡೆ**:—(ಅವನ ಮುಖವನ್ನು ನೋಡಿ) ನೀನೇನು ತಿರುಗಿ ಬರುವು ದಿಲ್ಲವೆ?

**ಮಂಜು**:—ಸೋಮಪ್ಪಾಚಾರಿಯಲ್ಲಿಗೆ ಹೋಗಿ, ಮುರಿದು ಹೋದ ಕೊಪ್ಪಿನ ಅಂಡೆಯನ್ನು ಸರಿಗೊಳಿಸಿ ತರಬೇಕೆಂದು ನಿನ್ನೆಯೇ ಅಮ್ಮ ಹೇಳಿದ್ದರು.

**ಕೊಂಡೆ**:—(ದುರದುರನೆ ನೋಡಿ) ಅದು ಈಗಲೆ ನೆನಪಾಗುತ್ತಾ ಬಂತಲ್ಲವೆ?

**ಗಂಗಾ**:—ಔಷಧದ ವಿಷಯವಾಗಿ ನೀವೇನೂ ಎಣಿಸಬೇಕಾಗಿಲ್ಲ. ತಬ್ಬಿ ಹಿಡಿದುಕೊಂಡ ದೈವದ ಅಮೃತ ಹಸ್ತದಂತಿತ್ತು ಬಾವಿಯ ಪಕ್ಕದ ಪೊದರು. "ಅದು ಜಾರಿಹೋಗುತ್ತಿದ್ದರೆ, ವಿಷಜಂತುಗಳ ಬಾಧೆಯುಂಟಾಗು ತ್ತಿದ್ದರೆ, ಕಡೆಗೆ ನೀವೆಲ್ಲ ಬಂದು ಕೈಗೊಡದಿರುತ್ತಿದ್ದರೆ ಮಾತ್ರವೆ ಏನಾಗ ಬೇಕ್ತಿತ್ತೋ!" ಎಂಬೆಣಿಕೆಯೆ ನನ್ನ ಮನಸ್ಸಿನಲ್ಲಿದ್ದ ರೋಗ. ಆದರೆ, ಅಂಥ ಅಪಾಯಗಳು ಈ ಸುಖಸಂಸಾರವೆಂಬುದರಲ್ಲಿಯೂ ಬೇಕಾದಷ್ಟಿವೆ. ಈ ಭಾವನೆಯಿಂದಾಗಿ ಈಗ ನಿರ್ಭಯನಾಗಿದ್ದೇನೆ. ಪಾಲಕಿಗೀಲಕಿ ಒಂದೂ ಬೇಡ. ಇನ್ನು ಸರಿಯಾಗಿ ನಡೆಯಬಲ್ಲೆ.

**ಕೊಂಡೆ**:—ತಮ್ಮಲ್ಲಿ ಕೆಲವು ವಿಷಯುಗಳನ್ನು ಕೇಳಬೇಕೆಂದು ಭಾವಿಸಿದ್ದೇನೆ.

**ಗಂಗಾ**:—ಕೇಳಬಹುದು. (ತಿರುಗಿ) ಒಂದು ಎಳನೀರನ್ನು ಕೊಡು.

ನಾಣಪ್ಪನು ಕೆತ್ತಿಕೊಟ್ಟ ಎಳನೀರನ್ನು ಕುಡಿದು ಗಂಗಾಧರನು ಕೊಂಡೆಯನ್ನೀಕ್ಷಿಸಿ "ಹುಂ ಅದೇನು?" ಎಂದನು.

**ಕೊಂಡೆ:**—ತಮಗೆ ಈ ಅವಸ್ಥೆ ಯಾರಿಂದಾಯಿತು?

**ಗಂಗಾ:**—ದೈವದಿಂದ.

**ಕೊಂಡೆ:**—ಅದಂತಿರಲಿ. ಮರೆಮಾಚದೆ ಹೇಳಬೇಕು. ತಮ್ಮನ್ನು ಹಿಡಿದು ಈ ಬಾವಿಗೆ ತಳ್ಳಿದುದಾರು?

**ಗಂಗಾ:**—ಸರಿಯಾಗಿ ಗೊತ್ತಾಗದುದನ್ನು ಹೇಳುವುದು ಹೇಗೆ?

**ಕೊಂಡೆ:**—ಹಾಗೆಂದರೇನು? ಈ ಬಾವಿ, ದಾರಿಯ ಬಳಿಯಲ್ಲಿರುವುದೂ ಅಲ್ಲ; ತಾವಾಗಿ ದಾರಿಬಿಟ್ಟು ಇಲ್ಲಿಗೆ ಬರುವ ಸಂದರ್ಭವೂ ತೋರುವುದಿಲ್ಲ. ಯಾರೋ ನೀಚರು ತಮ್ಮನ್ನು ಬಲಾತ್ಕರಿಸಿರಬೇಕು.

**ಗಂಗಾ:**—ಹಾಗಾದರೆ ಗೊತ್ತಾದುದನ್ನು ಹೇಳಿಬಿಡುತ್ತೇನೆ. ತಂದೆಯವರ ವಾರ್ಷಿಕ ಶ್ರಾದ್ಧವು ಹತ್ತಿರವಾಯಿತು. ಸಾಮಾನಿಗಾಗಿ ವಿಟ್ಟಲಕ್ಕೆ ಹೋಗಬೇಕೆಂದು ಬೆಳಗಾತ ಐದುವರೆ ಗಂಟೆಯ ಕೋಳಿ ಕೂಗಿದೊಡನೆ ಎದ್ದು ಮೋರೆದೊಳೆದು ಹೊರಟೆನು. ನೆಲಗಾಣದ ನಸುಕಿನ ಮುಂಜಾನೆ. ಅದರಿಂದ ರಾಜಬೀದಿವಿಡಿದೇ ಹೋಗಬೇಕಿತ್ತು. ಒಳದಾರಿ; ಹುಟ್ಟಿ ಬಳೆದ ಆ ಕಾಡೂರಿನ ನೋಟ; ಇವುಗಳಲ್ಲಿ ಆಸೆಗೊಂಡು ಗುಡ್ಡವನ್ನೇರಿದೆನು. ಬಾವಿಯ ಪಕ್ಕದಲ್ಲಿ ಹಬ್ಬಿದ ಹಸುರೆಲೆಗೆ ಹಾತೊರೆದು ನಿಲುಕುವ ಹಸುಗಳನ್ನೇಕೆ ಹಳಿವುದು? ಅದೇ (ಕೈದೋರಿಸಿ) ದಾರಿಯಲ್ಲಿ ಗುಡ್ಡದ ನೆತ್ತಿಗೆ ಬಂದೆನು. ಯಾರೋ ಕೆಲವರು ಹಿಂಬಾಲಿಸುವ ಸದ್ದು ಕೇಳಿತು. ತಿರುಗಿದೆನು. ಆಗ ಮುಂದಿನಿಂದ ಇಬ್ಬರು ಬಂದು ಹಿಡಿದುಕೊಂಡರು. ಭಯದಿಂದ ಚೀರಾಡಿದೆನು. ಹಿಂದಿನವರೂ ಓಡಿಬಂದರು. ಅವರ ಮಾತು ರೀತಿಗಳಿಂದ ರಕ್ಷಣೆಗಾಗಿ ಬರುವವರೆಂದು ತೋರುತ್ತಿತ್ತು. ಅವರೊಳಗಾದ ಹೋರಾಟವೆಂದರೆ ಬಾಯಿಯದು ಮಾತ್ರ. ನನ್ನ ಬಾಯಿಗೆ ಬಟ್ಟೆಯನ್ನು ತುರುಕಿ ಕೈಕಾಲುಗಳನ್ನು ಹಿಡಿದು ಎತ್ತಿಕೊಂಡು ಬಂದರು. ಈ ಬಾವಿಯೊಳಗೆ ನೂಕಿದರು. ಪುಣ್ಯಕ್ಕೆ, ನಡುವಿಗೆ ತಳ್ಳಲಿಲ್ಲ; ಕರೆಬರಿಯ ಬಳ್ಳಿಪೊದರುಗಳನ್ನು ಹಿಡಿದುಕೊಂಡೆನು. ಒಂದಿಷ್ಟು ಕೆಳಗೆ ಜಾರಿದಾಗ ಬಲವಾದ ಪೊದರೊಂದು ಹಾಸುಗೆಯಂತೆ ದೊರೆಯಿತು. ಹೆಚ್ಚೇನು? ಹಣೆಯಲ್ಲಿ ಬರೆದ ಬರಹವಿನ್ನೂ ಇದೆ; ಅದರಿಂದ ಈ ಹೊಸಪಾತ

ವನ್ನೋದಿದೆನು. ಮನುಷ್ಯರೊಳಗೆ ಹುಲಿಗಳೂ ಇರುತ್ತವೆ; ದೇವತೆಗಳೂ ಇರುತ್ತಾರೆ; ಎಂಬ ಜ್ಞಾನಾನುಭವ ಲಾಭವು, ಆ ರಾಜರಸ್ತೆಯಲ್ಲೆ ಹೋದರೆ ಆಗುತ್ತಿದ್ದಿಲ್ಲ. ಇರಲಿ; ನನಗೆ ಗೊತ್ತಿರುವುದು ಇಷ್ಟೆ.

**ಕೊಂಡೆ:**—ಅವರಾರೆಂದು ಗುರುತಿಸಬಹುದೆ?

**ಗಂಗಾ:**—ಈ ಗುಡ್ಡದ ಮೇಲೇರುವಾಗ ಸ್ವಲ್ಪ ಮಟ್ಟಿಗೆ ಬೆಳ ಕಾಗಿದ್ದರೂ ಗುರುತಿಸಲಿಕ್ಕೆ ಸಾಧ್ಯವಾಗುವಷ್ಟಿರಲಿಲ್ಲ. ಅಷ್ಟೆ ಅಲ್ಲ; ಈ ಊರವರ ಪರಿಚಯವೆ ಕಡಿಮೆ ನನಗೆ.

**ಕೊಂಡೆ:**—ಈ ಕೆಲಸವನ್ನಾರು ಮಾಡಿರಬಹುದೆಂಬ ಊಹೆ ಯಾದರೂ ಇದೆಯೊ?

**ಗಂಗಾ:**—(ನಕ್ಕು) ಇದೆ.

**ಕೊಂಡೆ:**—ಅದು ಯಾರು? ಬೇಕಾದರೆ ಗುಟ್ಟಾಗಿ ಹೇಳಬಹುದು.

**ಗಂಗಾ:**—ಅಂಥ ಗುಟ್ಟೆಂಬುದು ನನ್ನಲ್ಲಿಲ್ಲವೆ ಇಲ್ಲ.

**ಕೊಂಡೆ:**—ಹಾಗಾದರೆ ಹೇಳಿರಿ.

**ಗಂಗಾ:**—ಕೊಂದುಬಿಡಬೇಕಾದ ವಿರೋಧಿ ನಾನೆಂದು ಭಾವಿಸಿ ದವರ ಮನಸ್ಸಿನ ಭ್ರಮೆ; ಅಲ್ಲವೆ, ಅಂಥ ವಿರೋಧಿಯೊಬ್ಬನನ್ನು ಕೊಲ್ಲ ಲಿಕ್ಕೆ ನಿಯೋಜಿಸಿದ ಕಟುಕರ ಭ್ರಮೆ. ಅಂತೂ ಎರಡರೊಳಗೊಂದು.

**ಕೊಂಡೆ:**—ಹಾಗೆ ಹೇಳಿ ಬಿಟ್ಟರಾದೀತೆ? ಇಂಥ ನೀಚರಿಗೆ ಬುದ್ಧಿ ಗಲಿಸದಿದ್ದರೆ ದಾರಿ ನಡೆಯಲಿಕ್ಕೂ ಸಾಧ್ಯವಲ್ಲ.

**ಗಂಗಾ:**—ಆ ಮೀರಿದ ಕೆಲಸಕ್ಕೆಲ್ಲ ಕೈನಿಲುಕಬಾರದು ನಾವು. "ಅಂಥ ಕಟುಕರಿಗೆ ಇನ್ನಾದರೂ ಇಂಥ ದುರ್ಬುದ್ಧಿ ಮಾಯವಾಗಲಿ" ಎಂದು ದೇವರನ್ನು ಪ್ರಾರ್ಥಿಸುವುದು; ಅವರಿಗೆ ಪಶ್ಚಾತ್ತಾಪವುಂಟಾಗು ವಂಥ ಸತ್ಕಾರ್ಯಗಳನ್ನಾಚರಿಸುವುದು; ಅಷ್ಟೆ ನಮ್ಮ ಕೆಲಸ.

**ಕೊಂಡೆ:**—ಇರಲಿ; ಹಾಗೂ ಮಾಡುವ. ಆದರೆ ಒಂದು ಅಯ್ದಾರು ನಿಮಿಷಗಳ ವರೆಗೆ ತಾವು ಸುಮ್ಮನೆ ನೋಟಕರಾಗಿ ಮಾತ್ರ ಇರಬೇಕು.

**ಗಂಗಾ:**—(ವಿಸ್ಮಯಗೊಂಡರೂ ನಗುತ್ತಾ) ಆಗಲಿ.

ಕೂಡಲೆ ನಾಙ್ಣಪ್ಪ ಕೊಂಡೆಯ ಮುಖವು ಮಂಜುವಿದ್ದಲ್ಲಿಗೆ ತಿರುಗಿತು. ಮೊದಲೇ ಆ ಮಂಜುವಿನ ಮೋರೆ ಮೂತಿಯಾಗಿ ಮಾರ್ಪಟ್ಟಿತ್ತು. ಈಗ ಕೊಂಡೆಯ ಕುಕ್ಕುವ ನೋಟದಿಂದಾಗಿ ಅವನೆದೆ ಬಿರಿವಂತಾಯಿತು. ಕುಳಿತುಕೊಂಡಿದ್ದವನು ಎದ್ದು ನಿಂತುಕೊಂಡನು. ಕೊರಳು ಬಾಗಿ, ಎದೆ ಮುದುಡಿತು. ಎಡಗೈ ಹಿಂದಾಯಿತು; ಬಲಗೈ ಬಂದು ಬಾಯನ್ನು ಮುಚ್ಚಿಕೊಂಡಿತು.

**ಕೊಂಡೆ**:–ಯಾರಿದು (ಗಂಗಾಧರ ರಾಯನನ್ನು ತೋರಿಸಿ) ಗುಮ್ಮನೋ ಪಿಶಾಚಿಯೊ?

**ಮಂಜು**:—(ನಡುಗುತ್ತಾ) ಅಲ್ಲ.

**ಕೊಂಡೆ**:—ಏನೋ, ಚಳಿಜ್ವರ ಹಿಡಿಯಿತೋ ಈಗ?

**ಮಂಜು**:—ಇಲ್ಲ.

**ಕೊಂಡೆ**:—ಕಾಲುಗುರಿನಿಂದ ಕೂದಲ ವರೆಗೆ ನಡಗುತ್ತಿದೆ ಪೂವೇರಿ ಹಾಕಿದಂತೆ.

**ಮಂಜು**:—ಮೋರೆ ನೋಡಿ ಹೆದರಿ ಹೋಯಿತು ಬುದ್ದಿ.

**ಕೊಂಡೆ**:—ನನ್ನ ಮುಖದಲ್ಲಿ ಆ ನಾಗದೇವನಿದ್ದಾನೇನು?

**ಮಂಜು**:—ಇಲ್ಲ ಬುದ್ದಿ.

**ಕೊಂಡೆ**:—ಹಾಗಾದರೆ ಯಾರಿದು?

**ಮಂಜು**:—ಭೀಮಯ್ಯನವರ ಮಗ. ನಾನೇನೂ ಮಾಡಿಲ್ಲ ಬುದ್ಧಿ.

**ಕೊಂಡೆ**:—ಇದು ಒಳ್ಳೆಯ 'ಬುದ್ದಿ'; ಕುಂಬಳ ಕಾಯಿಯನ್ನು ಕದ್ದವರು ಯಾರೆಂದು ಕೇಳುವ ಮೊದಲೆ "ನನ್ನ ಹೆಗಲಲ್ಲಿ ಬೂದಿ ಇಲ್ಲ" ವೆಂದು ಹೇಳುವ ಬುದ್ದಿ.

**ಮಂಜು**:—ಇಲ್ಲ, ಹೆದರಿ ಹೋಯಿತು.

**ಕೊಂಡೆ**:—ಯಾಕೆ? ಸೋಮನೇನು ಹೆದರಿದನೆ?

**ಮಂಜು**:—ಇಲ್ಲ. ನನ್ನನ್ನೇ ನೋಡುತ್ತೀರಿ ಬುದ್ದಿ.

**ಕೊಂಡೆ:**—ನಾನು ನೋಡಿದವರೆಲ್ಲ ಹೆದರುತ್ತಾರೊ? ಅಂಥ ರಾಕ್ಷಸನೇ ನಾನು?

**ಮಂಜು:**—ಅಲ್ಲ.

**ಕೊಂಡೆ:**—ಬಾವಿಯಿಂದ ವಿಷವಾಯು ಏಳುತ್ತಿದೆ ಏನು?

**ಮಂಜು:**—ಇಲ್ಲ.

**ಕೊಂಡೆ:**—ಕೇಳಿದುದಕ್ಕೆಲ್ಲ "ಇಲ್ಲ, ಅಲ್ಲ" ಮುಚ್ಚು ಬಾಯಿ.

**ಮಂಜು:**—(ಉತ್ತರವಿಲ್ಲ)

**ಕೊಂಡೆ:**—ಕಳ್ಳಾ, ನಾಲಿಗೆ ಇಳಿದು ಹೋಯಿತೋ ಅಷ್ಟರಲ್ಲಿ?

**ಮಂಜು:**—ಇಲ್ಲ.

**ಕೊಂಡೆ:**—'ಇಲ್ಲ'; ಏನಿಲ್ಲ? ವರ್ಷವಾಯಿತು ಮರಕ್ಕಾದಂತೆ; ಆ ಮರ ಸತ್ತರೂ ಮನೆಗಟ್ಟಬಹುದು; ನೀನು ಸತ್ತರೆ ಹುಳವೆ ಆಗಬೇಕು. ಇರಲಿ; ಕೊಂಡೆಯೆಂದರೇನೆಂದು ಗೊತ್ತಿದೆಯೊ? (ಹಲ್ಲು ಗಡಿಯುತ್ತಾ) ಫಿರ್ಯಾದಿಗಿರ್ಯಾದಿ ಎಲ್ಲ ಮತ್ತೆ. ಮೊದಲು ಎಲುಬನ್ನು . . . . ಬಗುಳು; ಗುಮ್ಮನೋ ಪಿಶಾಚಿಯೊ?

**ಮಂಜು:**—(ಮಾತಾಡದೆ ನಾಣನನ್ನು ಓರೆಗಣ್ಣಿನಿಂದ ನೋಡುತ್ತಿದ್ದನು)

**ಕೊಂಡೆ:**—"ನಾಣಪ್ಪಯ್ಯನವರ ಮೋರೆಯಲ್ಲೇನಿದೆ?" ಎನ್ನುತ್ತಾ ಎದ್ದನು. ಮಂಜುವಿನ ಬಾಯಲ್ಲಿ ಮಾತಿನ ಒಸರೇ ಇರಲಿಲ್ಲ. ಕೊಂಡೆ ಹತ್ತಿರಕ್ಕೈಯ್ದಿದನು.

**ಗಂಗಾ:**—(ಉದ್ವೇಗಗೊಂಡರೂ ಶಾಂತವಾಗಿ) ಕೊಂಡೆಯವರೆ, ಈಗ ನೋಟಕನಾಗಿ ಮಾತ್ರವಿರುವುದೇ ನನ್ನ ಹಕ್ಕಿನದು. ಆದರೂ ಒಂದು ಮಾತಿಗೆ ಎಡೆಯುಂಟೆ?

**ಕೊಂಡೆ:**—(ತಿರುಗಿ) ಅಷ್ಟು ದೊಡ್ಡ ಹೊರೆ ಹೊರಿಸಬಾರದು ಸ್ವಾಮಿ ಈತಲೆಯಲ್ಲಿ. "ನೂಲು, ಬಾಳು" ಎಂದಲ್ಲವೆ ಹಿರಿಯರ ಮಾತು? ನೂಲಿನ ಅಪ್ಪಣೆಯನ್ನು ಮೊದಲೆ ಪಡೆದುಕೊಂಡಿದ್ದೇನೆ. ಇದು ಬಾಳಿನ ಕೆಲಸ.

**ಗಂಗಾ:**—(ನಗುತ್ತಾ) ಅದೊಂದು ಭಾವನೆ. ಇರಲಿ; ಮನಸ್ಸಿನ ನೂಲನ್ನು ಹಿಡಿದು, ಸರಿಯಾಗಿ ಬಾಳ (ಗರಗಸ)ನ್ನು ಎಳೆಯಬೇಕು ಲೋಕ ವ್ಯವಹಾರದ ಮರದಲ್ಲಿ. ಈ ಮತ್ತೊಂದು ಭಾವನೆ, ನಿಮಗೂ ಗೊತ್ತಿಲ್ಲ ದಿರಲಿಕ್ಕಿಲ್ಲ.

ತನ್ನ ಗಾದೆಗೆ ಗಂಗಾಧರನು ಕಟ್ಟಿದ ಟಿಪ್ಪಣಿಯನ್ನು ಕೇಳಿ ಕೊಂಡೆ ಬೆರಗಾದನು. ಅವನ ವಿಷಯವಾಗಿ ನಾಣಪ್ಪನು ಹೇಳಿದ ಮಾತೂ ನೆನಪಾಗಿ ಮನಸ್ಸಿನ ತಲೆ ತೂಗಿತು. ಮರುಮಾತಿಗೆಡೆ ಇರಲಿಲ್ಲ. ಹತ್ತಿರಕ್ಕಯ್ದಿ ಕಿವಿಯಲ್ಲಿ "ಇಲ್ಲ, ಕಯ್ಮೊರುವುದಿಲ್ಲ. ಕಬ್ಬಿಣ ಕಾಯುತ್ತಿದೆ; ಈಗಲೆ ಬಡಿದು ಹದಮಾಡಿ ಬಿಡುತ್ತೇನೆ." ಎಂದು ಮಂಜುವನ್ನು ನೋಡಿ "ಏನು ಮುಡುಬೂತ ಹಿಡಿದಿದೆಯೊ ನಿನ್ನನ್ನು? ಕಾರಿಬಿಡು ಹೊಟ್ಟೆಯೊಳಗಿರುವುದನ್ನೆಲ್ಲ" ಎಂದನು. "ಗಂಗಾಧರನ ಮಂತ್ರವಾದವೂ ಈ ಭೂತವನ್ನು ತಡೆಯಲಾರದಾಯಿತಲ್ಲಾ!" ಎಂದು ಕಂಗಾಲಾದ ಮಂಜು ಮೂಕನಾಗಿದ್ದನು. "ಹೌದು, ಮದ್ದುಮಾಡದೆ ವಾಸಿಯಾಗಲಿಕ್ಕಿಲ್ಲ ಈ ರೋಗ" ಎನ್ನುತ್ತಾ ಪುನಃ ಹತ್ತಿರಕ್ಕೆ ಬಂದನು ಕೊಂಡೆ.

**ಮಂಜು:**—(ನಡುಗುತ್ತಾ) ಇಲ್ಲ ಬುದ್ದಿ; ಹೇಳುತ್ತೇನೆ.

**ಕೊಂಡೆ:**—ಹೇಳು; ನಡುಗುವುದೇಕೆ? ಹುಲಿಯನ್ನೆದುರಿನಲ್ಲೇ ಹೊಡೆದವನು ತಾನೆಂದು ಕಂಡ ಕಂಡವರ ಮುಂದೆ ಹೆಗ್ಗಳಿಸುತ್ತಿದ್ದೆಯಲ್ಲ.

**ಮಂಜು:**—ಹುಲಿಯನ್ನು ಹೊಡೆವಾಗ ಎದೆ ಕಗ್ಗಲ್ಲಿನಂತಿತ್ತು.

**ಕೊಂಡೆ:**—ಈಗ ಎದೆ ನೀರಾದುದು ಮಾಡಿದ ಕರ್ಮದಿಂದಲೆ ಅಲ್ಲವೆ?

**ಮಂಜು:**—ಹೌದು.

**ಕೊಂಡೆ:**—ಹೌದೋ? ಹಾಗಾದರೆ ಆ "ಕರ್ಮ"ವೇನೆಂದು ಹೇಳಿಬಿಡು. ಹೆದರಿಕೆ ಎಲ್ಲ ಹಾರಿ ಹೋದೀತು.

**ಮಂಜು:**—"ಆಯಿತು" ಎಂದು ನಾಣಪ್ಪನನ್ನು ನೋಡಿದನು.

**ನಾಣ:**—ನನ್ನಲ್ಲೇನಿದೆಯೋ ಮಂಜು? ಸತ್ಯಕ್ಕೆ ಸಂಕಲೆ ಇಲ್ಲ. ಹೇಳಿಬಿಡು.

**ಮಂಜು:**—ಹೇಳುತ್ತೇನೆ. ಆದರೆ ತಂದೆಯವರಿಗೆ ಕೋಪ . . . .

**ನಾಣ:**—ಏನದು? ಅವರ ಕೆಲಸದ ಸಾಲಮೂಲಗಳನ್ನೆಲ್ಲ ಕಡಿದು ಬಿಟ್ಟು ಕೆಲಗಾಲವಾಯಿತು. ಈಗ ನನಗೂ ಅವರಿಗೂ ಇರುವುದೆಂದರೆ ಈ ಮೆಯ್ಯನ್ನಂಟಿಕೊಂಡ "ಬಾದರಾಯಣ ಸಂಬಂಧ" ಮಾತ್ರವೆ.

**ಮಂಜು:**—ನಿಮ್ಮ ಮದುವೆಗಾಗಿ . . . .

**ನಾಣ:**—(ಉದ್ವಿಗ್ನನಾಗಿ) "ನನ್ನ ಮದುವೆಗಾಗಿ!" ಏನದು.

**ಕೊಂಡೆ:**—ಮಂಜೂ, ಇನ್ನೂ ನಿನ್ನ ಪರೋಪಕಾರದ ಹೆಗ್ಗಳಿಕೆ ಯನ್ನು ಕಟ್ಟಿಡುವುದಿಲ್ಲವೊ? ನಾಣಪ್ಪಯ್ಯನವರ ಮದುವೆಯ ಮಾತ ನ್ನೆಲ್ಲ ಮತ್ತೆ ಕೇಳುವ. ಮೊದಲು ನೀನೇನು ಮಾಡಿದೆಯೆಂದು ಹೇಳು.

**ಮಂಜು:**—(ನಡುಗುತ್ತಾ) ಈ ಹೊತ್ತು ಬೆಳಗ್ಗೆ ಈ ಗಂಗಣ್ಣನವ ರನ್ನು ಹಿಡಿದು ಕಟ್ಟಿ 'ಈ ಪಾತಾಳ ಗುಂಡಿ'ಗೆ . . . .

**ಕೊಂಡೆ:**—ಹಾಗೆ ಬರಲಿ. ಮುಂದಿನದು ಗೊತ್ತಾಯಿತು. ಈ ಪುಣ್ಯಕಾರ್ಯಕ್ಕೆ ಕೈಗೊಟ್ಟವರು ಯಾರೆಲ್ಲ?

**ಮಂಜು:**—ನಾನು, ಕುಞ್ಞ, ಇಸ್ಮಾಲಿ, ಕುಟ್ಟಿ, ಗಾಬ್ರು.

**ಕೊಂಡೆ:**—ಹುಂ, ಇವರನ್ನೆಲ್ಲ ಕೂಡಿ ಹಾಕಿದವರಾರು?

**ಮಂಜು:**—ನಾನು.

**ಕೊಂಡೆ:**—ಯಾಕೆ?

**ಮಂಜು:**—ಇವರ (ನಾಣಪ್ಪಯ್ಯನನ್ನು ತೋರಿಸಿ) ತಂದೆಯವರು ಒತ್ತಾಯಿಸಿದರು.

**ಕೊಂಡೆ:**—(ಒಂದಿಷ್ಟು ಎಣಿಸಿ) ಶ್ರೀಮತಸ್ಥರೂ ಸೇರಿದ್ದೀರಿ ಈ ಪುಣ್ಯ ಕಾರ್ಯಕ್ಕೆ.

**ಗಂಗಾ:**—ಮತವನ್ನೇಕೆ ಕುಕ್ಕುತ್ತೀರಿ ಕೊಂಡೆಯವರೇ? ಮತದ ಸಿಪ್ಪೆಯನ್ನಲ್ಲವೆ ಹಲವರು ತಿನ್ನುತ್ತಿರುವುದು? ತಿರುಳನ್ನುಂಡವರನ್ನು ಕಾಣುವುದೆಂದರೆ ಹುಡುಕಿದರೂ ಅಪರೂಪ.

**ಕೊಂಡೆ:**—ಹೌದು; ಕ್ಷಮಿಸಿರಿ. ಎದೆಯ ಕುದಿ ಹಾಗೆ ಉಕ್ಕಿ ಹೋಯಿತು. (ಮಂಜುವಿನ ಕಡೆಗೆ ತಿರುಗಿ) ಇದರಿಂದ ನಿಮಗೇನು ಲಾಭ?

**ಮಂಜು:**—ಈಗ ಐದ್ಪೈದು ರೂಪಾಯಿಗಳು ಮಾತ್ರ.

**ಕೊಂಡೆ:**—ಯಾರು ಕೊಟ್ಟರು?

**ಮಂಜು:**—ಇವರ (ನಾಣಪ್ಪಯ್ಯನನ್ನು ತೋರಿಸಿ) ತಂದೆಯವರು.

**ಕೊಂಡೆ:**—ಇನ್ನಿನದೆಷ್ಟು?

**ಮಂಜು:**—ಅದೆಲ್ಲ ಮದುವೆಯಾದ ಮೇಲಂತೆ.

**ಕೊಂಡೆ:**—ಯಾರಿಗೆ ಮದುವೆ?

**ಮಂಜು:**—"ಇವರಿಗೆ" ಎಂದು ನಾಣಪ್ಪಯ್ಯನನ್ನು ತೊರೀಸಿದನು.

**ಕೊಂಡೆ:**—ಇವರ ಮದುವೆಗೂ ಈ ಪುಣ್ಯಕಾರ್ಯಕ್ಕೂ ಕೂಟವೇನು?

**ಮಂಜು:**—ಬಾಗಮ್ಮನನ್ನು ಗಂಗಯ್ಯನವರಿಗೇ ಕೊಡಬೇಕೆಂದು ಒತ್ತಾಯವಂತೆ ರಾಮಯ್ಯನವರ ಮನೆಯವರದು.

**ನಾಣ:**—(ದುಃಖ ಕೋಪಗಳಿಂದ) "ಮಂಜು, ಮಗನಿಗೆ ಮದುವೆಯಾಯಿತೆಂದು ಹೇಳು ತಂದೆಯವರೊಡನೆ" ಎನ್ನುತ್ತಾ ಕಯ್ಯ ಚೂರಿಯನ್ನು ಬಿಡಿಸಿ ಜುಟ್ಟನ್ನು ಕೊಯ್ದು 'ಇದೇ ಮದುವೆ' ಎಂದನು.

**ಗಂಗಾ:**—ನಾಣಪ್ಪಾ, ಇದೇನು ವಿಪರೀತವಾದ ವರ್ತನೆ?

**ನಾಣ:**—ಅಲ್ಲ; ವಿಪರೀತವಾದ ವರ್ತನೆಯಲ್ಲ; ಆನಂದದ ಚಿಹ್ನೆ.

**ಗಂಗಾ:**—ಸಂಸಾರದಲ್ಲಿರುವವರಿಗೆ ಮನಃಕ್ಲೇಷ ಕಾಯಕ್ಲೇಷಗಳೆಂದರೆ ಮೊಸಲು. ಎಣಿಕೆ ನಡತೆಗಳಿಂದಲೇ ಆ ಕಾಡನ್ನುಕಡಿದು ಹೊಲವನ್ನಾಗಿ ಮಾರ್ಪಡಿಸಬೇಕಷ್ಟೆ. ಸುಮ್ಮನೆ ದುಡುಕಬಾರದು.

**ನಾಣ:**—(ಗಂಭೀರವಾಗಿ) "ಇಲ್ಲ, ದುಡುಕಲಿಲ್ಲ. ನಿಮ್ಮನ್ನೆ ಗುರುಗಳನ್ನಾಗಿ ಎದೆಯಲ್ಲಿಟ್ಟಾಗಳೆ ಆ ದುಡುಕೆಲ್ಲ ಮಾಯವಾಗಿದೆ." ಕಡಿದುದು ಮನಃಕ್ಲೇಷಾದಿಗಳಿಗೆ ಕಾರಣವಾದ ಸಂಸಾರಬಂಧವನ್ನು.

**ಗಂಗಾ:**—ಹಾಗೆಂದರೇನು? ಸನ್ಯಾಸಿಯಾಗುತ್ತೀಯೇ?

**ನಾಣ:**—ಹೌದು.

**ಗಂಗಾ:**—ಈ ಮಂಜುವಿನ ಹೇಳಿಕೆ ಸತ್ಯವೆಂದಲ್ಲವೆ ನೀನು ಹೀಗೆಲ್ಲ ದುಡುಕುವುದು? ಅದು ಸುಳ್ಳಾದರೆ?

**ಕೊಂಡೆ:**—ಹೌದು ನಾಣಪ್ಪಯ್ಯನವರೆ, ತಣ್ಣೀರಾದರೂ ತಣಿಸಿ ಕುಡಿಯಬೇಕಂತೆ. ಎಲ್ಲವನ್ನೂ ನಾಗಪ್ಪಯ್ಯನವರಲ್ಲಿಯೂ ವಿಚಾರಿಸಿ ಕೊಳ್ಳುವ. ಇಂಥ ಬಿಕಾರಿಗಳ ಮಾತನ್ನು ಹೇಗೆ ನಂಬುವುದು?

**ಮಂಜು:**—ಅಲ್ಲ ಬುದ್ಧಿ, ಸುಳ್ಳಲ್ಲ. ನಿಮ್ಮಲ್ಲಿಯೂ ಸುಳ್ಳು ಹೇಳಿದರೆ ನಾಳೆ ಬದುಕಬೇಡವೆ ನನಗೆ?

**ಕೊಂಡೆ:**—(ಕೋಪದಿಂದ) ಛೀ; ಮುಚ್ಚು ಬಾಯಿ.

**ನಾಣ:**—ಸುಳ್ಳಲ್ಲ ಕೊಂಡೆಯವರೆ. ಅವರ ನಡತೆ ಅಂಥದೇ. ಒಂದು ವೇಳೆ ಸುಳ್ಳಾದರೆ ರೋಗಕ್ಕಾಗಿ ಸೇವಿಸಿದ ಮದ್ದು ಆರೋಗ್ಯ ಕ್ಕಾಗುತ್ತದೆ.

**ಗಂಗಾ:**—ಅದೀಗ "ವಿಪರೀತ ವರ್ತನೆ" ಎಂದರೆ. ಒಂದು ಕೋಪ ಕ್ಕಾಗಿ ಬಾವಿಗೆ ಹಾರಿದವನಿಗೆ ಹತ್ತು ಕೋಪಬಂದರೂ ಮೇಲೇರಕೂಡದು. ವಿರಕ್ತಿಯಿಂದುಂಟಾದ ಸನ್ಯಾಸವೇ ಸನ್ಯಾಸ; ಉಳಿದುದು ಸನ್ಯಾಸವಲ್ಲ; ಪಶ್ಚಾತ್ತಾಪದ ವಿನ್ಯಾಸವಾಗಿ ಪರಿಣಮಿಸುವುದು.

**ನಾಣ:**—ನನ್ನ ಈ ವರ್ತನೆ ಬರಿಯ ಕೋಪತಾಪಗಳ ಚಿಹ್ನೆ ಯೆಂದು ಭಾವಿಸಬಾರದು. ತಂದೆಯವರೆಂಥವರೇ ಆಗಲಿ; ಮಗನಾಗಿ ಹುಟ್ಟಿದ ನಾನು ಅವರ ಸದ್ಗತಿಗೆ ಸಹಾಯಕನಾಗಬೇಕಲ್ಲವೆ?

**ಗಂಗಾ:**—ಸಂದೇಹವೇನು?

**ನಾಣ:**—ನಾನು ಸಂಸಾರಿಯಾಗಬೇಕೆಂಬ ಎಣಿಕೆಯೇ ಅವರಿಂದ ಈ ಹಿಂಸಾಕೃತ್ಯವನ್ನು ಮಾಡಿಸಿದುದು. ಒಂದೋ, ಬೋಧಿಸಿ ತಂದೆಯವ ರನ್ನು ಸನ್ಮಾರ್ಗಕ್ಕೆಳಿಸಬೇಕು; ಅಥವಾ, ಅವರ ದಾರಿಯನ್ನು ನಾನೂ ಹಿಡಿಯಬೇಕು; ಅಲ್ಲವೆ, ಗೊತ್ತುಗುರಿಯಿಲ್ಲದ ಪರದೇಶಕ್ಕಯ್ಬಬೇಕು; ಇಲ್ಲವೆ ಪ್ರಾಣತ್ಯಾಗವನ್ನೆಸಗಬೇಕು; ಒಂದೂ ಆಗದಿದ್ದರೆ, ಸನ್ಯಾಸಿಯಾಗ ಬೇಕು. ಬೇರೊಂದು ದಾರಿಯೂ ನನಗಿಲ್ಲ. ಇವುಗಳೊಳಗೆ ಮೊದಲನೆಯದು ನನಗಲ್ಲ; ಬ್ರಹ್ಮನಿಗೂ ಅಸಾಧ್ಯ. ಉಳಿದ ಮೂರೂ ನಿಂದ್ಯಕಾರ್ಯಗಳು.

ಅದರಿಂದಲೆ ಕಡೆಯ ಈ ಎಣಿಕೆಯನ್ನು ಬಿಗಿವಿಡಿದುದು. ಇದು ಈ ಹೊತ್ತಲ್ಲ; ಕೆಲಗಾಲಕ್ಕೆ ಮೊದಲೆ ನಿರ್ಧಾರಮಾಡಿದ ಮಂತ್ರ. ಈ ಹೊತ್ತು ಇದನ್ನು ಕೆಲಸದ ಅಚ್ಚಿನಲ್ಲೆರೆಯಲಿಕ್ಕೆ ಒಂದೆಡೆ ಬಂತು. ನಾನು ಸನ್ಯಾಸಿಯಾದೆನೆಂಬುದನ್ನರಿತು ತಂದೆಯವರ ಕುಮಂತ್ರದ ಕಣ್ಣು ಕುರುಡಾಗಬಹುದು; ದಾರಿಗಾಣದೆ ಸುವಿಚಾರದ ಕಣ್ಣು ತೆರೆಯಲೂ ಬಹುದು. ಅದರಿಂದಲೆ ಈ ಕೆಲಸದಲ್ಲಿ ಕೈಹಾಕಿದೆನು; ಬರಿಯ ಮರುಕದಿಂದಲ್ಲ.

**ಗಂಗಾ:**— ಮಾತೇನೋ ಸಯುಕ್ತಿಕವಾಗಿದೆ. ಆದರೆ ನಿನ್ನ ಕೆಲಸವೆಂಬುದು ಅಗಾಧವಾದ ಹೊಳೆಗಿಳಿದು ಆಳವನ್ನರಿತುಕೊಳ್ಳುವ ಪ್ರಯತ್ನದಂತೆ ತೋರುತ್ತಿದೆ.

**ನಾಣ:**— ನನ್ನ ಜೀವನವು ಸಫಲವಾಗಬೇಕಾದರೆ ಇದೊಂದೇ ದಾರಿಯಲ್ಲದೆ ಬೇರಾವುದೂ ಇಲ್ಲ. ಅದರಿಂದ ಒಪ್ಪುಗೊಟ್ಟು ಆಶೀರ್ವದಿಸಬೇಕು ಈ ಶಿಷ್ಯನನ್ನು.

**ಗಂಗಾ:**— ನಿಜವಾದ ವೈರಾಗ್ಯವು ನಿನಗೊದಗಿದರೆ ನಾನೂ ಕೃತಾರ್ಥನಾದೆನೆಂದು ಭಾವಿಸಿಯೇನು. ಆದರೆ, ಬೇಸರಗೊಳ್ಳಬೇಡ; ಇಂಥ ವೈರಾಗ್ಯವೆಂಬುದು ಸ್ಮಶಾನವೈರಾಗ್ಯವಾಗಿ ಮಾರ್ಪಡುವುದುಂಟು. ಹಾಗಾದರೆ ಮಾತ್ರ “ಇದ್ದುದು ಹೋಯಿತು ಮದ್ದಿನ ಗುಣದಿಂದ” ಎಂಬ ಮಾತಿಗೇ ದೃಷ್ಟಾಂತವಾದೀತು.

**ನಾಣ:**— ಹಾಗೆಂದೂ ಆಗಲಿಕ್ಕಿಲ್ಲ; ಸಂದೇಹಪಡಬಾರದು. ಈ ಹೂಣಿಕೆಯನ್ನು ತಡೆದು ನನ್ನನ್ನು ಪುನಃ ಆ ಮನೆಗೆ ಹೊಗಿಸಿದರೆ ನನ್ನ ಜೀವನವು ಬರಡಾಗುವುದರಲ್ಲಿ ಸಂಶಯವಿಲ್ಲ. ಗೊತ್ತಾಯಿತಲ್ಲವೆ?

**ಗಂಗಾ:**—(ಎಣಿಸಿ) ಆಯಿತು; ಮತ್ತೇನು ಮಾಡುವುದು? ಪುರುಷಸ್ಯ ಭಾಗ್ಯಂದೇವೋ ನಜಾನಾತಿ ಕುತೋ ಮನುಷ್ಯಃ” ಎಂದುಕೊಂಡನು.

**ನಾಣ:**— ಕೊಂಡೆಯವರೆ, ಬಹಳ ಕಾಲದಿಂದ ಅದೊಂದೆಣಿಕೆ ಕೊರೆಯುತ್ತಿತ್ತು ಮನಸ್ಸನ್ನು. ಅದರಿಂದ ಮ್ಯೆ, ಕುರುಡನಂತೆ ಕೈಗೊಟ್ಟವರನ್ನು ಹಿಂಬಾಲಿಸುತಿತ್ತು. ನನ್ನಲ್ಲಿ ಕಣ್ಣಿಟ್ಟುಕೊಂಡಿರಬೇಕೆಂದು ತಂದೆ

ಯುವರು ನಿಮ್ಮಲ್ಲಿ ಗುಟ್ಟಾಗಿ ಹೇಳಿಕೊಂಡುದು ದುರುದ್ದೇಶದಿಂದ; ಈ ಹಿಂಸಾತ್ಮಕವಾದ ಬೇಟೆಗೆ ನಾನು ನಿಮ್ಮನ್ನನುಸರಿಸಿ ಬಂದುದು ವಿಚಾರ ಶೂನ್ಯತೆಯಿಂದ; ಆದರೂ ಇವುಗಳಿಗೆ ನಾವಿಬ್ಬರೂ ಕೃತಜ್ಞರಾಗಿರಬೇಕು. ಇವುಗಳಲ್ಲದಿದ್ದರೆ ನನಗೆ ಈ ಹೆದ್ದಾರಿ ತೋರುತ್ತಿರಲಿಲ್ಲ; ನಿಮಗೆ ಈ ಮಹನೀಯರ ಮೈತ್ರಿಯೊದಗುತ್ತಿದ್ದಿಲ್ಲ.

**ಗಂಗಾ:**—ನೀವಿಲ್ಲಿಗೆ ಬಾರದಿರುತ್ತಿದ್ದರೆ ನನ್ನ ಪ್ರಾಣವು ಉಳಿಯು ತ್ತಿದ್ದಿಲ್ಲವೆಂಬುದನ್ನು ಬಿಟ್ಟುಬಿಡಬಹುದೆ?

**ಕೊಂಡೆ:**—"ಒಮ್ಮೆ ಹೋಗಿ ಭೇಟಿಮಾಡುವ" ಎಂದು ನಾಣ ಪ್ಪಯ್ಯನವರು ಸೂಚಿಸಿದ್ದರು. ಆದರೂ ನಾಗಪ್ಪಯ್ಯನವರ ಕೀಲು ಕುಕ್ಕಿದ ಮನಸ್ಸು ಅದಕ್ಕೆ ಹಿಂಜರಿಯುತ್ತಾ ಇತ್ತು. ಹೌದು; ಈ ಮಂಜುವಿನಂಥ ಒಡನಾಡಿಗಳನ್ನೆ ಕೂಡಿಕೊಂಡಿರುವವನ ಬಾಹ್ಯವಂತಿರಲಿ; ಒಳಗಿನ ವಾತಾವರಣವೂ ಕೆಟ್ಟುಹೋಗದಿರುವುದೆ? ಏನೊ, ನಾನು ಮಾಡಿದುದಲ್ಲ; ಹಿರಿಯರು ಮಾಡಿದ ಪುಣ್ಯದಿಂದ ತಮ್ಮ ಪರಿಚಯ ವಾಯಿತು. ಅಲ್ಲವಾದರೆ ಬ್ರಾಹ್ಮಣರಾದ ನಾಣಪ್ಪಯ್ಯನವರನ್ನೂ ಒತ್ತಾ ಯಿಸಿ ಕರಕೊಂಡು ಪ್ರಾಣಿಹಿಂಸೆಗಾಗಿ ಬಂದವನಿಗೆ ಈ ಅಲಭ್ಯಲಾಭ ವಾಗುತ್ತಿತ್ತೇ? ಎಂದೂ ಇಲ್ಲ.

**ಗಂಗಾ:**—ಇರಲಿ; ಹಾಗಾದರೆ ಪ್ರಾಣಿಹಿಂಸೆಯನ್ನು ಬಿಡುವಿರೇನು?

**ಕೊಂಡೆ:**—ಸಂದೇಹವೇನು? ಈ ಹೊತ್ತೂ, ಬಂದುದು ಮಾತ್ರ ವಲ್ಲದೆ ಆ ಪಾಪ ಕಾರ್ಯವೇನೂ ಸಾಗಲಿಲ್ಲ.

**ಗಂಗಾ:**—ಹಾಗೋ? ಸಂತೋಷ.

**ಕೊಂಡೆ:**—ಮಂಜೂ, ಗೊತ್ತಾಯಿತೆ?

**ಮಂಜು:**—(ಮೆಲ್ಲನೆ) ಹೌದು.

**ಕೊಂಡೆ:**—ಏನು ಗೊತ್ತಾಯಿತು?

**ಮಂಜು:**—ನಮ್ಮದು ಸ್ವಾಮಿ ಭೂಮಿ ಮೆಚ್ಚದ ಕೆಲಸವೆಂದು.

**ಕೊಂಡೆ:**—ಹೌದೋ? ಹಾಗಾದರೆ, ನಿಮಗೊದಗಬಹುದಾದ ಲಾಭವೆಲ್ಲ ಕನಸಿನ ಮಂಡಿಗೆಯಾಯಿತಲ್ಲ?

**ಮಂಜು:**—ಇಲ್ಲ ಬುದ್ಧಿ; ಇನ್ನು ಎಂದೆಂದೂ ಇಂಥ ಕೆಲಸಕ್ಕಿಳಿವುದಿಲ್ಲ.

**ಕೊಂಡೆ:**—(ಗಂಗಾಧರನನ್ನು ನೋಡಿ) ಸ್ವಾಮಿ, ನಡೆದ ಈ ವಿಷಯವನ್ನು ಪಠೇಲರಿಗೆ ತಿಳಿಸಬೇಕಲ್ಲವೆ?

ಆಗ ಮಂಜುವಿನ ಮೋರೆ ಸತ್ತವನ ಮೋರೆಯಂತೆ ಆಯಿತು. "ಹುಲಿಯಿಂದ ತಪ್ಪಿ ಹೊಂಡಕ್ಕೆ ಬಿದ್ದೆನಲ್ಲ" ಎಂಬ ಭಯವೂ ಆಯಿತು. ಕೋಂಡೆಯ ಕಾಲಿನಲ್ಲಿ ಬಿದ್ದು "ಬುದ್ಧಿ, ಮಾಡಿದ ತಪ್ಪಿಗೆ ನೀವು ಯಾವ ಶಿಕ್ಷೆಯನ್ನಾದರೂ ಮಾಡಿರಿ. ಸರಕಾರದ ಕಯ್ಯಲ್ಲಿ ಕೊಡಬೇಡಿರಿ" ಎಂದು ಅತ್ತನು.

**ಗಂಗಾ:**—ಕೋಂಡೆಯವರೆ, ಬಿಟ್ಟುಬಿಡಿರಿ ಅವನನ್ನು. ಸರಕಾರಕ್ಕೊಪ್ಪಿಸಿ ಕಾಡುವುದೇಕೆ? "ಶಿಕ್ಷೆ" ಎಂದರೆ ಈಚೆಗೆ ಭಯಂಕರವಾಗಿ ಪರಿಣಮಿಸಿದೆ; ನಿಜವಾಗಿ ಪರಾಂಬರಿಸಿದರೆ "ಬೋಧನೆ"ಯೊಂದೇ ಆ ಪದದ ಅರ್ಥ. ಮಾಡಿದುದಕ್ಕೆ ಪಶ್ಚಾತ್ತಾಪಗೊಂಡು ಮುಂದೆ ಸರಿಯಾಗಿ ವರ್ತಿಸಿದರೆ ನಿಜವಾದ ಶಿಕ್ಷೆಯೊದಗಿದಂತಾದೀತು.

**ಕೊಂಡೆ:**—ಗೊತ್ತಾಯಿತೇನು?

**ಮಂಜು:**—"ಆಯಿತು ಬುದ್ಧಿ" ಎಂದು ನಮಸ್ಕರಿಸಿದನು.

**ಕೊಂಡೆ:**—ನನಗೇಕೋ? ಅವರಿಗೆ ನಮಸ್ಕಾರ ಮಾಡು.

ಮಂಜು ಗಂಗಾಧರನ ಕಾಲನ್ನು ಹಿಡಿದು ಅತ್ತನು. "ಅಳಬೇಡ; ದುರಾಲೋಚನೆ ತಲೆದೋರಿದೊಡನೆ ಪಾತಾಳ ಗುಂಡಿಯ ಗುಮ್ಮನನ್ನು ಸ್ಮರಿಸಿಕೊ" ಎಂದು ನಗುತ್ತಾ ಅವನನ್ನೆತ್ತಿದನು.

**ಕೊಂಡೆ:**—ಮಂಜು, ತಡವಾಯಿತು. ನಾವೆಲ್ಲ ಈಗ ನಾಗೂರ ಶಿವರಾಯರಲ್ಲಿಗೆ ಹೋಗುತ್ತೇವೆ. ನೀನು ಕಾಡೂರಿಗೆ ಹೋಗಿ ನಾಗಪ್ಪಯ್ಯನವರನ್ನು ಅಲ್ಲಿಗೆ ಕಳುಹಿಸು.

**ಮಂಜು:**—ಆಯಿತು ಬುದ್ಧಿ, . . . . ಆದರೆ ಅವರು ಮನೆಯಲ್ಲಿಲ್ಲ. ಮಂಗಳೂರಿಗೆ ಹೋಗಿದ್ದಾರೆ.

**ಕೊಂಡೆ:**—(ಎಚೆಸಿ) ಯಾಕೆ?

**ಮಂಜು:**—ಗೊತ್ತಿಲ್ಲ.

**ಕೊಂಡೆ:**—(ನಗುತ್ತಾ) ಮತ್ತೇಕೆ? ತನಗಾಗಿ ಈ ಕೆಲಸ ಮಾಡುವ ನಿಮ್ಮ ಅವಸ್ಥೆ ಏನು ಬೇಕಾದರೂ ಆಗಲಿ; ದೂರವಾಗಿದ್ದು ತಾನು ಮಾತ್ರ ತಲೆದಪ್ಪಿಸಿಕೊಳ್ಳಬೇಕೆಂಬ ಸೂತ್ರವದು. ಇರಲಿ; ಬಂದ ಮೇಲೆ ನನ್ನನ್ನು ನೋಡುವಂತೆ ಹೇಳು.

**ಮಂಜು:**—ಬುದ್ಧಿ.

ಗಂಟೆ ಮೂರಾಯಿತು. ಒಬ್ಬಿಬ್ಬರನ್ನಲ್ಲದೆ ಉಳಿದವರನ್ನೆಲ್ಲ ಕೊಂಡೆ ಕಳುಹಿಸಿದನು. ಆ ಮೇಲೆ ಉಳಿದವರೆಲ್ಲ ಗಂಗಾಧರರಾಯನೊಡನೆ ಶಿವರಾಯನಲ್ಲಿಗೆ ಹೊರಟರು.

---

## ೮.

ಮಂಗಳೂರಿನ ಬೇರೆ ಪ್ರಾಂತಗಳಲ್ಲೆಲ್ಲ ಬೀದಿಗಳೀಗ ನೂಲ್ವಿಡಿದು ವಿಸ್ತರಿಸಿ ವಿಕೃತಿಗೊಂಡರೂ, ತ್ರಿಶೂಲೇಶ್ವರದ ಗಲ್ಲಿ ಮಾತ್ರ ಆ ಮೊದಲಿನಂತೆ ಪ್ರಕೃತಿಗನುವಾಗಿಯೆ ಇದೆ. ಮಂಗಳೂರೆಂಬ ಪುರುಷನಿಗೆ ಆ ತ್ರಿಶೂಲೇಶ್ವರ ಗಲ್ಲಿಯೇ ಒಡಲು. ಗಲ್ಲಿಓಣಿ ಒಳಓಣಿಗಳ ನರಗಳಿಂದಾಗಿ ಸಬಲವಾಗಿದೆ ಆ ಶರೀರ. ಆ ಸ್ಥಳವನ್ನಾರಿಸಿಕೊಂಡೆ ಲಿಂಗಪ್ಪಯ್ಯನು ಅಲ್ಲಿ 'ಹೋಟಿಲ'ನ್ನಿಟ್ಟುದು. ಹೆಬ್ಬೀದಿಗಳಲ್ಲಾದರೆ ಇಷ್ಟು ಅನುಕೂಲತೆ ಇದೆಯೆ? ಪಕ್ಕದ ಬೀದಿಯ ಮನೆಯುನ್ನು ಬೇಕಾದರೆ ಹಿಂಬಾಗಲಿನಿಂದ ನೋಡಬಹುದು; ಹೋಗಬೇಕಾದರೆ ಮಾತ್ರ ಬೀದಿಯುದ್ದಕ್ಕೆ ಅಲೆದುಬೇಕು. ಇಲ್ಲಿ ಅಂಥ ಇಕ್ಕಟ್ಟಿದೆಯೆ? ಇಲ್ಲ. ಹೊಟೇಲಿನ ಹಿಂಗಡೆಯಲ್ಲಿಳಿದು ಸುಸುಳಿಗುಟ್ಟಾಗಿ ಗುರಿಮುಟ್ಟಬಹುದು. ಇನ್ನೂ ಎಷ್ಟೆಷ್ಟೋ ಅನುಕೂಲ್ಯಗಳ ಪಟ್ಟಿ ನಮ್ಮ ಲಿಂಗಪ್ಪಯ್ಯನಲ್ಲಿದೆ. ಇಂಥ ಸ್ಥಳದಲ್ಲಿ ನೆಲೆಗೊಂಡುದರಿಂದ ಅವನು "ಅನ್ನದಾನಿ" ಎಂಬ ಬಿರುದನ್ನೂ ಪಡೆದಿದ್ದಾನೆ ಕೆಲವರಿಂದ. ಹೊರಗೆ ಹೋಗಿದ್ದ ಆ ಲಿಂಗಪ್ಪಯ್ಯನು ಮನೆಯ ಮೆಟ್ಟಲನ್ನೇರುವುದೂ, ನಾಗಪ್ಪಯ್ಯನು ಇಳಿವುದೂ ಸರಿಯಾಯಿತು.

**ನಾಗ:**—ಲಿಂಗಪ್ಪಯ್ಯನವರೆ, ಒಳ್ಳೆಯ ಶಕುನ.

**ಲಿಂಗ:**—ಅದೇನು?

**ನಾಗ:**—ಬ್ರಾಹ್ಮಣನೊಬ್ಬನೇ ಎದುರು ಬಂದರೆ ನೆನೆದ ಕಾರ್ಯಸಿದ್ಧಿಯಾದೀತಲ್ಲವೆ?

**ಲಿಂಗ:**—ಆ ಶಕುನ, ನಿಮಗೆ ಮಾತ್ರವೇನು? ನನಗೆದುರಾಗಿ ಬಂದ ನೀವೂ ಒಬ್ಬರೇ ಅಲ್ಲವೆ?

**ನಾಗ:**—ಆದರೆ, ನೀವು ಕೆಲಸವನ್ನು ಮುಗಿಸಿ ಬರುವವರು; ನಾನು ಕೆಲಸಕ್ಕಾಗಿ ಹೊರಟವನು. ಶಕುನದ ಆಗು ಹೋಗು ಹೊರಟವನಿಗಲ್ಲವೆ?

**ಲಿಂಗ:**—(ನಕ್ಕು) ಹಾಗಲ್ಲ; ಹೊರಟವನಿಗೆ ಹೊರಗಿನ, ಹೋಗುವವನಿಗೆ ಒಳಗಿನ ಕೆಲಸಗಳು ಸುಖಕರವಲ್ಲವೆಂಬುದೇ ಈ ಶಕುನದ ಅರ್ಥ.

**ನಾಗ:**—(ಆಲೋಚಿಸಿ) ಹಾಗೂ ಅಲ್ಲ ಸ್ವಾಮಿ. ಬ್ರಾಹ್ಮಣನೊಬ್ಬನು ಇನ್ನೊಬ್ಬನಿಗಿದಿರಾದರೆ ಒಂದು ಅಪಶಕುನವು ಇನ್ನೊಂದನ್ನು ಹೋಗಾಡಿಸುತ್ತದೆಯೆಂಬುದೆ ಅದರ ತಾತ್ಪರ್ಯ.

**ಲಿಂಗ:**—ಓಹೋ! ಸರಿ; ಅರ್ಥದ ಬೇರನ್ನೇ ಕಿತ್ತುಬಿಟ್ಟಿರಿ. ಇರಲಿ; ಬಂದ ಕೆಲಸವೆಲ್ಲ ಆಯಿತೊ?

**ನಾಗ:**—ನಿನ್ನೆಯೇ ಆಯಿತು. ಬೇರೇನೂ ಇಲ್ಲ; ಒಂದು ಠಶೆಯನ್ನು ತೆಗೆದುಕೊಳ್ಳಬೇಕಾಗಿತ್ತು.

**ಲಿಂಗ:**—ಅದಕ್ಕಾಗಿ ಇಲ್ಲಿ ವರೆಗೆ ಬರಬೇಕಿತ್ತೊ? ವಿಟ್ಲಲದಲ್ಲೆ ಸಿಕ್ಕುತ್ತಿದೆಯಷ್ಟೆ.

**ನಾಗ:**—ಹೌದು; ಆದರೆ ಕೆಲವು ಸಾರಿ ಸಿಕ್ಕುವುದಿಲ್ಲ. ಅದರಿಂದ ಇಲ್ಲಿಗೇ ಬಂದೆ. ಬರುವಾಗ ಸ್ವಲ್ಪ ಅಡಿಕೆಯನ್ನೂ ತಂದೆ.

**ಲಿಂಗ:**—ಮನೆಯ ಅಡಿಕೆಯೊ?

**ನಾಗ:**—ನನಗೆ ಮನೆಯ ಅಡಿಕೆಯೆ ಇಲ್ಲ. ನೂರಿದ ಧಾರಣೆಗೆ ಒಂದು ಗಾಡಿ ಅಡಿಕೆಯನ್ನು ತೆಗೆದುಕೊಂಡೆ.

**ಲಿಂಗ:**—ಈಗ ವ್ಯಾಪಾರಕ್ಕೆ ಪ್ರಾರಂಭಿಸಿದ್ದೀರೇನು?

**ನಾಗ:**—ಇಲ್ಲ; ಬಂದು ಹೋದ ಖರ್ಚಾದರೂ ಅಲ್ಲಿಂದಲ್ಲಿಗಾಗಲಿ; ಎಂಬುದಾಗಿ ಸುರುಮಾಡಿದ ವ್ಯಾಪಾರವಿದು.

**ಲಿಂಗ:**—ಕೆಲಸವೆಲ್ಲ ಆದರೆ ಇನ್ನೂ ಏನು ಹೊರಡಲಿಲ್ಲ?

**ನಾಗ:**—ಠಶೆಗಾಗಿ ಹೋದಾಗ ಅಮ್ಮೆಂಬಳದ ಸಂಕಣ್ಣಭಟ್ಟರು ಸಿಕ್ಕಿದರು. ಈ ಹೊತ್ತು ಅವರದೊಂದು ದಸ್ತೈವಜಿನ ರಿಜಿಸ್ಟ್ರಿಯಂತೆ. ಗುರುತು ಸಾಕ್ಷಿಗಾಗಿ ನಿಂತುಕೊಳ್ಳಲೇಬೇಕೆಂದು ಒತ್ತಾಯಿಸಿದರು. ಮನುಷ್ಯರಿಗೆ ಮನುಷ್ಯರೇ ಆಗಬೇಕಲ್ಲವೆ? ನಿಂತೆ. ಆದರೆ ಇಷ್ಟು ಹೊತ್ತಾಯಿತು ರಿಜಿಸ್ಟ್ರಿಯಾಗುವಾಗ. ಇನ್ನು ನಾಳೆಗಾಯಿತು ಹೊರಡುವುದು.

**ಲಿಂಗ:**—ಹಾಗಾದರೆ ಈಗ ಎಲ್ಲಿಗೆ ಹೊರಟಿರಿ?

**ನಾಗ:**—ಹುಂ, ಪುನಃ ಸುರುಮಾಡಿದಿರಿ! ಹೊರಡುವಾಗ 'ಎಲ್ಲಿಗೆ' ಎಂದು ಕೇಳುವುದು ಅವಶಕುನವಲ್ಲವೆ ಲಿಂಗಪ್ಪಯ್ಯನವರೆ?

**ಲಿಂಗ:**—ಕೆಲಸವೆಲ್ಲ ಮುಗಿಯಿತೆಂದು ನೀವೇ ಹೇಳಿದುದಲ್ಲವೆ? ಮುಗಿದ ಮೇಲೆ ಅವಶಕುನವೂ ಇಲ್ಲ. ಇನ್ನೂ ಮುಗಿಯದಿದ್ದರೆ ಅಂಥ ಕೆಲಸವೇನೆಂದು ಕೇಳುವ.

**ನಾಗ:**—ಸರಿ; ಇದೀಗ 'ಹುಣ್ಣಿನ ಮೇಲೆ ಹುಳ'ವೆಂದರೆ. "ಹೋಗುವುದೆಲ್ಲಿಗೆ? ಕೆಲಸವೇನು?" ಒಳ್ಳೆಯ ಪ್ರಶ್ನೆಗಳು.

**ಲಿಂಗ:**—ಅವಶಕುನವೆಲ್ಲ ಒಂದಕ್ಕೊಂದು ಎದುರಾಗಿ ಅಳಿದು ಹೋಯಿತೆಂದು ನೀವೇ ಹೇಳಿದುದಲ್ಲವೆ?

**ನಾಗ:**—ಹೌದು; ಆದರೆ ನಿಮ್ಮ ಪ್ರಶ್ನೆ ಹೊಸ ಅವಶಕುನವಾಯಿ ತಲ್ಲಾ. ಈ ಹೊತ್ತು ನಮ್ಮ ಮಂಜುವಾಗಲಿ ದೂಮನಾಗಲಿ ಬರಬಹುದು. ಒಮ್ಮೆ ಮಾರಪ್ಪನ ಹೋಟೆಲಿಗೆ ಹೋಗಿ ಅವರಾರಾದರೂ ಬಂದಿದ್ದಾರೋ ಎಂದು ವಿಚಾರಿಸಬೇಕು. ಮನೆಯ ಕ್ಷೇಮಸಮಾಚಾರವನ್ನು ತಿಳಿದು ಕೊಳ್ಳಬೇಕು. ಅದಕ್ಕಾಗಿಯೆ ಹೊರಟೆ.

**ಲಿಂಗ:**—ಓಹೋ, ಅಷ್ಟೆ ಅಲ್ಲವೆ? ಈ ಕೆಲಸವಾಗದಿದ್ದರೂ ಏನು? ನೀವು ಮನೆಯಿಂದ ಹೊರಟು ಮೂರು ನಾಲ್ಕೇ ದಿನಗಳಾದುವಷ್ಟೆ.

**ನಾಗ:**—ಹೌದು; ಆದರೂ ಮನುಷ್ಯಾವಸ್ಥೆಯಲ್ಲವೆ? ಏನಾಗ ಬೇಕು? ಕಾಲಿನ ಕೀಲುದಪ್ಪಿದರೆ ಸಾಕಾಗುತ್ತಿದೆ.

**ಲಿಂಗ:**—ಅಂಥ ಸಂದೇಹವಿದ್ದರೆ ಬನ್ನಿರಿ. ಹೋಗಿ ಕುಳಿತು ಒಮ್ಮೆ ವೀಳ್ಯಹಾಕಿ ಹೊರಡಿರಿ. ಈ ಅವಶಕುನದ ಮೂರಿಯೂ ಬಾರದು ಆ ಮೇಲೆ.

**ನಾಗ:**—(ನಕ್ಕು) ಅದೇನೂ ಇಲ್ಲ ಲಿಂಗಪ್ಪಯ್ಯನವರೆ. ಸುಮ್ಮನೆ ಹಾಗೆ ಹೇಳಿಬಿಟ್ಟೆ. ಇಂಥವುಗಳಿಗೆಲ್ಲ ಹೆದರಿಕೊಂಡು ಊರಲ್ಲಿ ಜೀವಿಸ ಲಿಕ್ಕೆ ಸಾಧ್ಯವೆ? ಅದಿರಲಿ; ಒಮ್ಮೆ ವಕೀಲ ಮುಕ್ಕಣ್ಣಯ್ಯನವರನ್ನು ನೋಡಬೇಕು.

**ಲಿಂಗ:**—ಅವರೀಗ ಮನೆಯಲ್ಲಿರಲಿಕ್ಕಿಲ್ಲ; "ಕ್ಲಬ್ಬಿ"ನಲ್ಲಿದ್ದಾರು.

**ನಾಗ:**—ಓಹೋ! ಹಾಗೋ? ನೀವು ಹೇಳದಿದ್ದರೆ ಅವರ ಮನೆ ವರೆಗೆ ಹೋಗುತ್ತಿದ್ದೆ.

**ಲಿಂಗ:**—(ನಕ್ಕು) ಹಾಗಾದರೆ ಅವಶಕುನವೇ ಸುಶಕುನವಾಗಿ ಮಾರ್ಪಟ್ಟಿತಲ್ಲಾ.

**ನಾಗ:**—(ನಗುತ್ತಾ) ಅದನ್ನೆ ಹೇಳಿದೆನಲ್ಲವೆ? ಆ ಅವಶಕುನದ ಮನೆ ಹಾಳಾಗಲಿ.

ಲಿಂಗಪ್ಪಯ್ಯನು ಮೇಲೇರಿದನು; ನಾಗಪ್ಪಯ್ಯನು ಕೆಳಗಿಳಿದು ದೇವ ಸ್ಥಾನದ ಪಕ್ಕದ ಓಣಿಯಲ್ಲಿ ಪೂರ್ವಮುಖವಾಗಿ ಹೋದನು. ಓಣಿಯ ಬಲಗಡೆಯ ಸಾಲುಮನೆಗಳ ಕಿಟಿಕಿಗಳಲ್ಲಿ ತರತರದ ಮೀನಾಕ್ಷಿಗಳು ಮಿನುಗುತ್ತಿದ್ದುವು. "ಅದೇನು ಈ ಕಾಕಾಕ್ಷಿಯನ್ನು ಕಂಡರೂ ಮೀನಾಕ್ಷಿ ಗಳು ಮರೆಗೊಳ್ಳಲಿಲ್ಲ?" ಎಂದು ಆಶ್ಚರ್ಯದಿಂದ ಪ್ರಶ್ನಿಸಬಹುದು. ಆದರೆ, ಎಡಗಡೆ ತಿರುಗಿದ ಕಾಕಾಕ್ಷಿಯನ್ನು ಕಂಡು ತಮ್ಮನ್ನಿದು ನೋಡಲಿ ಲ್ಲವೆಂದು ಭ್ರಮೆಗೊಂಡುದರಿಂದಲೆ ಆ ಮೀನಾಕ್ಷಿಗಳ ತರತರದ ಮಿನುಕ. ಆ ಕಾಕಾಕ್ಷಿ ಮುಗುಳ್ನಗೆ ಬೀರುತ್ತ, ಮೆಲ್ಲನೆ ಹಜ್ಜೆಯ ಮೇಲೆ ಹಜ್ಜೆಯಿಡು ತ್ತಿದ್ದನು. ಅಷ್ಟು ಮೆಲ್ಲನೆ ನಡೆದರೂ, ಫಕ್ಕನೆ ಎಡವಿ ಹೋಗಿ ನಿಂತು ಬಿಡಬೇಕಾಗುತ್ತಿತ್ತು. ಅಂತೂ ಕನಸಿನ ಮುಂಡಿಗೆಯಂತೆ ಇಕ್ಕಡೆಯ ಭಾವನಾತರಂಗಗಳೂ ಉಕ್ಕಿ ಇಳಿಯುತ್ತಿದ್ದುವು. ನಾಗಪ್ಪಯ್ಯನು ಓಣಿಯ ತುದಿಗಯ್ದಿ ಬಲಗಡೆಗೆ ತಿರುಗಿ ಮೈದಾನಿನ ಬಳಿಗೆ ಬಂದನು. ಆಗ ಹಲವು ಹುಡುಗರು ಸಾಲೆಬಿಟ್ಟು ತಂತಮ್ಮ ಮನೆಗಳಿಗೆ ಹೋಗುತ್ತಿ ದ್ದರು. ದಣಿದಿದ್ದರೂ ಹುಡುಗರಲ್ಲವೆ? ಈ ವ್ಯಕ್ತಿಯ ನೋಟನಟನೆ ಗಳನ್ನು ನೋಡಿ ಒಬ್ಬಿಬ್ಬರ ಮನಸ್ಸಿನಲ್ಲಿ ಒಂದು ವಿಲಕ್ಷಣವಿನೋದ ವುಂಟಾಯಿತು. ಆಗ "ಓಹೋಯೀ" ಎಂದನು ನಾಗಪ್ಪಯ್ಯ. ಆದರೆ, ಅವನು ಬಲಗಡೆಗೆ ನೋಡುತ್ತಿದ್ದುದರಿಂದ ಎಡೆಗಡೆಯಲ್ಲಿದ್ದ ಆ ಹುಡುಗರು "ಇವನಾರನ್ನೋ ಕರೆಯುತ್ತಾನೆ" ಎಂದೆಣಿಸಿದರು. ಪುನಃ "ಓಹೋಯೀ" ಎಂಬುದು ಕೇಳಿತು. ಹುಡುಗರೊಳಗೊಬ್ಬನು ನಗುತ್ತಾ ಮತ್ತೊಬ್ಬ ನೊಡನೆ ಪಿಸುನುಡಿಯಲ್ಲಿ "ಬಾಬೂ, ಇದು ಆಕಾಶವಾಣಿ. ಇದನ್ನು ಕಿವಿ ಕೇಳಬೇಕೆಂದರೂ ಹೊಟ್ಟೆ ಕೇಳುವುದಿಲ್ಲ. ನಾವು ಹೋಗುವ" ಎಂದನು.

**ಬಾಬು:**—(ಕಿವಿಯಲ್ಲಿ) ರಾಮೂ, ಇದೂ ಒಂದು ಪಾಠವಲ್ಲವೆ? ಶಾಖೆಯನ್ನು ಆ ಮೇಲಾದರೂ ಕುಡಿಯಬಹುದು.

**ನಾಗ**:—ಹೀಗೆ ಕರೆದರೂ ಓಕೊಳ್ಳದೆ ಏನೇನೋ ಪಿಸುಗುಟ್ಟುತ್ತೀರಲ್ಲ! ಒಳ್ಳೆಯ ಹುಡುಗರು.

**ರಾಮು**:—(ಕಿವಿಯಲ್ಲಿ) "ಬಾಬೂ, ಗೊತ್ತಾಯಿತೊ? ಇವ ಓರೆಗಣ್ಣ. ನಮ್ಮ ಮಾಸ್ತರ ಮಗ ಕೊಗ್ಗಪ್ಪನನ್ನೂ ಇವನನ್ನೂ ಕಟ್ಟಿದರೆ ಸುಬ್ರಹ್ಮಣ್ಯದಲ್ಲಿಯೂ ಸಿಕ್ಕದ ಜೋಡಿಯಾದೀತು" ಎಂದನು.

**ನಾಗ**:—ಏನಯ್ಯಾ, ದಾರಿ ಹೋಕರನ್ನು ಅಣಕಿಸಬಹುದೆ?

**ಬಾಬು**:—ಇಲ್ಲ ಸ್ವಾಮಿ, ಅಣಕಿಸಲಿಲ್ಲ. "ಮುಖ ನೋಡಿದರೆ ಹೊಸತು; ಮೇಲಿನವರಾಗಿರಬಹುದೇ?" ಎಂದು ಸಂದೇಹಿಸಿ ಮಾತಾಡಿಕೊಂಡೆವು.

**ನಾಗ**:—(ಸಂಶಯುಗೊಂಡು) "ಮೇಲಿನವರು" ಎಂದರೆ?

**ರಾಮು**:—ಮತ್ತೇನೂ ಅಲ್ಲ ಸ್ವಾಮಿ; "ಗಟ್ಟದ ಮೇಲಿನವರು" ಎಂದು.

**ನಾಗ**:—ಅಲ್ಲ; ನಾನು ಇದೇ ಜಿಲ್ಲೆಯವನು; ಉಪ್ಪಿನಂಗಡಿ ತಾಲೂಕಿನವನು.

**ಬಾಬು**:—ಸರಿ; ಅದೇ ಹಾಗೆ ತೋರಲಿಕ್ಕೆ ಕಾರಣ. ಉಪ್ಪಿನಂಗಡಿಯೆಂದರೆ ಮಲೆನಾಡಿಗೇ ಸೇರಿದೆಯಲ್ಲವೆ?

**ನಾಗ**:—ಉಪ್ಪಿನಂಗಡಿ ತಾಲೂಕು ಬಹಳ ದೊಡ್ಡದು. ನಾನು ವಿಟ್ಟಲ ಮಾಗಣೆಯವನು; ಮಲೆನಾಡಿನ ಪ್ರಾಂತದವನಲ್ಲ.

**ಬಾಬು**:—ಆಗಲಿ, ಮಂಗಳೂರಿಗೇನು ಬಂದಿರಿ?

**ನಾಗ**:—ಕೆಲಸವಿತ್ತು. ಅದಿರಲಿ; ಒಂದು ಕೆಲಸಕ್ಕಾಗಿ ನಿಮ್ಮನ್ನು ಕರೆಯಬೇಕಾಯಿತು.

**ರಾಮು**:—ಏನದು? ಹೇಳಬಹುದಲ್ಲ.

**ನಾಗ**:—"ಕಳಬ್ಬು" ಇರುವುದೆಲ್ಲಿ?

ಇಬ್ಬರೂ ಆಲೋಚನಾಮಗ್ನರಾದರು. ಒಳಗೊಳಗೆ ಏನೋ ಮಾತಾಡಿದರು. ಆಗ ಅವರ ಮುಖವನ್ನು ನೋಡಿದ ನಾಗಪ್ಪಯ್ಯನಿಗೆ

ಪರಿಹಾಸ್ಯ ಲಕ್ಷಣವೇನೂ ತೋರಲಿಲ್ಲ. "ಏನು, 'ಕಳಬ್ಬು' ಎಂದರೆ ಗೊತ್ತಾಗಲಿಲ್ಲವೆ?" ಎಂದನು.

**ರಾಮು:**—ಫಕ್ಕನೆ ಗೊತ್ತಾಗಲಿಲ್ಲ; ಈಗ ಗೊತ್ತಾಗುತ್ತ ಬಂತು. ಆದರೆ "ಕಳಬ್ಬು" ಎಂದಾಗಿರಲಿಕ್ಕಿಲ್ಲವದು.

**ನಾಗ:**—ಸ್ವಲ್ಪ ವ್ಯತ್ಯಾಸವಾಗಿರಲೂ ಬಹುದು ನಾನಾಡುವಾಗ.

**ಬಾಬು:**—ನಿಮಗೆ 'ಮಾಪಿಳ್ಳೆ'ಯವರ ಪರಿಚಯವಿದೆಯೆ?

**ನಾಗ:**—ಇದೆ. ಹೇಗೆ ಗೊತ್ತಾಯಿತು ನಿಮಗೆ?

**ಬಾಬು:**—ಊಹಿಸಿಕೊಂಡೆ. ಇಲ್ಲಿ 'ಅಬ್ಬು' ಎಂಬ ನಿಮ್ಮ ಆ ಕಡೆಯ ಮಾಪಿಳ್ಳೆಯೊಬ್ಬನು ಇದ್ದಾನೆ. ಅವನು ದೊಡ್ಡ ಕಳ್ಳ. ಜನರೆಲ್ಲ ಹಿಂದುಗಡೆಯಲ್ಲಿ ಅವನನ್ನು "ಕಳ್ಳಬ್ಬು" ಎನ್ನುತ್ತಾರೆ.

**ನಾಗ:**—(ಕೋಪಿಸಿ) ಛೇ, ಕೊಂಗಾಟವಾಡುತ್ತೀರೇನು?

**ರಾಮು:**—ಅಲ್ಲ ಸ್ವಾಮಿ, "ಕಳಬ್ಬು" ಎಂಬುದಕ್ಕೆ ಬೇರೇನೂ ಅರ್ಥವಾಗಲಿಲ್ಲ. ಅದರಿಂದ ಹಾಗೆ ಊಹಿಸಿದೆವು. ಹಾಗಾದರೆ ಕ್ಲಬ್ಬೆಂದಾಗಿರಬಹುದೇ ಅದು?

**ನಾಗ:**—ಹೌದು; ಹಾಗೆಯೇ. ಈ ಪಳ್ಳಿಯವರಿಗೆ ಕೇಳಿದಂತೆ ಹೇಳಲಿಕ್ಕೂ ಬರುವುದಿಲ್ಲ.

**ರಾಮು:**—ಅದು ಇಂಗ್ಲಿಷಿನ ಹೆಸರು.

**ನಾಗ:**—ಸರಿ; ಇಂಗ್ಲಿಷೆಂಬುದು ಸುಟ್ಟು ತಿನ್ನಲಿಕ್ಕೂ ಬರುವುದಿಲ್ಲ ನನಗೆ. ಅದೇ ಹಾಗಾಯಿತು.

**ರಾಮು:**—'ಕ್ಲಬ್ಬು' ರಂಗಪ್ಪಯ್ಯನವರಲ್ಲಿದೆ. ಆದರೆ, ನಿಮಗೆ ಅದೇಕೆ?

**ನಾಗ:**—'ಅದೇಕೆ?' ಎಂದರೆ?

**ರಾಮು:**—ರಂಗಪ್ಪಯ್ಯನವರೆಂದರೆ ಕುಸ್ತಿಯಾಡಿದವರು. ಅಲ್ಲಿರುವ ಕ್ಲಬ್ಬೆಂದರೆ ಬೀಸುವ ಮುದ್ಗರ.

**ನಾಗ:**—ಆಯಿತು; 'ಪುನಃ ಕಾಚೇನ ಪೋಚಯ'ವಾಯಿತು. ಮುದ್ಗರವೇಕೆ ತಲೆಗೆ ಹಾಕಿಕೊಳ್ಳಲಿಕ್ಕೋ ನನಗೆ?

**ರಾಮು:**—ಆ ಸಂದೇಹವಾಗಿಯೋ ಹಾಗೆ ಕೇಳಿದೆ.

**ನಾಗ:**—ನನಗೆ ವಕೀಲ ಮುಕ್ಕಣ್ಣಯ್ಯನವರನ್ನೊಮ್ಮೆ ನೋಡಬೇಕಾಗಿದೆ. ಅವರು "ಕಳಬ್ಬಿ'ನಲ್ಲಿರಬಹುದೆಂದು ಹೋಟೆಲಿನ ಲಿಂಗಪ್ಪಯ್ಯನವರು ಹೇಳಿದರು. 'ಅದು ಯಾವಕಡೆ?' ಎಂದು ಕೇಳಿಕೊಳ್ಳಲಿಕ್ಕೆ ಮರೆತುಹೋಯಿತು ನನಗೆ. ಅದರಿಂದಲೆ ಇಷ್ಟೆಲ್ಲ ಮೂಕಮಂತ್ರ. ನಮಗೇನು ಗೊತ್ತು ಈಗಿನ ಹೆಸರುಗಳೆಲ್ಲ?

**ಬಾಬು:**—(ನಗುತ್ತಾ) ಓಹೋ, ಸರಿಯಾಯಿತು. ಆಗಲೆ ಹೀಗೆ ಹೇಳುತ್ತಿದ್ದರೆ ಇಷ್ಟೆಲ್ಲ ತೊಂದರೆ ಇತ್ತೆ? ಇದೇ (ಎಡೆಗಡೆಯ ಕಟ್ಟೋಣವನ್ನು ತೋರಿಸಿ) ಆ ಕ್ಲಬ್ಬೆಂದರೆ. 'ಕ್ಲಬ್ಬು' ಎಂಬುದಕ್ಕೆ ಅನೇಕಾರ್ಥವಿದೆ. ಅದರಿಂದ ನಾವೂ ಗುರಿದಪ್ಪಿದೆವು.

**ನಾಗ:**—ವಕೀಲರೂ ಹೋಗುತ್ತಾರೆಯೋ ಅಲ್ಲಿಗೆ?

**ಬಾಬು:**—ವಕೀಲರೆಂದೇನು? ಹಲಬರು ಹೋಗುತ್ತಾರೆ.

**ನಾಗ:**—ನೀವೂ ಅಲ್ಲಿಗೆ ಹೋಗುತ್ತೀರೊ?

**ಬಾಬು:**—ಒಮ್ಮೊಮ್ಮೆ ಹೋಗುವುದೂ ಉಂಟು. ಬೇಕಾದರೆ ಈ ಹೊತ್ತು ಅವಶ್ಯವಾಗಿ ಬರುತ್ತೇವೆ.

**ನಾಗ:**—ನಿಮಗೆ ಅಲ್ಲಿ ಬೇರೇನಾದರೂ ಕೆಲಸವಿದೆಯೋ?

**ರಾಮು:**—(ಮಾತೆತ್ತಿದ ಬಾಬುವನ್ನು ಚಿವುಟಿ ನಿಲ್ಲಿಸಿ) ಹೆಚ್ಚಾಗಿ ವರ್ತಮಾನ ಪತ್ರಿಕೆಯನ್ನೋದುವುದು; ಬೇಕಾದರೆ ಕಾಫಿತಿಂಡಿಯನ್ನು ಸೇವಿಸುವುದು; ಅಷ್ಟೇ ನಮ್ಮ ಕೆಲಸ.

**ನಾಗ:**—ಸರಿ; ಅಲ್ಲಿ ವರ್ತಮಾನ ಪತ್ರಿಕೆಯೋದುವುದನ್ನು, ಮೊದಲೊಮ್ಮೆ ನೋಡಿದ್ದೇನೆ. ಈಗ ಕಾಫಿತಿಂಡಿಯನ್ನೂ ಕೊಡುತ್ತಾರೆಯೋ?

**ರಾಮು:**—ಹೌದು; ಆದರೆ ಎಲ್ಲರಿಗೂ ಅಲ್ಲ; ಬೇಕಾದವರಿಗೆ ಮಾತ್ರ.

**ನಾಗ:**—(ಆಶ್ಚರ್ಯದಿಂದ) ಪುಣ್ಯವಂತರಯ್ಯಾ ಅವರು.

**ರಾಮು:**—ಸಂದೇಹವೇನು?

ಹೀಗೆ ಮಾತಾಡುತ್ತಾ ಹುಡುಗರು ಮುಂದುವರಿದು ಕ್ಲಬ್ಬಿನ ಬಾಗಿಲು ದಾಟಿದರು; ನಾಗಪ್ಪಯ್ಯನು ಹಿಂಬಾಲಿಸಿದನು. ಹಾಗೆಯೆ ಕ್ಲಬ್ಬಿನ ಮೊಗವಾಡಕ್ಕೇರಿತು ಆ ಪಂಗಡ. ನಡುವಿನ ಮೇಜಿನಲ್ಲಿ ಪತ್ರಿಕೆಗಳು ಹರಡಿದ್ದುವು. ಸುತ್ತಲಿನ ಕುರ್ಚಿಗಳಲ್ಲಿ ಅಂದವಾಗಿ ಉಡಿಗೆ ತೊಡಿಗೆಗಳನ್ನು ಧರಿಸಿದವರು ಕುಳಿತಿದ್ದರು. ರುಮಾಲು ಕನ್ನಡಕಗಳನ್ನು ತೆಗೆದಿಟ್ಟು, ಮಲಗುವ ಕುರ್ಚಿಯಲ್ಲಿ ಒಬ್ಬರು ನಿದ್ರಿಸಿದ್ದರು. ಇನ್ನೊಬ್ಬರು ಪತ್ರಿಕೆಯನ್ನೋದುವುದರಲ್ಲಿಯೆ ಮಗ್ನರಾಗಿದ್ದರು. "ಓದಿದಿರೋ ಸ್ವಾಮಿ, 'ಟೈಮ್ಸಿ'ನಲ್ಲಿರುವ 'ನ್ಯೂಯೋರ್ಕಿ'ನ ಸುದ್ದಿಯನ್ನು? ಕಳೆದ ಎಂಟನೆ ತಾರೀಕಿನ ದಿವಸ ಒಬ್ಬ 'ನಿಗ್ರೋ' ಜಾತಿಯವನನ್ನು 'ಲಿಂಚ್' ಮಾಡಿದರಂತೆ. ಒಳ್ಳೆ ನಾಗರಿಕತೆ!" ಎಂದನು ಒಬ್ಬನಿನ್ನೊಬ್ಬನಲ್ಲಿ. "ಆ ಸುದ್ದಿ ನಮಗೇಕಯ್ಯ? ಮನೆ ಹೊತ್ತುವಾಗ ಬೀಡಿಯನ್ನೆಳೆಯುತ್ತೀರಿ. ಮೋತೀಲಾಲರ ಎಸೆಂಬ್ಲಿ ಸ್ಪೀಚನ್ನೋದಿದಿರೊ? ಎಕ್ಸಲೆಂಟ್" ಎಂದನು ಮತ್ತೊಬ್ಬನು. "ಈ ಎಸೆಂಬ್ಲಿಯನ್ನು ಅಲ್ಲಗಳೆವುದೂ ಅವರೇ. ಆ ಮೇಲೆ ಒಳಹೊಕ್ಕು ಅಬ್ಬರಿಸುವುದೂ ಅವರೇ. ಹೀಗೆ ಪೂರ್ವಾಪರ ವಿರೋಧವಾದ "ಸ್ಪೀಚಿ"ನಿಂದೇನು ಫಲ. ಒಂದು ಗಾದೆ ಹೇಳಿದ ಹಾಗೆ" ಎಂದನು ಬೇರೊಬ್ಬನು. "ಅದೆಂಥ ಗಾದೆ?" ಎಂದು ಆಚೆಯವನು ಪ್ರಶ್ನಿಸಿದನು. "ಅದೆಲ್ಲ, ನೆನಪುಳಿಯುತ್ತದೆಯೆ? ಏನೋ ಒಂದು" ಎಂದನು ಈಚೆಯವನು. "ಸರಿಯಾಯಿತು; ಮುಕಣ್ಣಯ್ಯನವರು ಕಲ್ಕತ್ತಾ ಹೈಕೋರ್ಟಿನ ತೀರ್ಪಿದೆಯೆಂದು ಮೊನ್ನೆ ಹೇರಿಂಗಿನಲ್ಲಿ ಹೇಳಿದ ಹಾಗೆ ಈ ಗಾದೆಯೂ ಆಯಿತು" ಎಂದನು ಎದುರಾಳಿ. "ಮುಕ್ಕಣ್ಣಯ್ಯ" ಎಂಬ ಹೆಸರು ನಾಗಪ್ಪಯ್ಯನ ಕಿವಿಗೆ ಮುಟ್ಟಿತು. ಕ್ರಮದಂತೆ ತಿರುಗಿ ನೋಡಿದನು. ಆಗ "ಏನು ನಾಗಪ್ಪಯ್ಯನವರೇ, ಕ್ಷೇಮವೆ?" ಎಂದು ಅವರೊಳಗೊಬ್ಬನು ಕೇಳಿದನು. ನಾಗಪ್ಪಯ್ಯನ ಆನಂದಕ್ಕೆ ಪಾರವಿಲ್ಲ. ಎದೆಯನ್ನು ಕುಗ್ಗಿಸಿ ತಲೆಯನ್ನು ಬಗ್ಗಿಸಿ ಎರಡು ಕೈಗಳನ್ನೂ ಹಣೆ

ಯಲ್ಲಿಟ್ಟು "ನಮಸ್ಕಾರ ಗುಮ್ಮಸ್ತರೆ, ಎಲ್ಲ ತಮ್ಮ ಆಧಾರ; ಹೀಗಿದ್ದೇನೆ, ತಂತು ಮಾತ್ರ" ಎಂದನು. ನಗುತ್ತಾ ಗುಮ್ಮಸ್ತನು "ಏನು ಬಂದಿರಿ" ಎಂದು ಕೇಳಿದುದಕ್ಕೆ "ವಕೀಲರನ್ನು ಒಮ್ಮೆ ನೋಡ ಬೇಕಿತ್ತು" ಎಂದು ಹೇಳಿದನು ನಾಗಪ್ಪಯ್ಯ. "ಅವರಿಗೆ ಸ್ವಲ್ಪ ತಲೆನೋವು; ಮನೆಯಲ್ಲಿದ್ದಾರೆ. ಆಯಿತು; ಒಳಹೋಗಿ ಕಾಫಿಗುಡಿಯಿರಿ" ಎಂದನು ಗುಮ್ಮಸ್ತ. ಬಾಬು, ಮೆಲ್ಲನೆ ನಾಗಪ್ಪಯ್ಯನ ಕೈಹಿಡಿದು ಸೆಳೆವುದಕ್ಕೂ, ಗುಮ್ಮಸ್ತನು "ಒಳಹೋಗಿ ಕಾಫಿಗುಡಿಯಿರಿ" ಎನ್ನುವುದಕ್ಕೂ ಸರಿ ಯಾಯಿತು. ನಮಸ್ಕಾರಮಾಡಿ ಆಹುಡುಗರೊಡನೆ ಮುಂದುವರಿ ದನು. ಕಾಫಿ ತಿಂಡಿಗಾಗಿ, ಹೊಕ್ಕು ಹೊರಡುವ ಜನಸಂದಣಿ ಕಿಕ್ಕಿರಿದಿತ್ತು. "ಇದೇನು? ಕೋಲು ಬೇಲಿ ಇಲ್ಲದೆ, ಬಂದಬಂದವರೆಲ್ಲ ಕಾಫಿಗುಡಿದು ಹೋಗುತ್ತಾರೆ? ವಕೀಲರ ಕಳಬ್ಬೂ ಹೀಗಾಗುವುದುಂಟೆ?" ಎಂಬ ಎಣಿಕೆ ಯಾಯಿತು ನಾಗಪ್ಪಯ್ಯನಿಗೆ. "ಕಕ್ಷಿಗಾರರು ಹೆಚ್ಚಾಗಿ ಬರಬೇಕೆಂದು ಈಗ ಹೀಗೆ ಮಾಡಿದ್ದಾರೋ ಏನೋ? ಹಾಗಾದರೆ . . . . ಹುಂ, ನನಗೇನು? "ಒಳ ಹೋಗಿ ಕಾಫಿಗುಡಿಯಿರಿ" ಎಂದು ಗುಮ್ಮಸ್ತರೇ ಹೇಳಿದರಲ್ಲವೆ?" ಎಂದು ನಿರ್ಧರಿಸಿಕೊಂಡನು. ಕೋಣೆಯ ಒಳಗೆ ಹೋಗುವಾಗ ಯಾರೂ ಇರಲಿಲ್ಲ. ಆದರೆ ತನಗೆದುರಾಗಿ ಯಾರೋ ಬರುವಂತೆ ತೋರಿತು ನಾಗ ಪ್ಪಯ್ಯನಿಗೆ. ಹತ್ತಿರಕ್ಕಯ್ದಿದನು. ಅಷ್ಟರಲ್ಲಿ ಕುರ್ಚಿಯಲ್ಲಿ ಕುಳಿತ ಬಾಬು ಒಳಗೊಳಗೇ ನಗುತ್ತಾ "ಏನು ನೋಡುತ್ತೀರಿ ಸ್ವಾಮಿ, ಇಲ್ಲಿ ಕುಳಿತು ಕೊಳ್ಳಿರಿ" ಎಂದನು. "ಏನೂ ಇಲ್ಲ, ಒಂದಿಷ್ಟು ಮಾತಾಡಿ . . . ." ಎಂದು ಅರ್ಧೋಕ್ತಿಯಲ್ಲೆ ತಡೆದುಹೋಯಿತು ನಾಗಪ್ಪಯ್ಯನ ಮಾತು. "ಅದು ನಿಲುಗನ್ನಡಿಯಲ್ಲವೆ? ನಿಮ್ಮ ಪ್ರತಿಬಿಂಬವೇ ಎದುರಾಗಿ ಬರುವ ಮನುಷ್ಯನಂತೆ ತೋರಿದುದು" ಎಂದನು ಬಾಬು. ಕೈಯಿಂದ ತಡವರಿಸಿ, ಕನ್ನಡಿಯೆಂದರಿತು ನಾಚಿಕೊಂಡು, ನಗುತ್ತಾ ಬಂದು ನಾಗಪ್ಪಯ್ಯನು ಕುರ್ಚಿಯಲ್ಲಿ ಕುಳಿತುಕೊಂಡನು.

**ರಾಮು:**— ಇದೊಂದಾಶ್ಚರ್ಯವೆ? ಮೊತ್ತಮೊದಲು ನಮಗೂ ಅದು ಕನ್ನಡಿಯೆಂದು ಗೊತ್ತಾಗಲಿಲ್ಲ.

**ನಾಗ:**—(ನಗುತ್ತಾ) ಹಾಗೋ? ಏನಾಶ್ಚರ್ಯ! ನೀವು ಹೇಳಿದರೂ ನಂಬುಗೆಯಾಗಲಿಲ್ಲ; ನನ್ನ ಪ್ರತಿಬಿಂಬವೆಂಬ ಭಾವನೆಯೂ ಹೊಳೆಯ ಲಿಲ್ಲ; ಮೋರೆಗೆ ಮೋರೆ ತಟ್ಟುವಂತೆ ನಿಂತುಬಿಟ್ಟಿದೆ ಆ ಕಡೆಯ ವ್ಯಕ್ತಿ. ಕಡೆಗೆ ಮುಟ್ಟಿ ನೋಡಿದ ಮೇಲೆಯೇ ಗೊತ್ತಾಯಿತು.

**ರಾಮು:**—ಹೌದು; ಅದು ನಿಲುಗನ್ನಡಿ.

**ನಾಗ:**—(ಎಂದು ಮೇಜನ್ನು ಮುಟ್ಟಿ) ಇದೇನಯ್ಯಾ? ಬೆಣ್ಣೆಯಂತೆ ನಯವಿದೆ.

**ರಾಮು:**—ಇದು ಒಂದು ತರದ 'ಸಿಮೆಂಟಿ'ನಿಂದ ಮಾಡಿದ ಮೇಜು.

**ನಾಗ:**—"ಸಿಮೆಂಟು" ಎಂದರೆ?

**ಬಾಬು:**—(ನಗೆಯನ್ನು ತಡೆದುಕೊಂಡು) ಸ್ವಾಮಿ, ಆ ಪದದ ಸರಿ ಯಾದ ಉಚ್ಚಾರಣೆ "ಸೀಮೆಯ ಅಂಟು" ಎಂದು. ಈಗ ಗೊತ್ತಾಯಿ ತೇನು? ಆದರೆ, 'ಸೀಮೆ' ಎಂದರೆ 'ನಾಡು' ಎಂಬರ್ಥವಲ್ಲ; ಯುರೋಪು ದೇಶವನ್ನು 'ಸೀಮೆ' ಎನ್ನುವುದು ವಾಡಿಕೆಯಾಗಿದೆ.

**ನಾಗ:**—ಓಹೋ, ಹಾಗೋ? . . . . ಹೌದು; ಹಳ್ಳಿಯಲ್ಲಿಯೂ ಆ ಮಾತೀಗ ವಾಡಿಕೆಯಾಗುತ್ತಾ ಬಂದಿದೆ. ಗೊತ್ತಾಯಿತು; "ಇದು, ಯುರೋಪುದೇಶದ ಒಂದು ತರದ ಅಂಟಿನಿಂದ ತಯಾರಿಸುವ ಮೇಜು" ಎಂದಲ್ಲವೇ ಅದರ ಅರ್ಥ?

**ಬಾಬು:**—ಹುಂ, ಸರಿ. (ರಾಮುವನ್ನು ನೋಡಿ) ಈಗ ನೋಡು; ಅರ್ಥವೆಂಬುದು ಆ ಕನ್ನಡಿಯಲ್ಲಿ ಕಂಡಂತಾಯಿತು. ಸರಿಯಾಗಿ ಉಚ್ಚರಿಸ ಬೇಡವೆ? ಹೇಳುವುದೇ ಗಂಟಲು ಸಿಕ್ಕುವಂತಾದರೆ ಹೇಗೆ ತಿಳಿದುಕೊಳ್ಳ ಬೇಕು?

**ರಾಮು:**—(ಕೋಪ ನಟನೆಯಿಂದ) ಆಯಿತೋ, ನೀನೊಬ್ಬ ಮಹಾ ಬುದ್ಧಿವಂತ.

**ಬಾಬು:**—ಇದಲ್ಲವೋ ಕಷ್ಟ? ಕಂಡಾಬಟ್ಟೆಯಾಗಿ ತಾನೇ ಮಾತಾ ಡಿದರೆ ಸಿಟ್ಟಿಲ್ಲ; 'ಅದು ತಪ್ಪು, ಹೀಗಾಗಬೇಕು' ಎಂದರೆ ಬರುತ್ತದೆ ಕೆಂಡದಂಥ ಸಿಟ್ಟು.

**ನಾಗ:**—ಇಲ್ಲ; ಅವರು ಸಿಟ್ಟುಮಾಡಿದರೇನು? ಇಲ್ಲ.

ಅಷ್ಟರಲ್ಲಿ ಅರ್ಧ ಅಂಗಿ ಹಿಜಾರುಗಳ ಹುಡುಗನೊಬ್ಬನು ಒಳಗೆ ಬಂದನು. "ಏನು ಬೇಕು ಸ್ವಾಮಿ?" ಎಂದು ನಗುತ್ತಾ ಕೇಳಿದನು. ನಾಗಪ್ಪಯ್ಯನು ಅತ್ತಿತ್ತ ನೋಡುವುದನ್ನರಿತು, "ತಿಂಡಿ ಏನಾಗಬೇಕೆಂದು ಕೇಳುತ್ತಾನೆ" ಎಂದು ಬಾಬು ವ್ಯಾಖ್ಯಾನಿಸಿದನು. "ನನಗೇನೂ ಆಗ ಬಹುದು; ನೀವೇ ಹೇಳಿರಿ" ಎಂದನು ನಾಗಪ್ಪಯ್ಯ. "ಆಗಲಿ; ಕುಡಿಯ ಲಿಕ್ಕೇನು ಕಾಫಿ ಚಹಾ ಕೊಕ್ಕೋ ಕಷಾಯಗಳಲ್ಲಿ?" ಎಂದನು ಹುಡುಗ. "ಕೊಕ್ಕೋ . . . . . ಕಷಾಯ" ಎಂಬುದನ್ನು ಕೇಳಿ ನಾಗಪ್ಪಯ್ಯನ ಮನಸ್ಸು ಏನೋ ಒಂದು ತೆರವಾಯಿತು. ಆದರೂ "ನನಗೆ ಕಾಫಿ" ಎಂದನು. "ಎಲ್ಲರಿಗೂ ಕಾಫಿಯೇ ಆಗಲಿ" ಎಂದನು ಬಾಬು. ತಿಂಡಿ ಏನೆಂಬುದನ್ನು ನೋಡಿ ಹೇಳಲಿಕ್ಕೆ, ಆ ಹುಡುಗನೊಡನೆ ರಾಮು ಹೋದನು.

**ನಾಗ:**—ಅದಿರಲಿ. ಒಂದು ವಿಷಯ ಮರೆತು ಹೋಯಿತು; ಈ ಕಾಫಿಗೀಪಿ ಮಾಡುವವರು ಯಾವ ಜಾತಿಯವರು?

**ಬಾಬು:**—ಬ್ರಾಹ್ಮಣರು. ಅಲ್ಲವಾದರೆ ನಿಮ್ಮನ್ನು ಕರೆದುಕೊಂಡು ಬರುತ್ತೇವೆಯೇ?

**ನಾಗ:**—ನಾನು ಬ್ರಾಹ್ಮಣನೆಂದು ನಿಮಗೆ ಗೊತ್ತಾಗಿತ್ತೆ?

**ಬಾಬು:**—ಸರಿ, ಸರಿ. ಅದನ್ನೆಲ್ಲ ಕೇಳಬೇಕೋ ಸ್ವಾಮಿ. ಮುಖ ನೋಡುವಾಗಲೂ ಗೊತ್ತಾಗುವುದಿಲ್ಲವೆ? ಇರಲಿ; ಅದೇನು ಈಗ ಕೇಳಿ ದಿರಿ ಜಾತಿಯನ್ನು?

**ನಾಗ:**—ಮತ್ತೇನೂ ಇಲ್ಲ. ಆ ಹುಡುಗ "ಕೊಕ್ಕೋ ಕಷಾಯ" ವೆನ್ನುವಾಗ ಸ್ವಲ್ಪ ಸಂದೇಹವಾಯಿತು.

**ಬಾಬು:**—ಹಾಗೋ. 'ಕೊಕ್ಕೋ' ಎಂಬುದರ ರೂಢಿ ಹಳ್ಳಿಗಳ ಲ್ಲಿಲ್ಲ. ಅದೂ ಕಾಫಿ ಚಹಾ ಮೊದಲಾದುವುಗಳಂತೆಯೇ. ಕಷಾಯ ವೆಂದರೆ ಗೊತ್ತಿದೆಯಷ್ಟೆ?

**ನಾಗ:**—ಸರಿ; ಈಗ ಗೊತ್ತಾಯಿತು. 'ಕೊಕ್ಕೋ ಕಷಾಯ'ವೆಂಬು ದನ್ನು ಕೇಳಿ ಏನೋ ಒಂದು ರೀತಿಯಾಯಿತು.

**ಬಾಬು:**—(ನಗುತ್ತಾ) ಏನು, 'ಕೊಕ್ಕೋ' ಎಂದರೆ, ಕೋಳಿ; ಅದರ ಕಷಾಯವೆಂದೂ ಭಾವಿಸಿ ಬಿಟ್ಟಿರೊ? ಎಂದೂ ಅಲ್ಲ; ಕೊಕ್ಕೋ ಎಂದರೆ ವನಸ್ಪತಿಯಿಂದಲೇ ತಯಾರಾಗುವುದು.

**ನಾಗ:**—(ನಗುತ್ತಾ) "ಈ ಹಳ್ಳಿಯವರೆಂದರೆ ಬಾವಿಯ ಕಪ್ಪೆ ಗಳು. ಈಗಿನ ಕಾಲದಲ್ಲಿ ನನ್ನಂತಿದ್ದವರಿಗೆ ಗತಿಯೇ ಇಲ್ಲ. ಆದರೇನು? ಊರುದೂರವಾಗಿ ಕಾಡು ಹತ್ತಿರವಾದಾಗ ತಿಳಿದುಕೊಳ್ಳಬೇಕೆಂಬ ಬುದ್ಧಿ ಬರುವುದು. ಇರಲಿ. ನೀವಿಲ್ಲದಿರುತ್ತಿದ್ದರೆ . . . ." ಎನ್ನುವಾಗ ಕಾಫಿ ತಿಂಡಿಗಳೂ ಬಂದುವು. ತಟ್ಟೆಗಳಲ್ಲಿ ತುಂಬಿದ ತಿಂಡಿಗಳನ್ನು, ಆ ಹುಡುಗ ಬೇರೆ ಬೇರೆಯಾಗಿ ಇಟ್ಟನು; ಒಂದೊಂದು ಲೋಟ ತಣ್ಣೀರನ್ನೂ ಅಲ್ಲಲ್ಲಿ ಮಡಗಿದನು. ನೀವು ಹೇಳಿದುದು ಕಾಫಿ ಯಲ್ಲವೆ?" ಎಂದು ಕೇಳಿದನು ನಾಗಪ್ಪಯ್ಯ. "ಹೌದು, ತಿಂಡಿಕಾಫಿ ಗಳಿಗಿಂತ ಮೊದಲೇ ತಣ್ಣೀರನ್ನು ಕುಡಿವುದು ಆರೋಗ್ಯಕರವಂತೆ. ಅಭ್ಯಾಸವಿಲ್ಲದಿದ್ದರೆ ಬಿಟ್ಟುಬಿಡಿರಿ" ಎಂದನು ರಾಮು. "ಹಾಗೋ, ಆಗಲಿ" ಎಂದು ವಿಧಿ ಪ್ರಕಾರ ನೀರು ಗುಡಿದನು ನಾಗಪ್ಪಯ್ಯ. ಕಾಫಿ ಯನ್ನೂ ತಂದಿಟ್ಟನು ಹುಡುಗ. ಐದಾರು ನಿಮಿಷಗಳಲ್ಲಿ ಫಲಾಹಾರ ವಾಯಿತು. "ಎರಡು ಮೂರು ಬೀಡಗಳನ್ನು ತರುತ್ತೇನೆ" ಎಂದು ರಾಮು ಹೊರಗಯ್ದಿದನು. "ಕೈ ದೊಳೆಯಲಿಕ್ಕೆ ನೀರುಬೇಕೆಂದೂ ಗೊತ್ತಿಲ್ಲವೆ ಇವನಿಗೆ? ಒಳ್ಳೆಯ ಹುಡುಗ. ಇರಲಿ; ಹೋಗಿ ತರು ತ್ತೇನೆ" ಎಂದು ಗೊಣಗುತ್ತಾ ಬಾಬುವೂ ಹೋದನು. ಅಷ್ಟರಲ್ಲಿ ಹುಡು ಗನು ಒಂದು ಚೀಟನ್ನು ತಂದು ನಾಗಪ್ಪಯ್ಯನ ಕೈಯಲ್ಲಿತ್ತನು.

**ನಾಗ:**—ಇದೇನೋ?

**ಹುಡುಗ:**—ಬಿಲ್ಲು

**ನಾಗ:**—ಬಿಲ್ಲೆಂದರೆ?

**ಹುಡುಗ:**—ಬಿಲ್ಲೆಂದರೂ ಗೊತ್ತಿಲ್ಲವೆ?

**ನಾಗ:**—ಬಿಲ್ಲೋ ಬಾಣವೋ? ನನಗೊಂದೂ ಗೊತ್ತಿಲ್ಲ.

**ಹುಡುಗ:**—ಹಾಗೆಂದರೇನು ಸ್ವಾಮಿ? ಕಾಫಿ ಗುಡಿವಾಗ ನಿಮಗೆ ಎಲ್ಲ ಗೊತ್ತಿತ್ತು; ಈಗ ಮಾತ್ರ ಮರೆತುಹೋಯಿತೊ? ಬಾಣದ ಬಿಲ್ಲಲ್ಲ ವಿದು; ನಮಗೆ ಲೆಕ್ಕದಂತೆ ಬರಬೇಕಾದ ಹಣದ ಚೀಟು.

**ನಾಗ:**—ಯಾವುದರ ಹಣ?

**ಹುಡುಗ:**—ನೀವು ಮೂವರೂ ಕಾಫಿಗುಡಿದುದಲ್ಲವೆ? ಅದರ ಚೀಟು. ಒಂದು ರೂಪಾಯಿಯ ಮೇಲೆ ಎಂಟಾಣೆಯಾಗುತ್ತದೆ.

**ನಾಗ:**—ಏನು, ಇದನ್ನು ಕೊಡಬೇಕಾದವನು ನಾನೆ?

**ಹುಡುಗ:**—ಮತ್ತಾರು? ಅವರಿಬ್ಬರನ್ನೂ ಕರಕೊಂಡು ಬಂದವರು ನೀವು.

**ನಾಗ:**—ಅಲ್ಲ; "ಹೋಗಿ ಕಾಫಿ ಗುಡಿಯಿರಿ" ಎಂದು ನನ್ನೊಡನೆ ಹೇಳಿದವರು ಗುಮ್ಮಸ್ತರು. ಆ ಹುಡುಗರಂತೂ ಬೇರೆ; ನನಗೂ ಅವರಿಗೂ ಏನೇನೂ ಸಂಬಂಧವಿಲ್ಲ.

**ಹುಡುಗ:**—ನನಗೆ ಅದೆಲ್ಲ ಗೊತ್ತಿಲ್ಲ.

**ನಾಗ:**—ಯಮದೂತನಿಗಿಂತಲೂ ಬಲವಾಗಿ ಬಿಟ್ಟೆಯಲ್ಲ ನೀನು? ಇರಲಿ, ಆ ಹುಡುಗರೆಲ್ಲಿದ್ದಾರೆ?

**ಹುಡುಗ:**—ಯಾವ ಹುಡುಗರು?

**ನಾಗ:**—ಅವರ ಹೆಸರು ಗೊತ್ತಿಲ್ಲ. ನನ್ನೊಟ್ಟಿಗೆ ಕಾಫಿ ಗುಡಿದ ರಲ್ಲಾ? ಅವರು.

**ಹುಡುಗ:**—(ಬಿರುಸಾಗಿ) "ನನಗೊಂದೂ ಗೊತ್ತಿಲ್ಲ. ಅದೋ, ಕರೆಯುತ್ತಾರೆ" ಎಂದು ಹೋದನು.

ಆ ಹುಡುಗನ ಮಾತೂ ಕೆಲಸವೂ ವಿಚಿತ್ರವಾಗಿ ತೋರಿತು ನಾಗಪ್ಪಯ್ಯನಿಗೆ. ಹುಡುಗರೂ ಬರಲಿಲ್ಲ. ಅದರಿಂದ, ಅವರು ತನ್ನನ್ನು ಬಲಿಗೊಟ್ಟು ಬಿಟ್ಟರೋ? ಎಂದು ಸಂದೇಹವಾಯಿತು. "ಒಳಗೆ ಹೋಗಿ ಕಾಫಿ ಗುಡಿಯಿರಿ" ಎಂದು ಗುಮ್ಮಸ್ತರು ಹೇಳಿದ್ದಾರೆ.

"ನಾನೇ ದುಡ್ಡುಗೊಡಬೇಕಾದರೆ ಗುಮ್ಮಸ್ತರು ಹಾಗೆ ಹೇಳುವರೆ? ಎಂದೂ ಇಲ್ಲ." ಎಂಬೆಣಿಕೆ ಹೊಳೆಯಿತೊಮ್ಮೆ. "ಆದರೆ, ಈ ಹುಡುಗ ಹೀಗೆ ಹೇಳುತ್ತಾನೆ. ಆ ಹುಡುಗರಿನ್ನೂ ಕಾಣುವುದಿಲ್ಲ!" ಎಂಬುದು ಹಿಂದಿನ ಭಾವನೆಯನ್ನು ನೆಲೆಗೆಡಿಸಿತು. "ಇರಲಿ; ಇಲ್ಲಿ ಕುಳಿತುಕೊಂಡೇನು ಮಾಡುವುದು?" ಎಂದೆಣಿಸಿ ನಾಗಪ್ಪಯ್ಯನು ಹೊರಗೆ ಬಂದನು. ಬರುವಾಗ ದಾರಿಯಲ್ಲಿ ಕುರ್ಚಿಹಾಕಿ ಕುಳಿತವನು "ನಿಮ್ಮ ಚೀಟೆಲ್ಲಿ" ಎಂದು ಕೇಳಿದನು.

**ನಾಗ:**—ಯಾವ ಚೀಟು?

**ಕುರ್ಚಿಯವನು:**—(ಗಂಭೀರವಾಗಿ) ನನಗೆ ನಿಮ್ಮ ರೀತಿ ಎಲ್ಲ ಗೊತ್ತಾಗಿದೆ. ಅಂಥ ಮಾತೆಲ್ಲ ಸಾಕು. ಒಂದುವರೆ ರೂಪಾಯಿಗೊಟ್ಟು ಹೋಗಿರಿ.

**ನಾಗ:**—ಯಾಕೆ ಸ್ವಾಮಿ ಹೀಗೆ ಹೇಳುತ್ತೀರಿ? ನಾನು ಕಾಫಿ ಗುಡಿದುದು ಗುಮ್ಮಸ್ತರ ಹೇಳಿಕೆಯಂತೆ.

**ಕುರ್ಚಿ:**—ಯಾವ ಗುಮ್ಮಸ್ತರು

**ನಾಗ:**—ವಕೀಲರ ಗುಮ್ಮಸ್ತರು

**ಕುರ್ಚಿ:**—ಏನು ಹೇಳುತ್ತೀರಯ್ಯಾ ನೀವು? ಮಂಗಳೂರಲ್ಲಿ ಎಷ್ಟು ವಕೀಲರಿಲ್ಲ, ಎಷ್ಟು ಗುಮ್ಮಸ್ತರಿಲ್ಲ!

**ನಾಗ:**—ಹೌದು, ಮರೆತುಹೋಯಿತು. ವಕೀಲ ಮುಕ್ಕಣಯ್ಯನವರ ಗುಮ್ಮಸ್ತರು.

**ಕುರ್ಚಿ:**—ಗುಮ್ಮಸ್ತರ ಹೆಸರೇನು?

**ನಾಗ:**—(ಎಣಿಸಿ) ಹೆಸರು ನೆನಪಿಲ್ಲ. ಗುಮ್ಮಸ್ತರೆಂದೇ ನಾವೆಲ್ಲ ಕರೆವುದು.

**ಕುರ್ಚಿ:**—ಬಹಳ ಬುದ್ಧಿವಂತರಯ್ಯಾ ನೀವು.

**ನಾಗ:**—"ಅಷ್ಟೆಲ್ಲ ಯಾಕೆ? ಅವರಿಲ್ಲಿಯೆ ಇದ್ದಾರಲ್ಲ." ಎಂದು ಮೊಗವಾಡದ ಕಡೆಗೆ ನೋಡಿದನು. ಅಲ್ಲಿ ಯಾರೂ ಇರಲಿಲ್ಲ.

**ಕುರ್ಚಿ**:—(ನಗುತ್ತಾ) ಒಳ್ಳೆಯದು. ಎಲ್ಲಿದ್ದಾರೆ?

**ನಾಗ**:—ಯಾರೂ ಇಲ್ಲವಲ್ಲಾ.

**ಕುರ್ಚಿ**:—ಅದೂ ಒಳ್ಳೆಯದು. ಹಣವನ್ನು ಮಾತ್ರ ಕೊಟ್ಟು ಬಿಡಿ.

**ನಾಗ**:—(ಕಯ್ಯನ್ನು ತಿರುಗಿಸುತ್ತಾ) "ಕಳಬ್ಬಿ"ನಲ್ಲಿಯೂ ಹೀಗಾಗುವುದೆಂದಾದರೆ ನಾನು ಬರಲಿಕ್ಕೇ ಇರಲಿಲ್ಲ.

**ಕುರ್ಚಿ**:—(ನಗುತ್ತಾ) "ಕಳಬ್ಬು" ಎಂದರೇನಯ್ಯಾ? ಯಾವ ಭಾಷೆಯ ಹೆಸರಿದು. (ಎಣಿಸಿ) ಸರಿ; "ಕ್ಲಬ್ಬು" ಅಲ್ಲವೆ?

**ನಾಗ**:—ಹೌದು; ಹಾಗೆಯೇ.

**ಕುರ್ಚಿ**:—ಇದು ಕಾಫಿ ಕ್ಲಬ್ಬು. ಏನು, ಬಂದವರಿಗೆಲ್ಲ ಧರ್ಮಾರ್ಥವಾಗಿ ಕಾಫಿತಿಂಡಿಗಳನ್ನು ಕೊಡುತ್ತೇವೆಂದು ನಾವು ಹರಕೆ ಹೊತ್ತುಕೊಂಡಿದ್ದೇವೆಯೆ? ಅಥವಾ ಕಾಫಿ ಹೋಟೆಲೆಂದರೆ ಧರ್ಮಶಾಲೆಯೆಂದು ನೀವು ಭಾವಿಸಿಕೊಂಡಿರೆ?

**ನಾಗ**:—ಇದು ಹೋಟೆಲೊ?

**ಕುರ್ಚಿ**:—ಹೌದು. ಕಾಫಿಕ್ಲಬ್ಬು ಎಂದೂ ಹೇಳುತ್ತಾರೆ; ಕಾಫಿ ಹೋಟೆಲೆಂದೂ ಹೇಳುತ್ತಾರೆ.

**ನಾಗ**:—ಹಾಗೋ! ಈ ಹಳ್ಳಿಯವನಿಗೆ ಅದೆಲ್ಲ ಏನು ಗೊತ್ತು ಸ್ವಾಮಿ? ನಾನು ವಕೀಲರನ್ನು ನೋಡಬೇಕೆಂದು ಹೊರಟವನು. "ವಕೀಲರು ಕಳಬ್ಬಿನಲ್ಲಿರಬಹುದು" ಎಂದನು ನಮ್ಮ ಹೋಟೆಲಿನ ಲಿಂಗಪ್ಪಯ್ಯ. ಬರುವಾಗ ಆ ಪಿಶಾಚಿ ಹುಡುಗರು ಯಾವ ವಿಷಗಳಿಗೆಯಲ್ಲಿ ಎದುರಾದರೊ! ಅವರು ಇದೇ ಕಳಬ್ಬೆಂದು ಹೇಳಿದರು. ಒಟ್ಟಾರೆ ಮೇಲೆ ಪೂರ್ವ ಕರ್ಮ. ಹೊರಡುವಾಗ ಆ ಲಿಂಗಪ್ಪಯ್ಯನೂ ಎದುರಾಗಿ ಬಂದ.

**ಕುರ್ಚಿ**:—(ನಗುತ್ತಾ) ಹೌದು; ಹುಡುಗರು ಹೇಳಿದುದೂ ಸರಿ. ಕೆಲವೇಳೆ ಬರಿಯ "ಕ್ಲಬ್ಬು" ಎಂದೂ ಹೇಳುತ್ತಾರೆ. ಆದರೆ, ಆ ಲಿಂಗಪ್ಪಯ್ಯ ಹೇಳಿದುದು ವಕೀಲರ ಕ್ಲಬ್ಬಾಗಿರಬಹುದು. ಅದೆಲ್ಲ ಇರಲಿ; ಈ ಪುರಾಣವನ್ನೆ ಓದುತ್ತಾ ಇರಲಿಕ್ಕೆ ನಮಗೆ ಸಮಯವಿಲ್ಲ. ಹಣವನ್ನು ಕೊಟ್ಟು ಹೋಗಿರಿ.

**ನಾಗ:**—(ಬೇಸರದಿಂದ) ಆಗಲಿ; ಆದರೆ ಎಲ್ಲವನ್ನೂ ನಾನೆ ಕೊಡ ಬೇಕೋ ಸ್ವಾಮಿ?

**ಕುರ್ಚಿ:**—ಆ ಹುಡುಗರೆಲ್ಲಿದ್ದಾರೆ?

**ನಾಗ:**—ಕಾಣುವುದಿಲ್ಲ. ಎಲ್ಲಿಯೋ ನುಸುಳಿ ಹೋಗಿಬಿಟ್ಟರು ಸ್ವಾಮಿ.

"ಪಾಪ, ಒಂದೂ ಗೊತ್ತಿಲ್ಲದ ಹಳ್ಳಿಯ ಜನ; ದಾರಿ ಹೋಕ ಹುಡುಗರಾರೋ, ಈ ಅಸಾಮಿಗೆ ಉಳಿಹೊಡೆದರೆಂದು ತೋರುತ್ತದೆ; ತನ್ನ ದನ್ನು ಕೊಟ್ಟು ಹೋಗಲಿ ಮೇನೇಜರೆ" ಎಂದು ಯಾರೋ ಮತ್ತೊ ಬ್ಬನು ಹೇಳಿದನು.

**ಕುರ್ಚಿ:**—ಹಾಗೆ ಮಾಡುತ್ತಾ ಬಂದರೆ ಒಂದು ತಿಂಗಳೊಳಗೆ ನಾವು ದಿವಾಳಿಯಾಗಬೇಕಾದೀತು. ನಿಮಗೆ ಗೊತ್ತಿಲ್ಲ. ಇಂಥವರಲ್ಲಿ ತರತರದವರಿದ್ದಾರೆ. ಸಮಯಬಂದರೆ ಮತ್ತೊಬ್ಬರನ್ನು ಬಾವಿಗೆ ದೂಡಿ ಹಾಕಲಿಕ್ಕೂ ಹಿಂದುಮುಂದು ನೋಡಲಿಕ್ಕಿಲ್ಲ.

ಅದನ್ನು ಕೇಳಿದೊಡನೆಯೆ ನಾಗಪ್ಪಯ್ಯನಿಗೆ ಹರಳೆಣ್ಣೆ ಗುಡಿದಂತಾ ಯಿತು. ಮೆಲ್ಲನೆ ಕಯ್ಯನ್ನು ಕಚ್ಚೆಯೊಳಗೆ ನುಸುಳಿಸಿ—ಎಲ್ಲಿಂದಲೋ ಒಂದು ಚೀಲವನ್ನು ತೆಗೆದನು. ಅದನ್ನು ಬಿಡಿಸಿ ಹಣವನ್ನು ಕೊಟ್ಟು "ಸ್ವಾಮಿ, ದುಡ್ಡು ಬಂತಲ್ಲಾ. ಇನ್ನು ಹಾಗೆಲ್ಲ ಹೇಳಬೇಡಿರಿ" ಎಂದು ಹೊರಟನು.

**ಕುರ್ಚಿ:**—(ತೆಗೆದುಕೊಂಡು) ಇನ್ನೂ ಹಾಗೆಲ್ಲ ಹೇಳಲಿಕ್ಕೆ ನನಗೇನು ಹುಚ್ಚು ಹಿಡಿದಿದೆಯೋ?

ನಾಗಪ್ಪಯ್ಯನು ಹೊರಟುಹೋಗುತ್ತಿರುವಾಗ ಕ್ಲಬ್ಬಿನ ಹುಡುಗ ರೆಲ್ಲರೂ ನಕ್ಕರು. ಅವರನ್ನು ಹೆದರಿಸಲಿಕ್ಕೆಂದು ಮೇನೇಜರನು ಬಾಯ್ದೆರೆ ದನು. ಆದರೆ ಅದೂ 'ಕುಂಬಾರನ ಹಾಸ್ಯ'ದಂತೆ ನಗೆಯಾಗಿಯೇ ಪರಿ ಣಮಿಸಿತು. ಮೊದಲಿನ ನಗೆ ಇಮ್ಮಡಿಯಾಯಿತು. ಸಂಜೆಯೂ ಆಯಿತು. ತನ್ನ ಅವಿಚಾರವನ್ನೆ ಹಳಿದುಕೊಂಡು ಗೇಟನ್ನು ಹೊರಡುವಾಗ "ಮಂಜು ನಾಗಲಿ ದೂಮನಾಗಲಿ ಬಂದಿರಬಹುದು" ಎಂಬುದರ ನೆನಪಾಯಿತು

ನಾಗಪ್ಪಯ್ಯನಿಗೆ. ಸ್ವಲ್ಪ ಮುಂದೆ ಹೋಗುವಾಗ ದೂರದಿಂದ "ಓ ಕಳಬ್ಬು" ಎಂದು ಕೂಗಿಕರೆದಂತೆ ಕೇಳಿತು. "ಅದು ಆ ಪೋಲಿ ಹುಡುಗರೇ" ಎಂಬ ಭಾವನೆಯಾದರೂ ಹತ್ತಿರಕ್ಕಯ್ದಿ ಗದರಿಸುವಷ್ಟು ಧೈರ್ಯವು ಅವನಿಗಿರಲಿಲ್ಲ. ಮಾತ್ರವಲ್ಲ; 'ಬರುತ್ತೇವೆ' ಎಂದ ಆಳುಗಳ ನೆನಪಾದುದರಿಂದ ಗಣಿಸದೆ ದಾರಿಹಿಡಿದನು. ಮತ್ತೂ ಒಂದೆರಡು ಸಾರಿ "ಓ ಕಳಬ್ಬು, ಕಳ್ಳಬ್ಬು" ಎಂಬ ಸದ್ದು ಕೇಳಿತು. ನಾಗಪ್ಪಯ್ಯನು ಕಿವಿಗೊಡಲಿಲ್ಲ; ಮುಖದಿರುಗಿಸಲಿಲ್ಲ. ಹೋಗುವಾಗ "ಹಾ! ಆ ಪಿಶಾಚಿ ಲಿಂಗಪ್ಪಯ್ಯನ ಅವಶಕುನವೇ! ಇನ್ನು ಆಳುಗಳ ಬಾಯಲ್ಲಿ ಏನೆಲ್ಲ ಇದೆಯೊ?" ಎಂದೆಣಿಸುತ್ತಾ ಹೋದನು. ಹೋಗಿ ಬಂಟರ ಹೋಟೆಲನ್ನು ಮುಟ್ಟುವಾಗ ದೂಮನು ಹೊರಟಿದ್ದನು.

"ಮಂಜುವೇನು ಬರಲಿಲ್ಲ?" ಎಂಬುದು ನಾಗಪ್ಪಯ್ಯನ ಪ್ರಶ್ನೆ. ಏನೂ ಹೇಳದೆ ದೂಮನು ನಾಗಪ್ಪಯ್ಯನನ್ನು ಬೀದಿಯ ಬದಿಗೆ ಕರೆದು ಹದಿನಯ್ದಿಪ್ಪತ್ತು ನಿಮಿಷಗಳ ವರೆಗೆ ಏನೇನೊ ಪಿಸುಗುಟ್ಟಿದನು. ಅದೇನೆಂದು ಕಣಿಯಿಟ್ಟು ಪ್ರಶ್ನೆಗೇಳಬೇಕಾಗಿಲ್ಲವಷ್ಟೆ. ನಾಗಪ್ಪಯ್ಯನಿಗೆ ಆಕಾಶವೇ ಜರಿದು ತಲೆಯ ಮೇಲೆ ಬಿದ್ದಂತಾಯಿತು. ಸ್ವಲ್ಪ ತಡೆದು "ಬೇಗನೆ ಊಟಮಾಡಿ ತಯಾರಾಗು; ಕೂಡಲೆ ಬರುತ್ತೇನೆ" ಎಂದು ತ್ರಿಶೂಲೇಶ್ವರದ ದಾರಿಯನ್ನು ಹಿಡಿದನು.

---

ಪ್ರಾತಃಕಾಲದಲ್ಲಿದ್ದು ಪಾಕಮ್ಮನು ಮನೆಗೆಲಸದಲ್ಲಿ ಮಗ್ನಳಾಗಿದ್ದಳು. ಮನೆಗೆಲಸವೆಂಬುದು ಅಷ್ಟೇನೂ ಇಲ್ಲ. ನಾಣಪ್ಪನು ಬಾರದೆ ಒಂದೆರಡು ದಿನವಾಗಿತ್ತು; ನಾಗಪ್ಪಯ್ಯನಂತೂ ಮಂಗಳೂರಿಗೆ ಹೋಗಿದ್ದಾನೆ. ಇರುವುದು ಅವಳೊಬ್ಬಳೇ. ಆದರೂ ಮನೆಯೆಂದ ಮೇಲೆ ಕೆಲಸವಿದ್ದೇ ಇರುತ್ತದೆ. ದೊಡ್ಡವರದು ದೊಡ್ಡ ರೀತಿ; ಬಡವರದು ಬಡ ರೀತಿ; ಅಷ್ಟೆ ಭೇದ. ಪಾಕಮ್ಮನು ಒಳಗೆಲಸಗಳನ್ನು ಮುಗಿಸಿ, ಅಂಗಳಕ್ಕಿಳಿದಳು. ಕೆಲಸದ ಹೆಂಗುಸರಿದ್ದಿಲ್ಲ. ಹನಿಕಾಲನ್ನು ಗುಡಿಸುವಾಗ ಕೊಟ್ಟಿಗೆಯ ಬಾಗಿಲನ್ನು ನೋಡಿದಳು. ಸಂದೇಹವಾಗಿ ಹತ್ತಿರಕ್ಕಯ್ದಿದಳು. ರಾತ್ರಿ ತಡವಂತೆ ಬೇರೆಲ್ಲಿಗಾದರೂ ಹೋಗುವಾಗ, ನಾಗಪ್ಪಯ್ಯನು ಕೊಟ್ಟಿಗೆಯ ಬೀಗವನ್ನು ಹಾಕಿ, ಆ ಬೀಗದ ಕಯ್ಯನ್ನು ಕಟ್ಟಿಕೊಂಡೇ ಹೋಗುವುದು ಪದ್ಧತಿ. ಪಾಕಮ್ಮನು ನೋಡುವಾಗ ಬಾಗಿಲು ಬಲಿದುಕೋಡೇ ಇದ್ದರೂ, ಸರಪಣಿ ಕೊಂಡಿಯಲ್ಲಿರಲಿಲ್ಲ. ಅದರಿಂದ, ರಾತ್ರಿಯಲ್ಲಿ ಬಂದು ಮಲಗಿದ ನಾಗಪ್ಪಯ್ಯನಿಗೆ ಇನ್ನೂ ಎಚ್ಚರವಾಗಲಿಲ್ಲವೆಂದು ಭಾವಿಸಿದಳು. ಹತ್ತಿರಕ್ಕೆ ಬಂದು ಕರೆದಳು. ಕೂಡಲೆ ಎದ್ದು ನಾಗಪ್ಪಯ್ಯ ಬಾಗಿಲುದೆರೆದನು.

**ಪಾಕ**:—ದೂಮ ಸಿಕ್ಕಿದನೊ?

**ನಾಗ**:—ಹೌದು.

**ಪಾಕ**:—ಹಾಗಾದರೆ ಎಲ್ಲವೂ ಗೊತ್ತಾಗಿದೆ ನಿಮಗೆ.

**ನಾಗ**:—ಹುಂ; ಅವನಿಗೆ ತಿಳಿದಷ್ಟು ಗೊತ್ತಾಗಿದೆ; ಹೆಚ್ಚಿನದೇನಾದರೂ ಇದೆ?

**ಪಾಕ**:—ಹೆಚ್ಚೇನು? ಎರಡುಮೂರು ಸಾರಿ ಮಂಜು ಬಂದು ನೀವು ಬಂದಿರೋ ಎಂದು ಕೇಳಿದ. ನಿಮ್ಮನ್ನೊಮ್ಮೆ ನೋಡಲೇಬೇಕಂತೆ ಕೊಂಡೆಗೆ.

**ನಾಗ:**—ಯಾಕಂತೆ?

**ಪಾಕ:**—ಆ ಗಂಗನನ್ನು ಪಾತಾಳಗುಂಡಿಗೆ ತಳ್ಳಲಿಕ್ಕೆ ನೀವೆ ಕಾರಣ ವೆಂದು ಅವನೆಣಿಕೆಯಂತೆ?

**ನಾಗ:**—ಹಾಗೆ ಅವನಿಗೆ ಯಾರು ಹೇಳಿದರೊ?

**ಪಾಕ:**—ನನಗೊಂದೂ ಗೊತ್ತಿಲ್ಲ; ಮಂಜುವೂ ಮೊದಲಿನಂತೆ ಮಾತಾಡುವುದಿಲ್ಲ ಈಗ. ಆದರೂ, ಆ ಎಣಿಕೆಗೆ ನಾಣಪ್ಪನೆ ಕಾರಣ ವೆಂದು, ಅವನ ಮಾತಿನಿಂದ ತಿಳಿದುಬಂತು. ಇರಲಿ; ಅದನ್ನೆಲ್ಲ ಕಟ್ಟಿ ಕೊಂಡೇನು ಮಾಡುವುದು? ಮುಖದೊಳೆಯಿರಿ; ಕಾಫಿಗೆ ನೀರಿಡುತ್ತೇನೆ.

**ನಾಗ:**—ನನಗಿನ್ನು ಯಾವುದೂ ಬೇಕಾಗಿಲ್ಲ.

**ಪಾಕ:**—(ನಕ್ಕು) ಇದೇನು? ನೀವೂ ಸನ್ಯಾಸಿಗಳಾಗಿ ಬಿಡುತ್ತೀ ರೇನು?

**ನಾಗ:**—ನಿನಗೆಲ್ಲವೂ ಗೊತ್ತಿದೆಯಷ್ಟೆ, ಬಾಗಿಯನ್ನು ಮದುವೆ ಮಾಡಿಸಿ ಅವನನ್ನೊಂದು ನೆಲೆಗೆ ತರಬೇಕೆಂದು ಶತಪ್ರಯತ್ನಮಾಡಿದೆನು. ಅಂಗಯ್ಯಲ್ಲಿ ಬರುತ್ತಾ ಇತ್ತು ಹಾಲು; ಮುಂಗಯಲ್ಲಿ ತಟ್ಟೆಯೋ ಬಿಟ್ಟನು.

**ಪಾಕ:**—ನೀವು ಅದು ಹಾಲೆಂದೆಣಿಸಿದರೆ ಸಾಕೋ? ಅವನಿಗೆ ಹಾಳಾಗಿ ತೋರಿತು.

**ನಾಗ:**—ಹಾಗಾದರೆ ಹೀಗೆಲ್ಲ ಮಾಡಬೇಕೊ?

**ಪಾಕ:**—ಇದೇನು ನಿಜವಾಗಿಯೂ ಸನ್ಯಾಸವೆಂದೆಣಿಸಿದ್ದೀರೊ? ಬೆಕ್ಕಿನ ಸನ್ಯಾಸವದು. ಇಲಿಯೊಂದು ಹೊರಗೆ ಬರಬೇಕು; ಮತ್ತೆ ನೋಡ ಬೇಕು.

**ನಾಗ:**—ಅಲ್ಲ; ಅವನ ಅಭ್ಯಾಸವದು; "ಕುರುಡನಿಗೆ ಹಿಡಿಮದೇ ದಂಟು"

**ಪಾಕ:**—ಅಂಥವರನ್ನು ಸಡಿಲು ಬಿಟ್ಟರೆ ಆಗುವುದೇ ಹಾಗೆ. ಅದೂ ಹುಡುಗಪ್ರಾಯವಾದರೆ ಕೇಳುವುದೇನು? ನಾನಿದನ್ನು ಮೊದಲೆ ಹೇಳಿ ದ್ದೇನೆ. ಹಾಗೆ ಹೋದರೆ ಹೋಗಲಿ; ಬರುವಾಗ ಬಂದಾನು. ಉಪ ವಾಸ ಮಾಡಿದುದರಿಂದ ಒದಗುವ ಪೊನ್ನಂಬರವೇನು?

**ನಾಗ:**—ಎಷ್ಟಾದರೂ ಮಗನಲ್ಲವೆ? ಒಂದು ದಿನವಲ್ಲದಿದ್ದರೆ ಇನ್ನೊಂದು ದಿನ ಬುದ್ಧಿ ಬರಬಹುದೆಂದು ಭಾವಿಸಿದೆ. ಅಂಥವನೂ ಹೀಗಾದ ಮೇಲೆ, ಕಾಫಿ ಯಾಕೆ? ಊಟವೇಕೆ?

**ಪಾಕ:**—ನಿಮ್ಮ ಮನಸ್ಸಿನಲ್ಲಿ ಹಾಗಿದ್ದುದಕ್ಕಾಗಿಯೇ, ಪಾತಾಳ ಗುಂಡಿಗೆ ಗಂಗಣ್ಣನನ್ನು ನೂಕಲಿಕ್ಕೆ ನೀವೇ ಕಾರಣವೆಂದು ಅವನೂ ಸೂಚಿಸಿದುವಾಗಿರಬೇಕಲ್ಲವೆ? ಒಳ್ಳೆಯ ಮಗ. ನಡುವೆ ಸೊನ್ನೆ ಸುತ್ತಿರಬೇಕು.

**ನಾಗ:**—ಹೇಗೂ ಇರಲಿ; ತಲೆ ತಿರುಗಿ ಹೋದ ಮೇಲೆ ನಾಣಪ್ಪ ಕೊಂಡೆ ಸುಮ್ಮನಿರಲಿಕ್ಕಿಲ್ಲ. ಈ ವೈಕಲ್ಯದಿಂದಾಗಿ ಏನುಮಾಡುವುದೆಂದು ನನಗೂ ತಿಳಿಯುವುದಿಲ್ಲ.

**ಪಾಕ:**—"ಯಾವುದಕ್ಕೂ ಮೊದಲು ಮುಖದೊಳೆಯಿರಿ. (ಎಣಿಸಿ) ಒಂದು ಕಾಗದವನ್ನೂ ಕಳುಹಿದ್ದಾನೆ ನಾಣಪ್ಪ" ಎಂದು ಹೋಗಿ ಕಾಗದವನ್ನು ತಂದುಕೊಟ್ಟಳು.

**ನಾಗ:**—(ತೆಗೆದುಕೊಂಡು) "ಆಯಿತು; ಕಾಫಿಗೆ ನೀರಿಡು. ನಾನೂ ಮನೆಯೊಳಗೆ ಹೋಗಿ ಓದಿ ನೋಡುತ್ತೇನೆ. ಇಲ್ಲಿದ್ದರೆ ಯಾರಾದರೂ ಒರುತ್ತಾರೆ." ಎಂದು ಮನೆಯೊಳಗೆ ಹೋಗಿ ಬಾಗಿಲು ಬಲಿದು ಕಾಗದವನ್ನೋದ ತೊಡಗಿದನು.

**ಕರಿಯಂಗಳ,**

ಶ್ರೀ. ರೂಪರಿಗೆ,

ನಾಣಪ್ಪನ ಬಿನ್ನಹಗಳು,

ಈ ಹೊತ್ತಿಗೆ ಸಾಂಸಾರಿಕವಾದ ತೊಡಕನ್ನು ಕಡಿದಂತಾಯಿತು. ಅದರಿಂದ, ನನ್ನೊಳಗೆ ತಲೆದೋರಿದ ಆನಂದವು ಅಷ್ಟಿಷ್ಟಲ್ಲ. ಅದಕ್ಕೆ ಕಾರಣವನ್ನು ಹುಡುಕಿದಲ್ಲಿ, ನೀವೇ ಅಲ್ಲದೆ ಬೇರೆ ಯಾರೂ ಅಲ್ಲವೆಂದು ಕಂಡು ಬಂತು. ಆ ಕೃತಜ್ಞತೆಯನ್ನು ತಿಳಿಸಲಿಕ್ಕಾಗಿಯೆ ಈ ಪತ್ರವನ್ನು ಬರೆದುಕೊಂಡಿರುತ್ತೇನೆ. ಆದರೆ, ಕೃತಜ್ಞತೆಯನ್ನು ಕೈಕೊಂಡು, ನನ್ನ ಆನಂದದ ಸವಿಯನ್ನು ನೀವೂ ಸವಿದು ಎದೆಗೂಡಿಸಿದರೆ ಮಾತ್ರವೆ ಈ ಕಾಗದ ಬರೆದುದು ಸಫಲವಾದೀತು.

ಕೆಲಗಾಲದಿಂದಿತ್ತ ನನ್ನ ಮನಸ್ಸು ವೈರಾಗ್ಯದ ಕಡೆಗೆ ಬಾಗಿತ್ತೆಂಬುದು, ನಿಮಗೆ ಗೊತ್ತಾಗಿರಬಹುದು. ಅದಕ್ಕೆ ಕಾರಣವೇನೆಂಬುದನ್ನೀಗ ಬರಹದಿಂದ ಬಹಿರಂಗಕ್ಕೆ ಬೀಸುವುದು ನನ್ನೆಣಿಕೆಯಲ್ಲ. ಆದರೆ, ಆ ಎಣಿಕೆಯನ್ನು ಉದ್ಬೋಧಿಸಿದುವುಗಳನ್ನು ಮಾತ್ರ ಬರೆಯುತ್ತೇನೆ.

ಹುಟ್ಟು ಬಡವರಾಗಿದ್ದ ನೀವು, ಬಾಲ್ಯದಲ್ಲಿ ಕಾಡೂರ ಭೀಮಯ್ಯನವರ ಮನೆಯಲ್ಲಿದ್ದುದು ಮಾತ್ರವಲ್ಲ; ಅವರ ಒಡಹುಟ್ಟಿದ ತಮ್ಮನಂತೆ ಬಳೆದಿರಿ. ನೀವಿಬ್ಬರೂ ಒಟ್ಟಿಗೆ ಒಮ್ಮೆ ಒಕ್ಕೆತ್ತೂರಿನ ಹೊಳೆಯನ್ನು ದಾಟುತ್ತಿದ್ದಾಗ ನೀವು ಕಾಲು ಜಾರಿ ಹೊನಲಿನ ಪಾಲಾಗಿದ್ದಿರಂತೆ. ಕೂಡಲೆ, ಜೀವದ ಹಂಗು ದೊರೆದು ಈಜಾಡಿ, ಭೀಮಯ್ಯನವರು ನಿಮ್ಮನ್ನೆತ್ತಿದ ಸುದ್ದಿಯನ್ನು, ನೀವೆ ಹೇಳಿದುದು ಈಗಲೂ ನೆನಪುಂಟು. ಹಾಗೆ ಎತ್ತದಿರುತ್ತಿದ್ದರೆ, ಈ ಕಾಗದದ ವರೆಗಿನ ಸಂಘಟನೆಗಳಿಗೂ ಎಡೆ ಇರುತ್ತಿರಲಿಲ್ಲ. ಆದರೆ, ಅಂಥ ಭೀಮಯ್ಯನವರ ಕಷ್ಟಕಾಲದಲ್ಲಿ, ಪ್ರತ್ಯುಪಕಾರವಂತಿರಲಿ; ನೀವು ಮಾಡಿದ ಅಪಕಾರವನ್ನು ಇಡಲಿಕ್ಕೆ ಎಡೆಯೇ ಇಲ್ಲ. 'ಪ್ರಾಣಾಂತಾನಿ ವೈರಾಣಿ' ಎಂದು ಬಲ್ಲವರ ಮಾತು. ಅವರಿಗೆ ನಿಮ್ಮಂಥ ದೃಷ್ಟಾಂತ ದೊದಗದಿದ್ದುದೇ ಹಾಗೆನ್ನಲಿಕ್ಕೆ ಕಾರಣವೆಂದು ತೋರುತ್ತವೆ. ಭೀಮಯ್ಯನವರು ಸತ್ತುಹೋದರೂ, ಅವರ ಮೇಲಿನ ಹಗೆಯನ್ನು ನೀವು ಬಿಡಲಿಲ್ಲ. ಗಂಗಣ್ಣನವರೆಂದರೆ, ಆ ಕಾತೂರ ದಂಪತಿಗಳ ಪೂರ್ವಪುಣ್ಯದಿಂದ ಜನಿಸಿದವರು; ಪರದೇಶಕ್ಕೆಯ್ದಿ ಕಷ್ಟದಿಂದ ವಿದ್ಯಾಭ್ಯಾಸ ಮಾಡಿ, ಬಂದವರು; ಹುಟ್ಟೂರಿನ ಏಳಿಗೆಯನ್ನೇ ಗುರಿಯಾಗಿಟ್ಟುಕೊಂಡು ಹಗಲಿರುಳೂ ಹೆಣಗಾಡುತ್ತಿರುವವರು. ಅಂಥವರನ್ನೂ, ಪಾತಾಳ ಗುಂಡಿಗೆ ನೂಕಿ, ಕೊಲ್ಲಿಸಬೇಕೆಂಬ ಭಾವನೆಯ ಪುಣ್ಯವನ್ನು ಕಟ್ಟಿಕೊಂಡಿರಿ.

ಹೀಗೆ ಗಂಗಣ್ಣನವರನ್ನು ಕೊಲ್ಲಿಸುವ ನಿಮ್ಮ ಪ್ರಯತ್ನಕ್ಕೆ, ಭೀಮಯ್ಯನವರಲ್ಲಿದ್ದ ವೈರಮಾತ್ರವೇ ಅಲ್ಲ; ನನ್ನಲ್ಲಿದ್ದ ಅದೊಂದು ತರದ ಪುತ್ರವಾತ್ಸಲ್ಯವೂ ಕಾರಣವಾಗಿದೆ. ಗಂಗಣ್ಣನವರು, ಹೀಗೆ ಅದೃಶ್ಯರಾದರೆ, ಮಗನಾದ ನನಗೆ, ಆ ರಾಮಯ್ಯನವರ ಮಗಳನ್ನು ಮದುವೆ ಮಾಡಿಸಬಹುದೆಂಬುದೇ ಆ "ಅದೊಂದು ತರದ ಪುತ್ರವಾತ್ಸಲ್ಯವು".

ಇದು ಊಹೆ ಮಾತ್ರವಲ್ಲ; ಕಟುಕರೊಳಗೊಬ್ಬನಾದ ನಿಮ್ಮ ಮಂಜು ವಿನ ಬಾಯಿಂದಲೂ ಹೊರಟುದು.

ಆ ಸಂಕುಚಿತದೃಷ್ಟಿಯನ್ನುಳಿದು ಒಂದಿಷ್ಟು ಭಾವಿಸಿರಿ. ಉಂಡ ಮನೆಗೆರಡನ್ನು ಬಗೆದು, ನೀವು ಮಾಡಿದ ಪಾಪಕ್ಕೆ ಮಿತಿಯುಂಟೆ? ಊರು ದೂರವಾಗಿ ಕಾಡು ಹತ್ತಿರವಾದರೂ, ನಿಮಗದು ತೋರಿಬರಲಿಲ್ಲ. ಹಾಗೆ ತೋರದಿರಲಿಕ್ಕೆ ಕಾರಣವೆಂದರೆ, ನಿಮ್ಮ ಮನಸ್ಸಿನಲ್ಲಿ ಹುಟ್ಟಿ, ಕಣ್ಣನ್ನು ಕಟ್ಟಿದ, ಆ ಪುತ್ರವಾತ್ಸಲ್ಯವೆಂಬ ಪರೆಯೇ. ಹೋಗಲಿ; ನೀವೆಣಿಸಿದ ನನ್ನ ಅಭಿವೃದ್ಧಿಯಾದರೂ ಎಂಥದು? ಗಂಗಣ್ಣನವರೆಂದರೆ ನನಗೆ ಗುರುಗಳು; ಪಿತೃಸಮಾನರು. ಅವರ ಸೌಭಾಗ್ಯವತಿಯಾಗುತ್ತೇನೆಂದು ದೃಢಮಾಡಿದ ಬಾಗಮ್ಮನವರೆಂದರೆ, ನನ್ನ ಮಾತೃಶ್ರೀಯವರಂತಾಗುತ್ತಾರೆ. ತಂದೆಯವರ ಪ್ರಯತ್ನವೇದು ಅಂಥ ಕೆಲಸಕ್ಕೆ ಅಸ್ತುಗೊಟ್ಟರೆ, ನಾನು ಪಶುಪ್ರಾಣಿಯೇ ಆಗುವೆನಲ್ಲವೆ?

"ಅಪುತ್ರಸ್ಯಗತಿರ್ನಾಸ್ತಿ" ಎನ್ನುತ್ತಾರೆ ಬಲ್ಲವರು. ಅಂಥ ಹೇಳಿಕೆ ಗಳ ಸಿಪ್ಪೆಯನ್ನಲ್ಲ; ತಿರುಳನ್ನು ತಿನ್ನಬೇಕಾದುದು. 'ಪುತ್ರನೆಂದರೆ ತಂದೆ ಗೊದಗಬಹುದಾದ ದುರ್ಗತಿಯನ್ನು ನಿವಾರಿಸುವವನು. ಅಂಥ ಪುತ್ರ ನಿಲ್ಲವಾದರೆ ತಂದೆಗೆ ಸುಗತಿ ದೊರೆಯದು' ಎಂದು ಅದರ ತಾತ್ಪರ್ಯ. ಮಗನು ಹೇಗಾದರೂ ಧನವಂತನಾದರೆ, ಮತ್ತು ಶ್ರಾದ್ಧವನ್ನೆಸಗಿದರೆ ಆ ಸದ್ಗತಿಯಾಗುವುದೆ? ಒತ್ತಿಟ್ಟನ ಮದ್ದಿನಿಂದ ಬೇರೊತ್ತಿಟ್ಟನ ಗಾಯ ವೆಂದೂ ವಾಸಿಯಾಗದು. ತಂದೆಯ ಪಾಪವನ್ನೆ ಮಗನು ತೊಳೆಯ ಬೇಕು.

ದೇವರದಯದಿಂದ ಅದಕ್ಕೂ ಎಡೆ ದೊರೆಯ ತೊಡಗಿತು. ಪಾತಾಳ ಗುಂಡಿಯಿಂದ ಗಂಗಣ್ಣನವರನ್ನು ಎತ್ತುವ ಪುಣ್ಯಕಾರ್ಯದಲ್ಲಿ ಸಹಕಾರಿಯಾಗುವ ಸುಯೋಗವು ನನಗೂ ಒದಗಿತು. ಕೊಂಡೆಯವರಲ್ಲಿ, ನೀವು ನನ್ನನ್ನೊಪ್ಪಿಸದಿದ್ದರೆ ಅದಕ್ಕೆಡೆಯಾಗುತ್ತಿತ್ತೆ? ಇಲ್ಲ. ಅದರಿಂದಲೇ ಅದಕ್ಕೆ 'ಕಾರಣವನ್ನು ಹುಡುಕಿದಲ್ಲಿ ನೀವೇ ಅಲ್ಲದೆ ಬೇರಾರೂ ಅಲ್ಲ ವೆಂದು ಕಂಡು ಬಂತು' ಎಂದು ಮೊದಲು ಹೇಳಿದುದು. ಅದರಿಂದಲೇ

ಆ ಮೇಲೆ ಈ ಆನಂದವೂ ಒದಗಿದುದು. ನಡೆದ ಈ ದೈವಘಟನೆಯನ್ನೆಲ್ಲ ಭಾವಿಸಿರಿ; ಇಷ್ಟಾದರೂ, ಗಂಗಣ್ಣನವರು ಯಾವತರದ ಕೊಂಕನ್ನೂ ನಿಮ್ಮಲ್ಲಿ ಇಡಲಿಲ್ಲವೆಂಬುದನ್ನೂ ಎಣಿಸಿಕೊಳ್ಳಿರಿ; ಆ ಮೇಲೆ ಪಶ್ಚಾತ್ತಾಪ ಜಲದಿಂದ, ಆ ಹಿಂದಿನ ದುರ್ಭಾವನೆಗಳನ್ನೆಲ್ಲ ತೊಳೆದುಬಿಡಿರಿ. ಅದ ರಿಂದಲೆ ಇಹಪರಗಳ ಸದ್ಗತಿಯಾಗುವುದು.

ಹಿಂದಿನ ಇಷ್ಟು ವಿಷಯಗಳನ್ನು ಬರೆದು, ಪತ್ರವನ್ನು ಇಷ್ಟು ಉದ್ದ ಕ್ಕೆಳೆದುದು ಬೇರಾವುದಕ್ಕೂ ಅಲ್ಲ; ಆ ಹಿಂದಿನ ಚಿತ್ರವನ್ನೇ ಒಮ್ಮೆ ನೋಡಿ ವಿಚಾರಿಸಿದರೆ, ಅದಕ್ಕೆ ಬೆಲೆಗಟ್ಟಲಿಕ್ಕೆ ಸುಗಮವಾದೀತೆಂದು. ಇವ ರೊಡನೆ ಉಳಿದುವುಗಳು ನಿಮಗೇ ನೆನಪಾಗಬಹುದು. ಈ ನನ್ನ ಮಾತಿನ ಹುರುಳನ್ನು ವಿಚಾರಿಸಿಕೊಳ್ಳದೆ "ಮಗನು ಸನ್ಯಾಸಿಯಾದನಲ್ಲಾ!" ಎಂದು ಸುಮ್ಮನೆ ಗಾಬರಿಗೊಳ್ಳಲೂ ಬಾರದು; ನನ್ನನ್ನು ಹುಡುಕಲೂ ಬಾರದು. ಹೇಗೂ ಕೆಲಕಾಲ ನನ್ನ ಮುಖವನ್ನು ನೀವು ನೋಡುವಂತಿಲ್ಲ. ನಿಮ್ಮ ಭಾವನೆ ಪರಿಶುದ್ಧವಾಗತೊಡಗಿದರೆ, ದೈವೀಭಾವನೆಯೂ ಹಾಗಿದ್ದರೆ, ಎಂದಾದರೊಮ್ಮೆ ನಿಮ್ಮನ್ನು ನೋಡುವೆನು. ಈ ಊರನ್ನು ಈಗಲೆ ತೊರೆ ದಾಯಿತು. ದಿನ ವಾರಗಳಾಗಲಿ, ತಾರೀಕು ತಿಂಗಳಾಗಲಿ ನೆನಪಾಗಲಿಲ್ಲ; ಹಾಕಲಿಲ್ಲ. ನನ್ನಂಥವನಿಗೆ ಅವುಗಳಿಂದೇನು?

**ಇತಿ, ನಾಣಪ್ಪ.**

ಒಮ್ಮೆ, ಮತ್ತೊಮ್ಮೆ, ಮೇಲೊಮ್ಮೆ, ಹೀಗೆ ಮೂರುಸಾರಿ ಓದಿ ದನು ಪತ್ರವನ್ನು. ಹನಿತು ಉಕ್ಕಿ ಸುರಿದ ಕಣ್ಣೀರಿನಿಂದ ಮುಖವನ್ನು ತೊಳೆದುಕೊಂಡನು. ಸ್ವಾಭಾವಿಕವಾಗಿ ಅವನಲ್ಲುಂಟಾಗುತ್ತಿದ್ದ ಅಂಗ ವಿನ್ಯಾಸಗಳಾವುವೂ ಆಗ ಇರಲಿಲ್ಲ. ಪತ್ರವನ್ನು ಹಿಡಿದುಕೊಂಡೇ ಒರಗು ವುದು, ಮಲಗುವುದು, ಏಳುವುದು; ಇವುಗಳೆಡೆಯಲ್ಲಿ ಪತ್ರದ ಆಯಾ ಭಾಗಗಳನ್ನು ನೋಡಿಕೊಳ್ಳುವುದು; ಒಮ್ಮೊಮ್ಮೆ "ಹೌದು; ಬೇರಿನ ಕೊಡಿ ಕೆಳಗಾಯಿತು; ಚಿಗುರಿನ ಕೊನೆ ಮೇಲೇರಿತು" ಎನ್ನುವುದು; ಇಷ್ಟೇ ಅವನ ಕೆಲಸವಾಗಿತ್ತು. ಅಷ್ಟರಲ್ಲಿ, ಪಾಕಮ್ಮ ಬಾಗಿಲು ನೂಕಿ ಒಳಗೆ ಬಂದಳು. "ಇನ್ನೂ ಮೋರೆದೊಳೆದಿಲ್ಲವೆ? ಕಾಫಿಯಾಯಿತು." ಎಂದಳು.

**ನಾಗ:**—ಹೊರಗಿನ ಮೋರೆಯನ್ನು ತೊಳೆಯಬಹುದು. ಆದರೆ....

**ಪಾಕ:**—"ಇದೇನು ಈಗಲೂ ಅದೇ ಹತ್ತಿಯಿಂದ ಅದೇ ನೂಲನ್ನೆಳೆಯುತ್ತೀರಿ?" ಎಂದು ನಗುತ್ತಾ "ಓದಿದ ಕಾಗದವೇ ಹೀಗೆಲ್ಲ ಮಾಡಿತೇನು? ಹಾಗಿದ್ದರೆ, ಅದನ್ನಾಗಲೆ ಒಲೆಗೆ ಹಾಕುತ್ತಿದ್ದೆ" ಎಂದಳು.

**ನಾಗ:**—(ಮಾತಿಲ್ಲ)

**ಪಾಕ:**—"ಕಾಗದದಲ್ಲಿರುವುದೇನು? ಆ ಬೆಪ್ಪನ ಬೆಗಡು. ಅವನು ಮದುವೆಯಾಗದಿದ್ದರೆ, ಒಳ್ಳೆಯದಾಯಿತು; ನೀವೇ ಬಾಸಿಗಗಟ್ಟಿ ಬಿಡುವುದು" ಎಂದು ನಗುತ್ತಾ ಹೇಳಿದಳು.

ಅಂಥ ಮಾತುಗಳೇ ಹೊರಟು ಬಳಕೆಯಾದಬಾಯಿ ಪಾಕಮ್ಮನದು. ಕೋಪವೂ ದುಃಖವೂ ಒಡನೊಡನೆ ಉಕ್ಕಿದುವು ನಾಗಪ್ಪಯ್ಯನ ಎದೆಯಲ್ಲಿ. ಆದರೂ ಅದನ್ನು ತಡೆದು "ಹಾಗೆಲ್ಲ ಹೇಳಬಾರದು ಹೆಂಗುಸರು" ಎಂದಷ್ಟೇ ಹೇಳಿದನು.

**ಪಾಕ:**—ಅದೇನು? ಈ ಮೂವತ್ತುಮೂರು ವರ್ಷಗಳ ವರೆಗೂ ಹೆಂಗುಸಾಗಿರಲಿಲ್ಲವೆ ನಾನು?

**ನಾಗ:**—ಹಾಗಲ್ಲ; ಬಾಗಿಯೆಂದರೆ, ಒಮ್ಮೆ ಮಗನಿಗೆ ನೋಡಿದ ಹುಡುಗಿಯಲ್ಲವೆ?

**ಪಾಕ:**—"ಹಾಗೋ; ಸರಿ. ಕೈ ಹಿಡಿದವಳನ್ನೇ ಹೀಗೆ ಮಾಡಿದ ನಿಮಗೆ ಯಾವಾಗಲೋ 'ಒಮ್ಮೆ ಮಗನಿಗೆ ನೋಡಿದ ಹುಡುಗಿ' ಎಂಬ ಭಾವನೆಯೆ? ಸರಿಯಾಯಿತು" ಎಂದು ಮತ್ತೂ ನಕ್ಕಳು.

ನಾಗಪ್ಪಯ್ಯನು, ಒಂದೆರಡು ನಿಮಿಷಗಳ ವರೆಗೆ ಸುಮ್ಮನಿದ್ದನು. ಏನನ್ನೋ ಆಲೋಚಿಸುತ್ತಿದ್ದಂತೆ ತೋರುತ್ತಿತ್ತು. "ಅದೆಲ್ಲ ಇರಲಿ; ಕಾಫಿ ತಣಿಯುತ್ತದೆ; ಏಳಿರಿ" ಎಂದಳು ಪಾಕಮ್ಮ. ಎದ್ದವನೇ ಆಕೆಯ ಪಾದಕ್ಕೆ ನಮಸ್ಕಾರಮಾಡಿದನು. ಅವಳಿಗೆ ಗಾಬರಿಯಾಯಿತು; 'ಹುಚ್ಚು ಹಿಡಿದಿರಬಹುದೇ' ಎಂದು ತೋರಿ "ಇದೇನು ಹೀಗೆಲ್ಲ ಮಾಡುತ್ತೀರಿ' ಎಂದಳು.

**ನಾಗ:**—ನಿನ್ನ ಮಾತೆಂಬುದು ಗುರುವಚನದಂತಾಯಿತು ನನಗೆ. ಅದರಿಂದಲೆ ನಮಸ್ಕಾರಮಾಡಿದೆನು. ಜೆಪ್ಪನೇದೆಣಿಸಬೇಡ ನಾಣಪ್ಪನನ್ನು. ಒಳಗಿಂದೊಳಗೆ ಊಹಿಸಿಕೊಳ್ಳುವಂತೆ, ಸಂಗ್ರಹವಾಗಿ ಬರೆದಿದ್ದನವನು; ನೀನು ಅದನ್ನೆ ಸ್ಪಷ್ಟವಾಗಿ ಹೇಳಿದೆ. ಅದು ಹಸಿಮಣ್ಣಿಗೆ ಕಲ್ಲೆಸೆದಂತಾಯಿತು.

**ಪಾಕ:**—(ಕಳವಳಗೊಂಡು) ನಾನೇನು ಹೇಳಿದೆನು!

**ನಾಗ:**—"ಕೈ ಹಿಡಿದವಳನ್ನೇ ಹೀಗೆ ಮಾಡಿದ" ಎಂದು.

**ಪಾಕ:**—ನಾನು ಏನೇನನ್ನೋ ಮನಸ್ಸಿನಲ್ಲಿಟ್ಟುಕೊಂಡು ಹಾಗೆಂದುದಲ್ಲ; ಸುಮ್ಮನೆ ವಿನೋದಕ್ಕಾಗಿ ಹೇಳಿಬಿಟ್ಟೆನು. ಅದಕ್ಕಾಗಿ ಹೀಗೆ ಹುಚ್ಚುಗಟ್ಟಬಹುದೆ?

**ನಾಗ:**—ಹಾಗಲ್ಲ; ಇದು ಹುಚ್ಚು ಬಿಟ್ಟುದು. ಹುಚ್ಚನ್ನೆ ನೋಡಿ ಪಳಗಿದ ನಿನಗೆ ಇದೂ ಹುಚ್ಚೆಂದು ತೋರುತ್ತಿದೆ.

**ಪಾಕ:**—ಹಾಗೆಂದರೇನು?

**ನಾಗ:**—"ಮತ್ತೇನೂ ಇಲ್ಲ; ಹೇಳುವುದಕ್ಕಿಂತಲೂ ಈ ಕಾಗದವನ್ನು ಓದಿ ಬಿಡುವುದೆ ವಾಸಿ" ಎನ್ನುತ್ತಾ ಓದಿಹೇಳಿ "ಗೊತ್ತಾಯಿತೆ?" ಎಂದು ಕೇಳಿದನು.

**ಪಾಕ:**—(ಆಶ್ಚರ್ಯಗೊಂಡು) ಹಾಗಾದರೆ, ಗಂಗಣ್ಣನನ್ನು ಪಾತಾಳಗುಂಡಿಗೆ ನೂಕಿದುದರಲ್ಲಿ ನಿಮ್ಮ ಕಯ್ಯೂ ಇದೆಯೆ?

**ನಾಗ:**—ಹೌದು.

**ಪಾಕ:**—ಶಿವ ಶಿವಾ! ಹೇಗೆ ಮಾಡಿದರೂ, ಹಾಗೆ ಮಾಡಬಾರದಾಗಿತ್ತು.

**ನಾಗ:**—ಹೌದು. ನಿನ್ನ ಮನಸ್ಸು ಇನ್ನೂ ಅಷ್ಟರಮಟ್ಟಿಗೆ ಕೊಳೆತುಹೋಗದುದರಿಂದಲೆ ಹಾಗೆನ್ನುತ್ತಿ.

**ಪಾಕ:**—ಏನಿದ್ದರೂ ನನ್ನಲ್ಲಿ ಹೇಳುತ್ತಿದ್ದೀರಷ್ಟೆ. ಇದನ್ನೇನು ಹೇಳಲಿಲ್ಲ.

**ನಾಗ:**—ನಿನಗೇನು ಗೊತ್ತದು? ಈ ಪಾಪಿಯ ಎದೆಯಲ್ಲಿರುವ ಗುಟ್ಟಿನ ಚೀಲಗಳನ್ನೆಲ್ಲ ಬಲ್ಲವನೆಂದರೆ ಪರಮಾತ್ಮನೊಬ್ಬನೆ. ಒಬ್ಬೊಬ್ಬ ನಲ್ಲಿ ಹೇಳತಕ್ಕ ಸುದ್ದಿಗಳಿಗೆ ಒಂದೊಂದರಂತಿವೆ ಆ ಚೀಲಗಳು.

**ಪಾಕ:**—ಇಂಥ ಪಾಪವನ್ನೂ ಮಾಡಬಹುದೆಂದು ತೋರಿತೆ ನಿಮಗೆ?

**ನಾಗ:**—ಕಲಿಪುರುಷನ ಕಯ್ಯ ಯಂತ್ರವಾಗಿದ್ದೆನು. ತಿರುಗಿಸಿ ದಂತೆ ತಿರುಗಿದೆನು. ಈ ಸಂದರ್ಭದಿಂದಾಗಿ ತಿರುಕವು ನಿಂತು ಹೋಯಿತು. ಅದುದೆಲ್ಲ ಪಾಪವೆಂದು ಗೊತ್ತಾಯಿತು.

**ಪಾಕ:**—ಇರಲಿ; ಮೊದಲು ಕಾಫಿಗುಡಿಯಿರಿ.

ಒಂದಿಷ್ಟು ಆಲೋಚಿಸಿ "ಆಯಿತು" ಎಂದು ನಾಗಪ್ಪಯ್ಯನು ಮುಖದೊಳೆದು ಕಾಫಿ ಗುಡಿದನು. ಆಮೇಲೆ ಸ್ನಾನಸಂಧ್ಯಾ ವಂದನೆಗಳನ್ನು ತೀರಿಸಿದನು. ಸಿದ್ಧವಾದ ಮೇಲೆ ಊಟವನ್ನೂ ಮಾಡಿ ದನು. "ಒಂದಿಷ್ಟು ಮಲಗುತ್ತೇನೆ;" ಎಂದು ಮನೆಯೊಳಗಿನ ಕೋಣೆ ಯಲ್ಲೆ ಹಸೆಬಿಡಿಸಿಬಾಗಿಲು ಬಲಿದನು. ಅದು ನಿದ್ರೆಯಲ್ಲ. ನಿದ್ರೆಯ ವೇಷ. ಆಮೇಲೆ ಆಲೋಚನಾಸಮಾಧಿಯಲ್ಲಿ ಮಗ್ನನಾಗಿದ್ದನು. ಹಗಲು ಹೋಯಿತು; ರಾತ್ರಿಯಾಯಿತು. ಸುಮಾರು ಏಳುಗಂಟೆಯ ಕಾಲ. ಆಸಮಾಧಿ ಇಳಿಯುತ್ತಿದ್ದಾಗ ಹೊರಗಿನಿಂದ ಬಾಗಿಲು ನೂಕಿ ದಂತಾಯಿತು. ಕರೆಯುವ ಪಾಕಮ್ಮನ ಸ್ವರವ್ಯತ್ಯಾಸವನ್ನರಿತು "ಏನು, ಹಾಗೆ ಕರೆಯುತ್ತಿ?" ಎಂದು ಕೇಳಿದನು ನಾಗಪ್ಪಯ್ಯ. ಮತ್ತೇನು? ರಾಮಯ್ಯನವರ ಕೆಲಸವೂ ಮುಗಿಯಿತಂತೆ" ಎಂದಳು ಪಾಕಮ್ಮ. ನಾಗಪ್ಪಯ್ಯನು ಎದ್ದು ಬಾಗಿಲುದೆರೆದು "ಹೌದೋ, ಸುಳ್ಳೊ" ಎಂದನು. "ಮಂಜು ಹೇಳಿದನು; ಹೊರಗಿದ್ದಾನೆ" ಎಂದಳು ಪಾಕಮ್ಮ. ನಾಗ ಪ್ಪಯ್ಯನು ಕೂಡಲೆ ಹೊರಗೆ ಬಂದು ಮಂಜುವನ್ನು ನೋಡಿ "ಯಾರು ಹೇಳಿದರು?" ಎಂದು ಕೇಳಿದನು.

**ಮಂಜು:**—ಹೇಳುವುದೇಕೆ ಬುದ್ದಿ? ಅಲ್ಲಿಂದಲೆ ಬಂದೆ.

**ನಾಗ:**—ಏನಾಯಿತು? ಅಸೌಖ್ಯದ ಸುದ್ದಿಯಾದರೂ ಇರಲಿಲ್ಲ ವಲ್ಲ.

**ಮಂಜು:**—ಏನಾಗಬೇಕು ಬುದ್ಧಿ ಈ ಡೊಕ್ಕೆಗೆ? ಮೂರು ನಾಲ್ಕು ದಿನಗಳಿಂದಲೂ ಆಲಸ್ಯವಂತೆ. ನಿನ್ನೆ ಸಂಜೆಗೆ ಏನೋ ಆಯಾಸವೆಂದು ಊಟವನ್ನೆ ಮಾಡಿಲ್ಲವಂತೆ. ಬೆಳಗಾತ ಸುಮಾರಾಗಿತ್ತು; ಮಧ್ಯಾಹ್ನದ ಮೇಲೆ ಮಾತುಕತೆ ಕಡಿಮೆ; ಸಂಜೆಗೆ ಪ್ರಾಣವೂ ಹೋಯಿತು. ಕಲ್ಲಿನಂತಿದ್ದರು; ಧೂಳಿಯಂತೆ ಹಾರಿಹೋದರು.

**ನಾಗ:**—ಸರಿ; ಮನೆಯಲ್ಲಿ ಯಾರಿದ್ದಾರೆ?

**ಮಂಜು:**—ಎಲ್ಲರೂ ಇದ್ದಾರೆ ಬುದ್ಧಿ. ನಿನ್ನೆಯೇ ರಾತ್ರಿಯಲ್ಲಿ ಶಿವಣ್ಣನವರು, ಗಂಗಣ್ಣನವರು, ಎಲ್ಲರೂ ಬಂದಿದ್ದರು. ಈಗ ಕೊಂಡೆಯವರೂ ಹೋದರು. ದೂರದಲ್ಲಿ ನೋಡಿದೆ.

**ನಾಗ:**—ನಮ್ಮ ಹುಡುಗ ನಾಣಪ್ಪನೂ ಇದ್ದಾನೆಯೆ?

**ಮಂಜು:**—ಇಲ್ಲ; ಅವರು ಆ ದಿನ ಮಾತ್ರ ಕರಿಯಂಗಳದಲ್ಲಿದ್ದರು. ಮರುದಿನವೆ ಹೋಗಿದ್ದಾರಂತೆ. ಎಲ್ಲಿಗೆಂದು ಯಾರಿಗೂ ಗೊತ್ತಿಲ್ಲ; ಇದ್ದರೆ, ಗಂಗಣ್ಣನವರಿಗೆ ಮಾತ್ರ ಗೊತ್ತಿರಬಹುದಂತೆ.

**ನಾಗ:**—ಅದಿರಲಿ; ಇಲ್ಲಿಗೆ ಯಾಕೆ ಬಂದೆ?

**ಮಂಜು:**—ಸುಮ್ಮನೆ; ನಿಮಗಿದನ್ನು ತಿಳಿಸಿಬಿಡುತ್ತೇನೆಂದು ನಾನೇ ಬಂದೆ. ನಿಮಗೂ ಅಯ್ಯನವರಿಗೂ ಒಂದೇ ಜೀವವಲ್ಲವೆ?

**ನಾಗ:**—(ನಕ್ಕು) ಅಲ್ಲ; ಒಂದೇ ಜೀವವಾಗುತ್ತಿದ್ದರೆ ನಾನೂ ಕೂಡ ಹಾಗೆಯೆ ಆಗಬೇಕಿತ್ತೀಗ. ಹೋಗಲಿ; ದಹನವಾಯಿತೊ?

**ಮಂಜು:**—ಆಗಿರಲಿಲ್ಲ; ಎಲ್ಲ ತಯಾರಾಗುತ್ತಿತ್ತು. ಈಗಲೆ ಹೋದರೆ ನೋಡಬಹುದು.

**ನಾಗ:**—(ಎಣಿಸಿ) ಇನ್ನೇನು ನೋಡುವುದು? ನೋಡುವುದಾದರೂ ಹೇಗೆ? ಹೋಗುವಾಗ ಎಲ್ಲ ಕಳೆದುಹೋಗಲೂ ಬಹುದು.

**ಮಂಜು:**—ಅದೂ ಹೌದು.

**ನಾಗ:**—ನಾಳೆ ಮಧ್ಯಾಹ್ನ ಮೇಲೆ ಒಂದು ಕಡೆಗೆ ಹೋಗಬೇಕಾಗಿದೆ. ಬರುವ ವರೆಗೆ ನಿನ್ನ ಹೆಂಡತಿಯನ್ನು ಕಳುಹಿಬಿಡು ರಾತ್ರಿಗೆ.

**ಮಂಜು:**—ಆಯಿತು. ಆದರೆ ಬರುವಾಗ ಎಷ್ಟು ದಿವಸವಾದೀತು?

**ನಾಗ:**—ಹೇಳಲಿಕ್ಕಾಗುವುದಿಲ್ಲ; ಆದರೂ ಬೇಗನೆ ಬರಬೇಕೆಂದು ಭಾವಿಸಿದ್ದೇನೆ.

**ಮಂಜು:**—ಆಯಿತು ಬುದ್ಧಿ.

ಅಂಗಳಕ್ಕಯ್ದಿ ಐದು ರೂಪಾಯಿಯನ್ನು ಮಂಜುವಿನ ಕಯ್ಯಲ್ಲಿಟ್ಟು 'ಇದು ನಿನ್ನ ಹೆಂಡತಿಗೆ ಸಂಬಳ" ಎಂದನು.

ಆಶ್ಚರ್ಯದೊಡನುಂಟಾದ ಸಂತೋಷದಿಂದ ಮಂಜು ಹೊರಟು ಹೋದನು. ರಾಮಯ್ಯನ ಮರಣವಾರ್ತೆಯನ್ನು ಕೇಳಿದುದರಿಂದ, ನಾಗಪ್ಪಯ್ಯನು ಸ್ನಾನಮಾಡಿದನು. ಊಟವಾದ ಮೇಲೆ ಕ್ರಮದಂತೆ ತನ್ನ ಕೊಟ್ಟಿಗೆಗಯ್ದಿ ಮಲಗಿಕೊಂಡನು. ರಾತ್ರಿ ಕಳೆಯಿತು; ಬೆಳಗಾಯಿತು. ಗಂಟೆ ಎಂಟುವರೆಯಾದರೂ ಕೊಟ್ಟಿಗೆಯ ಬಾಗಿಲು ಬಲಿದುಕೊಂಡೇ ಇತ್ತು. "ದಣಿದುದರಿಂದ, ನಿನ್ನೆಯಂತೆ ಈ ಹೊತ್ತೂ ನಿದ್ರಿಸುತ್ತಿರಬಹುದು" ಎಂದೆಣಿಸಿದಳು ಪಾಕಮ್ಮ. ಸ್ವಲ್ಪ ಸಮಯ ಕಳೆದ ಮೇಲೆ ಹತ್ತಿರಹೋದಳು; ಬೀಗ ಬಲಿದಿತ್ತು. ಆದರೆ ಬೀಗದ ಕೈ, ಪಲ್ಲೆಯಲ್ಲಿ ತಗುಲಿಸಿಕೊಂಡಿತ್ತು. ಆಶ್ಚರ್ಯವಾಯಿತು; ಒಳಗಯ್ದಿದಳು. ಯಾರೂ ಇರಲಿಲ್ಲ; ಸಂದೇಹವಾಯಿತಾಕೆಗೆ. "ಮಧ್ಯಾಹ್ನದ ಮೇಲೆ ಎಲ್ಲಿಗೋ ಹೊರಡಬೇಕೆಂದಿದ್ದಾರಷ್ಟೆ.?" ಎಂಬ ಎಣಿಕೆ ಒಂದೆಡೆಯಲ್ಲಿ; "ಹೇಳದೆ ಹೋಗಲಿಕ್ಕಿಲ್ಲವಷ್ಟೆ"? ಎಂಬುದು ಮತ್ತೊಂದೆಡೆಯಲ್ಲಿ; ಇವುಗಳೆ ಆ ಸಂದೇಹದ ಇಕ್ಕವಲುಗಳು. ಮಾಡುವುದೇನು? ಬೀಗಹಾಕಿ ಮನೆಗಯ್ದಿದಳು. ನಡು ಹಗಲು ದಾಟಿತು; ಸಂಜೆ ಸಮೀಪಿಸಿತು. ನಾಗಪ್ಪಯ್ಯನು ಬಂದಿರಲಿಲ್ಲ. ಹೇಳಿದಂತೆ ಹೋಗಿರಬಹುದೆಂದು ಭಾವಿಸಿದಳು. ದಿನಗಳು ಹೊರಳಿ ವಾರ; ವಾರಗಳು ಹೊರಳಿ ತಿಂಗಳೂ ಆಯಿತು. "ಏನು, ಮಗನಂತೆ ತಂದೆಯ ಅವಸ್ಥೆಯೂ ಆಯಿತೆ?" ಎಂದೆಣಿಸಿದಳು. ಏನಾದರೂ ನಾಗಪ್ಪಯ್ಯನ ಸುದ್ದಿಯ ಸುಳಿವೇ ಇಲ್ಲ. ಕೆಲಗಾಲವೂ ಕಳೆದು ಅವನ ಹೆಸರೂ ಮಾಸಿಹೋಯಿತು.

---

೧೦.

ಗಂಗಾಧರನೀಗ ಬ್ರಹ್ಮಚಾರಿಯಲ್ಲ; ಸಂಸಾರಿ. ಪಿತ್ರಾರ್ಜಿತವಾದ ಅವನ ಕಾಡೂರಿನ ಜಮೀನನ್ನೆ, ಬಾಗಿಗೆ ಬಳುವಳಿಯಾಗಿ ಕೃಷ್ಣ ರಾಯನು ಕೊಟ್ಟಿದ್ದನು. ದೋಪಿಯ ಎಣಿಕೆಯಂತೆ ಅಲ್ಲಿಯೆ ಹೊಸತಾಗಿ ಮನೆಯನ್ನು ಕಟ್ಟಿಸಿ ಅದರಲ್ಲಿ, ಗಂಗಾಧರನು ಒಕ್ಕಲಾಗಿ ದ್ದನು. ಅದರಿಂದಾಗಿ, ನಾಗೂರಿನಲ್ಲಿ ನಾಗುತ್ತಿದ್ದ ಸಾಲೆಗೆ ದಿನಂ ಪ್ರತಿಯೂ ಹೋಗಲಿಕ್ಕಾಗುತ್ತಿದ್ದಿಲ್ಲ. ಗಂಗಾಧರನ ಕೆಲಸವೂ ಕೃಷ್ಣ ರಾಯನ ತಲೆಯ ಮೇಲಾಗಿತ್ತು. ಗಂಗಾಧರನೂ ಮೂರು ನಾಲ್ಕು ದಿನಗಳಿಗೊಮ್ಮೆ ಅಲ್ಲಿಗೆ ಹೋಗಿ, ಒಂದು ದಿವಸವಿದ್ದು ಬರುತ್ತಿದ್ದನು. ಗೋವಿಂದಾಚಾರ್ಯನು ನಾಗೂರಿನಲ್ಲಿಯೇ ಸಕುಟುಂಬವಾಗಿ ಮನೆ ಮಾಡಿಕೊಂಡಿದ್ದನು. ಬಾಗಿಗೆ ಒಂದು ಗಂಡು ಮಗು ಹುಟ್ಟಿತ್ತು. ದೋಪಿಯ ಆನಂದವನ್ನಿಡಲಿಕ್ಕೆ ಜಾಗವೇ ಇರಲಿಲ್ಲ. ಅನಾಥೆಯಾದ ನಾಗಪ್ಪಯ್ಯನ ಹೆಂಡತಿಯನ್ನು, ಕನಿಕರದಿಂದ ಮನೆಯಲ್ಲೆ ರಕ್ಷಿಸುತ್ತಿ ದ್ದನು. ಹೆಚ್ಚಾಗಿ, ಅವಳಿಗೆ, ಮಗುವನ್ನಾಡಿಸುವ ಕೆಲಸ. ಅದರಿಂದ, ಆಗಾಗ ನಾಗಪ್ಪಯ್ಯನ ನೆನಪಾಗುತ್ತಿತ್ತು ಗಂಗಾಧರನಿಗೆ. "ಅವಿ ಚಾರಿಯಾಗಿ ದುರ್ಮಾರ್ಗಕ್ಕಿಳಿದನು; ಎಲ್ಲಿ ಹೋಗಿ ಯಾವ ಬನ್ನಕ್ಕೆ ಬಲಿಯಾದನೊ?" ಎಂಬ ಭಾವನೆ ಕುಕ್ಕುತ್ತಿತ್ತು. ಆದರೆ "ನಾರಾಯಣಾ ನಂದ (ನಾಣಪ್ಪ)ನಾದರೂ, ಈ ರೀತಿಗೆ ಬರುತ್ತಿರುವುದು ಆ ನಾಗಪ್ಪಯ್ಯ ನಿಗೇ ಕೀರ್ತಿಯಷ್ಟೆ" ಎಂಬೆಣಿಕೆ ಹಿಂದಿನ ನೋವನ್ನು ಮಾಸಿಸುತ್ತಿತ್ತು.

ಪ್ರಾತಃಕಾಲದ ಏಳುವರೆ ಗಂಟೆ. ದೋರೆ ತೊಳೆದು, ಯಾವುದೋ ಒಂದು ಪುಸ್ತಕವನ್ನೋದುತ್ತ, ಗಂಗಾಧರನು ಕುರ್ಚಿಯ ಮೇಲೆ ಕುಳಿತಿ ದ್ದನು. ಕಾಫಿಗಾಗಿ "ಅಣ್ಣಾ" ಎಂದಳು ದೋಪಿ. ಓದುತ್ತಿದ್ದ ವಿಷಯದ ರಸವು ಎದೆದುಂಬಲಿಕ್ಕಾಗಿ, ಇತರೇಂದ್ರಿಯಗಳ ತೂಬೆಲ್ಲ ಬಲಿಯಲ್ಪ ಟ್ಟಿತ್ತು. ಕರೆದ ಸದ್ದು ಕಿವಿಯೊಳಗೆ ನುಸುಳಲೇ ಇಲ್ಲ. ಮಗುವನ್ನೆತ್ತಿ ಕೊಂಡು ಬಂದು ಬಾಗಿ, ಗಂಗಾಧರನ ಕುರ್ಚಿಗೆ ತಾಗಿ, ಹಿಂದುಗಡೆ

ನಿಂತಳು. ಒಂದಿಷ್ಟು ಕುರ್ಚಿಯನ್ನಲುಗಿಸಿದಳು. ಅವನಿಗೆ ಗೊತ್ತಾಗಲಿಲ್ಲ. ಮೆಲ್ಲನೆ ಮಗುವನ್ನು, ಗಂಗಾಧರನ ತಲೆಯ ಕಡೆಗೆ ಬಾಗಿಸಿದಳು. ತಲೆ ಗೂದಲನ್ನು ಸೆಳೆಯುತ್ತಾ ಮಗು ಕಾಡತೊಡಗಿತು. ಹಾಗಾಗಲಿಕ್ಕೆ, ಇಂಥದೇ ಕಾರಣವೆಂದು ಗೊತ್ತಾದರೂ, ಅವನು ತನ್ನ ಕೆಲಸವನ್ನುಳಿಯ ಲಿಲ್ಲ. "ಒಮ್ಮೆ ತಲೆಯನ್ನು ನೂಕುವುದು; ಮತ್ತೊಮ್ಮೆ ಸೆಳೆವುದು" ಈ ಕಾಟ ಸುರುವಾಯಿತು ಆ ಮೇಲೆ. ಅದನ್ನಾದರೂ ಸಯಿಸ್ಸಿ ಕೊಂಡನಲ್ಲದೆ, ಕೂತಲ್ಲಿಂದೇಳಲಿಲ್ಲ. ಒಮ್ಮೆ ತಲೆಯನ್ನು ಪುಸ್ತಕದತ್ತ ಬಾಗಿಸಿ, ಅಡಿಗಣ್ಣನ್ನು ಮಾತ್ರ ಒಲೆಯಿಸಿ ನೋಡಿದನು; ತೊಲಗಿ ಹೋದ ಮಗುವಿನ ಕಯ್ಗೆ, ಕೂದಲು ತಗಲುವಂತೆ ಅಣಿಮಾಡುತ್ತಿದ್ದಳು ಬಾಗಿ. ಮೊದಲಿನ ಕಾಟ ಮತ್ತೆ ಸುರುವಾಯಿತು. "ಏನೋ ಚೆನ್ನ, ನಾನೇನು ಕೇಳುವವರಿಲ್ಲದ ತಬ್ಬಿಲಿಯೆಂದು ಭಾವಿಸಿದೆಯಾ? ನಿನ್ನಂತೆ ನನಗೂ ಅಮ್ಮನಿದ್ದಾಳೆ." ಎಂದನು ಗಂಗಾಧರನು. ಎಸಳುಬ್ಬಿದ ಮುಗುಳ್ನಗೆ ಯೊಂದು, ಬಾಗಿಯ ಮೋರೆಯಲ್ಲಿ ಮೂರ್ತಿಗೊಂಡಿತು. ಪುನಃ ಕರೆಯುಲಿಕ್ಕೆಂದು, ಬಾಗಿಲ ಬಳಿಗೆ ಬಂದ ದೋಪಮ್ಮ, ಈ ವಿಲಾಸವನ್ನು ನೋಡಿದಳು; ಮಗನ ಆ ಮಾತನ್ನು ಕೇಳಿದಳು. ಕೂಡಲೇ ಹತ್ತಿರಕ್ಕೆ ಬಂದು "ಅಬ್ಬೊ, ನನ್ನ ಮಗನನ್ನು ಪೀಡಿಸುತ್ತೀಯಾ?" ಎಂದು ಹೆದರಿಸು ವಂತೆ ನೋಡಿದಳು. ಅಜ್ಜಿಯ ಕಣ್ಣಿನ ವರೆಗೆ ಬಾಗಿತು ಮಗು. ಅವಳು ಹಾಗೇ ನಿಂತಿದ್ದಳು. ಬಾಗಿದ ಮಗು "ಪುಕ್" ಎಂದು ಉಗುಳಿಬಿಟ್ಟಿತು. ಜೊಲ್ಲೆಲ್ಲ ದೋಪಿಯ ಮೋರೆಯಲ್ಲಿ; ಅಜ್ಜಿಯ ಆನಂದಕ್ಕೆ ಪಾರವಿಲ್ಲ. 'ಹುಂ, ಪಂಚಕವ್ಯವನ್ನು ತಳಿದಾಯಿತು' ಎಂದು ನಕ್ಕಳು. "ಯಾಕಪ್ಪಾ, ಇಷ್ಟೆಲ್ಲ ತಂಟೆ?" ಎಂದನು ಗಂಗಾಧರ. "ತಂಟೆಯಲ್ಲ; ಕರೆವುದಿದು. ಅವ ನಿಗೆ ಬಾಯಿಯ ಕೆಲಸವೂ ಕಯ್ಯಲ್ಲಾಗಬೇಕಷ್ಟೆ." ಎಂದು ಬಾಗಿಯು ಮರುಮಾತು. "ಆಗಲಿ; ನೀನೇನು ಉಪಾಧ್ಯಾಯಿನಿಯೆ?" ಎಂಬ ಪ್ರಶ್ನೆಗೆ "ಉಪಾಧ್ಯಾಯನ ಹೆಂಡತಿಗೆ ಆ ಹೆಸರು ಸಲ್ಲದೆಂದು ನೀವೇ ಹೇಳಿದ್ದೀ ರಲ್ಲವೆ?" ಎಂದು ಉತ್ತರ. "ಅದು ಕಲಿಸುವ ಕೆಲಸವಿಲ್ಲದವಳಿಗೆ. ಕಲಿಸುತ್ತಿರುವ ಉಪಾಧ್ಯಾಯನ ಹೆಂಡತಿಗೆ, ಅದೇ ಸಲುವಳಿಯಾದೀತು"

ಎಂದು ಗಂಗಾಧರನ ಹೇಳಿಕೆ. ಕಾಡೂರಿಗೆ ಬಂದಿದ್ದ ಲಕ್ಷ್ಮಮ್ಮನೂ ಈ ವಿಲಾಸವನ್ನು ನೋಡುತ್ತ ಆನಂದಗೊಳ್ಳುತ್ತಿದ್ದಳು. ಅಷ್ಟರಲ್ಲಿ ಏಕನಾದದ ನಾದವೊಂದು ಕೇಳತೊಡಗಿತು. ಅಂಗಳವನ್ನೇರಿದ ವ್ಯಕ್ತಿ ಹನಿಕಾಲಲ್ಲಿ ನಿಂತು ಹಾಡತೊಡಗಿತು.

ಮೋಹನ ರಾಗ—ಅಟತಾಳ:

ಮಾಡಿದುದನುತಿಂದೆ ತೀರಬೇಕೆಂದೆಂಬ ।
ನಾಡನುಡಿಯು ಕಡೆಗಣಿಸಿದೆನು ॥
ನಾಡುನಾಡನ್ನಲೆ ದಾಡಿದರೇನಾಯ್ತು
ಮಾಡಿದುದೇ ಬಟ್ಟಲ್ನಾಡಿ ಕೈಗೊದಗಿತು ॥ ೧ ॥

ಅಂತರಂಗದ ನೂಲೊಳ್ ಬಹಿರಂಗ ಜವನಿಕೆ
ಯಂತಗುಲಿಸೆ ನೆಲಂರಂಜಿಪುದು ।
ತಂತುವೊಂದೆಡೆ ತೆರೆಯೊಂದೆಡೆಯೇನೆ ರಂಗ
ಕೆಂತುರಂಜನೆ ಬರಿ ಸಂತೆಯೆ ಸಂಸಾರ ॥ ೨ ॥

ಕಳ್ಳಿನ ಕೊಡವನು ಕಾಶಿಗೊಯ್ದುರದೇನು
ಕಳ್ಳು ಗಂಗಾಮೃತವಾಗುವುದೆ? ।
ಚೆಲ್ಲಿತೊಳೆದು ತುಂಬಿಸಿದೆನೆಷ್ಟೋ ಸಾರಿ
ತಳ್ಳಲಾರೆನು ಬೆನ್ನ ಬಿಡದಿಪ್ಪ ನಾತವ ॥ ೩ ॥

ಇಂದ್ರಿಯಗಳಲಿ ಪೊದರುಬೆಳೆದಾಸೆಯು
ನೊಂದೊಂದಾಗಿ ಸವರತೊಡಗೆ ।
ಒಂದಕೊಂಬತ್ತಾಗಿ ಕೊನರುವುವೆಂತೆಣಿಲ
ದಿಂದ ಬೇರನು ಕೀಳಲರಿಯದೆ ಬರಿದಾದೆ ॥ ೪ ॥

ನಾರಾಯಣ ಎಂದು ತಲೆಯುಲ್ಲಿ ಕಯ್ಯಿಟ್ಟು
ಊರೂರ ತಿರುಗಿದೆ ಕರಗಿದೆನು,
ನಾರಾಯಣನೆಲ್ಲಿ ನಾನೆಲ್ಲಿ ನೀನೆಲ್ಲಿ
ತೋರದ ಕಣ್ಣಿಗಂಜಿಸವ ನಿಡುವನೆಲ್ಲಿ ॥ ೫ ॥

ಹಾಡು ನಿಂತಿತು. ಹೆಂಗುಸರೆಲ್ಲ ಭಕ್ತಿಮಾರ್ಗದ ಆ ಹಾಡನ್ನು ಕೇಳಿ ತಲೆದೂಗಿದರು. ಬಾಗಿಯ ಕಯ್ಯಲ್ಲಿದ್ದ ಮಗು ಆ ಭಿಕ್ಷುಕನನ್ನು ನೋಡಿ "ಪೂ" ಎನ್ನುತ್ತಾ ಜೊಲ್ಲು ಗೆಪರಿತು. 'ಉಗುಳು, ಹಾಗೆಯೆ

ಇನ್ನೊಮ್ಮೆ ಉಗುಳು ನನ್ನ ಮೋರೆಗೆ' ಎಂದು ನಗುತ್ತಾ ಹೇಳಿದನು ಭಿಕ್ಷುಕನು. ಆಗ ಅರ್ಧಸೇರು ಅಕ್ಕಿಯನ್ನು ಕೊಂಡು ಬಂದು, ಅವ ನೆದುರಿನಲ್ಲಿ ನಿಂತು, ದೋಪಿ ಕೈನೀಡಿದಳು.

**ಭಿಕ್ಷುಕ**:—ಅಮ್ಮಾ ಇದು ಬೇಡ; ಈ ಹೊಟ್ಟೆಯನ್ನು ಹೊರೆಯು ಲಿಕ್ಕಾಗೆಯೇ ಬೇಡುವುದಲ್ಲ; ನಾನು ಬೇಡುವ ಭಿಕ್ಷೆಯೇ ಬೇರೆ.

**ದೋಪಿ**:—ಮತ್ತೇನದು?

**ಭಿಕ್ಷುಕ**:—ಕೊಡುತ್ತೀರೊ?

**ದೋಪಿ**:—ನನಗೆ ಸಾಧ್ಯವಾದರೆ ಕೊಡುತ್ತೇನಪ್ಪಾ?

**ಭಿಕ್ಷುಕ**:—"ನಿಮಗಲ್ಲದೆ ಮತ್ತಾರಿಗೆ ಸಾಧ್ಯ? ಅದಕ್ಕಾಗಿಯೇ ಊರೂರು ಸುತ್ತಿ ಇಲ್ಲಿಗೇ ಬಂದೆನು" ಎಂದು ಗಂಗಾಧರನನ್ನು ಮತ್ತೊಮ್ಮೆ ನೋಡಿದನು.

ಆ ವರೆಗೆ, ಮಾತಾಡದೆ ಅವನನ್ನೇ ನಿರೀಕ್ಷಿಸುತ್ತಿದ್ದ ಗಂಗಾ ಧರನು "ಕೊಡುತ್ತೇನೆ ಎಂದು ಹೇಳಮ್ಮಾ" ಎಂದನು. ಅದಕ್ಕನು ವಾಗಿ "ಆಯಿತು; ಅದೇನು?" ಎಂದು ಕೇಳಿದಳು ದೋಪಿ. ಕೂಡಲೆ ಭಿಕ್ಷುಕನು ಅವಳಿಗೆ ನಮಸ್ಕರಿಸಿ "ನನ್ನ ಸಹಸ್ರಾಪರಾಧಗಳನ್ನು ಕ್ಷಮಿ ಸಿರಿ" ಎಂದು ಬೇಡಿಕೊಂಡನು. ಹೇಳಿದ ಮಾತಿಗಾಗಿ "ಆಯಿತು" ಎಂಬ ಮಾತು ಅವಳ ಬಾಯಿಂದ ಹೊರಟಿತು. ಆದರೆ, ಭಿಕ್ಷುಕನ ಮಾತಿನ ಹೊಲಬೇ ಆಗದೆ ಕಳವಳಗೊಂಡು ಗಂಗಾಧರನನ್ನು ನೋಡಿ ದಳು. "ಏನಮ್ಮ, ಅದು ನಾಗಪ್ಪಯ್ಯನಲ್ಲವೆ?" ಎಂದನು ಗಂಗಾಧರನು. ಎಲ್ಲರಿಗೂ ಆಶ್ಚರ್ಯದ ಮೇಲೆ ಆಶ್ಚರ್ಯ.

**ನಾಗ**:-ಏನಮ್ಮ, ಆಶ್ಚರ್ಯಗೊಳ್ಳುತೀರಿ? ಹಲಗಾಲವಾಗಿ ಗುರುತು ಸಿಕ್ಕದಂತಾಗಿರಬಹುದು ಸ್ವರೂಪ. ಆದರೆ ಈ ಕಾಕಾಕ್ಷಿಯ ಕಣ್ಣಿಂದ ಲಾದರೂ ಗೊತ್ತಾಗಲಿಲ್ಲವೆ?

**ದೋಷಿ:**—ಕಣ್ಣು ಸರಿಯಾಗಿ ಕಾಣುವುದಿಲ್ಲವೀಗ. ಮಾತ್ರವಲ್ಲ; ನೀನು ತೀರಿಹೋದೆಯೆಂಬ ಸುದ್ದಿಯೂ ಹಬ್ಬಿದ ಕಾರಣ, ಕಾಣುವುದನ್ನೂ ನಂಬುವುದು ಹೇಗೆ? ಕಣ್ಣಿನಂತೆ ಕಣ್ಣುಗಳೆಷ್ಟೋ ಇರುತ್ತವೆ.

**ನಾಗ:**—ಹೇಗಾಗಬೇಕೆಂದು ತಮಗೆ ತೋರುತ್ತದೆಯೋ, ಅದರಂತೆ ಸುದ್ದಿಯನ್ನೂ ಕಟ್ಟುತ್ತಾರಮ್ಮಾ ಜನರು. ನನಗೆ ಗೊತ್ತಿಲ್ಲವೆ? ಎಷ್ಟೋ ಸುದ್ದಿಗಳನ್ನು ಕಟ್ಟಿದ್ದೇನೆ. ಎಷ್ಟೋ ಸುದ್ದಿಗಳನ್ನು ಕಳಚಿದ್ದೇನೆ. ಅದಿರಲಿ; ಈ ಮನುಷ್ಯನೆ ವಿಶ್ವಾಸಪಾತ್ರನಲ್ಲ; ಇವನ ಕಣ್ಣನ್ನು ಹೇಗೆ ನಂಬುವುದು? ಸರಿಯದು.

**ದೋಷಿ:**—ನಾಗಪ್ಪಯ್ಯ, ಕಳೆದು ಹೋದುದನ್ನೆಲ್ಲ ಸುಮ್ಮನೆ ಕೆದರಬೇಡ.

**ನಾಗ:**—ಆಯಿತಮ್ಮಾ, ಮೊದಲು ನೀವು ಕ್ಷಮಿಸಿದುದು ನಾನಾರೆಂಬು ಗೊತ್ತಾಗದೆ. ನಿಮ್ಮ ಮಾತನ್ನು ಕೇಳಿದರೆ, ಅದಕ್ಕಾಗಿ ಪಶ್ಚಾತ್ತಾಪವಾಗಿಲ್ಲವೆಂದೇ ತೋರುತ್ತದೆ.

**ದೋಷಿ:**—ನಮ್ಮಲ್ಲೆ ಬಳೆದು ದೊಡ್ಡವನಾದ ನೀನು ತಿಳಿವಿನ ದಾರಿಯನ್ನು ಹಿಡಿದ ಮೇಲೂ ಪಶ್ಚಾತ್ತಾಪವೆ?

ಏನೋ ಕೆಲಸದಲ್ಲಿದ್ದ ಪಾಕಮ್ಮನೂ ಈ ಸುದ್ದಿಯನ್ನು ಕೇಳಿ ಬಂದಳು. ಮೊದಲಿನ ಮುಖವೆ ಅಲ್ಲದುದರಿಂದ, ಆಕೆಗೂ ನಾಗಪ್ಪಯ್ಯನ ಗುರುತು ಫಕ್ಕನೆ ಸಿಕ್ಕುತ್ತಿರಲಿಲ್ಲವೋ ಏನೋ? ಆದರೆ, ನಡೆದ ಸಂಘಟನೆಯನ್ನೆಲ್ಲ ತಿಳಿದೇ ಅವಳು ಬಂದುದು. ಬಂದವಳು ಕಣ್ಮುಚ್ಚದೆ ನಾಗಪ್ಪಯ್ಯನನ್ನೆ ನೋಡುತ್ತಾ ನಿಂತುಕೊಂಡಳು.

**ನಾಗ:**—ಅಮ್ಮಾ, ಅನಾಥೆಯಾದ ಈಕೆಯನ್ನೂ ಕಾಪಾಡಿದಿರೊ? ನಾನು ಕಲಿಪುರುಷ; ನೀವು ಲಕ್ಷ್ಮೀದೇವಿ.

**ದೋಷಿ:**—ನಾನೇನು ಮಾಡಿದ್ದೇನೆ? ಪಾಕಮ್ಮನನ್ನು ಮೊದಲು ಕರಕೊಂಡು ಬಂದುದು ಶಿವರಾಯ. ನಾವು ಇಲ್ಲಿಗೆ ಬರುವಾಗ ನಮ್ಮೊಟ್ಟಿಗೆ ಬಂದಳು.

**ನಾಗ:**—(ಪಾಕವ್ವನನ್ನು ನೋಡಿ) ನಿನಗೂ ಅಪರಾಧದ ಮೇಲೆ ಅಪರಾಧವನ್ನೆಸಗಿದೆನು. "ಎಲ್ಲವನ್ನೂ ಕ್ಷಮಿಸಿ ಬಿಡು" ಎಂದು ಬೇಡ ಬಹುದೆ?

**ಪಾಕ:**—"ಯಾಕೆ ಹಾಗೆನ್ನುತ್ತೀರಿ. ಎಲ್ಲವೂ ತಲೆಯಲ್ಲಿ ಬರೆದ ಬರಹ" ಎಂದು ಅತ್ತಳು.

**ನಾಗ:**—ಅಳಬೇಡ. ಕಡೆಗಾದರೂ ನಿನ್ನ ಆ ತಲೆಬರಹವೆ, ನಿನ್ನನ್ನು ಒಳ್ಳೆಯ ದಾರಿಗೆ ತಿರುಗಿಸಿತು; ನನ್ನನ್ನು ಊರಿಂದೋಡಿಸಿ ನಿನ್ನನ್ನು ಈ ದೋಪವ್ವನವರ ಸೇವೆಗಾಗಿ ನಿಯಮಿಸಿತು. ನನ್ನೊಟ್ಟಿಗಿದ್ದಾಗ ನಿನ್ನ ಬಾಯಿಂದ ಇಂಥ ಮಾತುಗಳು ಹೊರಟಿದ್ದುವೆ?

**ಪಾಕ:**—ಏನೋ? ನನಗೊಂದೂ ತಿಳಿಯದು.

**ಗಂಗಾ:**—ಅದುದೆಲ್ಲ ಒಳ್ಳೆಯದಕ್ಕಾಗಿಯೆ ಪರಿಣಮಿಸಿತೆನ್ನುವ.

**ನಾಗ:**—ಎಲ್ಲದಕ್ಕೂ ಕಾರಣವೆಂದರೆ ನಿಮ್ಮ ಕೈ, ದೇವರ ದಯೆ.

**ಗಂಗಾ:**—ಯಾವುದೂ ಆಗಲಿ; ಇನ್ನೂ ಅಂಗಳದಲ್ಲಿಯೇ ನಿಂತಿದ್ದೀರಷ್ಟೆ? ಒಳಗೆ ಬನ್ನಿರಿ.

**ನಾಗ:**—ಅದೊಂದು ಮಾತನ್ನು ಹೇಳಬಾರದು; ಈ ಮೈ ಹೊರಗೇ ಇರಬೇಕು.

**ಗಂಗಾ:**—ಅದೇನು?

**ನಾಗ:**—ಉಂಡುಟ್ಟು ಬಳೆದ, ನಿಮ್ಮ ಆ ಮನೆಯ ಪಂಚಾಂಗವನ್ನೆ ಕಿತ್ತುಹಾಕಲಿಕ್ಕೆ ಯತ್ನಿಸಿದುದಂತಿರಲಿ; ಕಡೆಗೆ, ಇಂಥ ನಿಮ್ಮನ್ನೂ ಆ ಪಾತಾಳಗುಂಡಿಗೆ ತಳ್ಳಿಸಿದ ಮೈಯಲ್ಲವೆ ಇದು? ಇದು ಒಳಗೆ ಹೋಗಬಾರದು.

**ಗಂಗಾ:**—ಬರಿಯ ಮೈ ಏನು ಮಾಡುತ್ತದೆ? ಜೀವವಿಲ್ಲದ ಮೈಯೆಂದರೆ ಹೆಣವೆ ಸರಿ.

**ನಾಗ:**—ಇದು ಜೀವವಿದ್ದ ಹೆಣ.

**ಗಂಗಾ:**—ಈ ಮಾತನ್ನು, ಒಂದುವೇಳೆ ಮೊದಲಾದರೆ ಹೇಳಬಹುದಾಗಿತ್ತು. ಇನ್ನೂ ಹೀಗೆನ್ನುವುದಾದರೆ ನಿಮಗೂ ಅಮ್ಮನವರಿಗೂ ನಡೆದ ಮಾತುಗತೆಗೆ ಬೆಲೆ ಏನು?

**ನಾಗ:**—ಹಾಗಾದರೆ, ನನ್ನ ಪಾಪವೂ ನಿವೃತ್ತಿಯಾಗಬಹುದೆ?

**ಗಂಗಾ:**—ಸಂದೇಹವೇನು? ತೊಳೆಯಲಾರದ ಕೆಸರಿಲ್ಲ; ನಿವೃತ್ತಿಯಾಗದ ಪಾಪವಿಲ್ಲ.

**ನಾಗ:**—ಆ ನಿವೃತ್ತಿ ಯಾವುದು?

**ಗಂಗಾ:**—ಮನಃಪೂರ್ವಕವಾದ ಪಶ್ಚಾತ್ತಾಪ; ಅದನ್ನು ನೀನು ಪಡುತ್ತಲೆ ಇರುತ್ತೀಯಷ್ಟೆ.

**ನಾಗ:**—ಪಶ್ಚಾತ್ತಾಪದಿಂದ ಪಾಪ ನಿವೃತ್ತಿಯಾಗುವುದು ಹೇಗೆ?

**ಗಂಗಾ:**—ಹಿಂದೆ ಮಾಡುತ್ತಿದ್ದುದು ಪಾಪ ಕಾರ್ಯವೆಂದು ತಿಳಿದುದರಿಂದ ಹೃದಯದಲ್ಲುಂಟಾಗುವ ತಾಪವೇ ಪಶ್ಚಾತ್ತಾಪವೆಂಬುದು. ತಪ್ಪುಗೆಲಸಕ್ಕೆ ಕಾರಣವಾದ ತನ್ನ ನಡತೆಯನ್ನೆ, ಎಡೆಬಿಡದೆ ತಪಿಸುತ್ತಿರುವುದು ಆ ತಾಪವು. ಅಂಥ ತಾಪವು ಕೆಲಗಾಲ ಸಾಗಬೇಕು; ಪುಟಕ್ಕಿಟ್ಟ ಬೆಟ್ಟೆಬಂಗಾರದಂತೆ, ನಡತೆಯೆಂಬುದು ಹದಿನಾರು ಬಣ್ಣದ ಬಂಗಾರವಾಗುವುದು.

**ನಾಗ:**—"ಹಾಗಾದರೆ, ನನ್ನ ಪಾಪಕ್ಕೂ ನಿವೃತ್ತಿ ಇದೆಯೆಂದಾಯಿತು. ದೇವರು ದೊಡ್ಡವನು" ಎಂದು ಜಗಲಿಯನ್ನೇರಿ ಅಲ್ಲೆ ಕುಳಿತನು.

**ಗಂಗಾ:**—ಯಾಕೆ ಅಲ್ಲಿಯೇ ಕುಳಿತಿರಿ! ಒಳಗೆ ಹೋಗುವ.

**ನಾಗ:**—ಬೇಡ. ಎಷ್ಟೋ ದಿವಸಗಳಿಂದ ಸರಿಯಾಗಿ ಸ್ನಾನವೂ ಇಲ್ಲದ ಈ ಮೈ; ಈ ಬಟ್ಟೆ; ಇವುಗಳನ್ನು ಇನ್ನೂ ಒಳ ಹೊಗಿಸಬೇಡಿರಿ. ನಮಸ್ಕಾರ. ನೀವು ಒಳಗಯ್ದಿ ಕಾಫಿಗುಡಿದು ಬನ್ನಿರಿ. ನನಗಿಷ್ಟು ಇಲ್ಲಿಗೆ ಕಳುಹಿಸಿ ಬಿಡಿರಿ.

**ಗಂಗಾ:**—ಅವ್ವಾ, ಹಾಗಾದರೆ ನನಗೂ ಇಲ್ಲಿಯೆ ಆಗಲಿ.

ಅಲ್ಲಿಯೆ ಫಲಾಹಾರವಾಯಿತು. ಇಬ್ಬರೂ ಕೈ ದೊಳೆದರು. ನಾಗಪ್ಪಯ್ಯನು ಎದ್ದು "ಇನ್ನೊಮ್ಮೆ ಕಾಣುತ್ತೇನೆ ಗಂಗಣ್ಣನವರೇ" ಎಂದು ಹೊರಟನು.

**ಗಂಗಾ:**—ಯಾಕೆ ಹೋಗುವುದು? ಇಲ್ಲಿಯೇ ಇದ್ದು ಬಿಡಿರಿ ನಾಗಪ್ಪಯ್ಯನವರೆ.

**ನಾಗ:**—ಅದೊಂದನ್ನೂ ಹೇಳಬೇಡಿರಿ. ಬೇಕಾದಾಗ ಬರುತ್ತೇನೆ.

**ಗಂಗಾ:**—ಹಾಗಾದರೆ ನಿಮ್ಮ ವಾಸವೆಲ್ಲಿ?

**ನಾಗ:**—ನಾನು ಮೊದಲು ವಾಸಮಾಡುತ್ತಿದ್ದ ಮನೆ ಯಾವುದೆಂದು ನಿಮಗೆ ಗೊತ್ತಿದೆಯೊ?

**ಗಂಗಾ:**—ಹೌದು.

**ನಾಗ:**—ಆ ಮನೆಯ ಹಿಂದುಗಡೆಯಲ್ಲಿ, ಒಂದು ಅರಳಿ ಮರವಿದೆಯಲ್ಲ? ಅದರ ಕಟ್ಟೆಯೆ ನನ್ನ ವಾಸಸ್ಥಳ. ಹಗಲು ಎಲ್ಲಿಯಾದರೂ ಹೋಗಿ ಬಿಕ್ಕೆ ಬೇಡುತ್ತೇನೆ. ಸಿಕ್ಕಿದುದನ್ನು ತಂದು ಅಲ್ಲಿ ಬೇಯಿಸಿ ಪ್ರಾಣಧಾರಣೆ ಮಾಡಿಕೊಳ್ಳುತ್ತೇನೆ.

**ಗಂಗಾ:**—ಇಂಥ ಕಷ್ಟ ಜೀವನವನ್ನೆ ಸಾಧಿಸಬೇಕೆಂದು ಮನಃಪೂರ್ವಕವಾದ ಭಾವನೆಯೆ?

**ನಾಗ:**—ಕೆಲಗಾಲದಿಂದ ಇದೇ ಅಭ್ಯಾಸವಾಗಿದೆ. ಇದರಿಂದ, ಮನಸ್ಸೂ ನಿರ್ಮಲವಾಗಿರುತ್ತದೆ. ಇನ್ನೇನು? ಕೆಲವೇ ಸಮಯವಲ್ಲವೆ?

**ಗಂಗಾ:**—ಅದು ಹೇಗೂ ಇರಲಿ; ನಿಮ್ಮೆಣಿಕೆ ಹಾಗಿದ್ದರೆ ಹಾಗೆಯೇ ಆಗಲಿ.

ನಾಗಪ್ಪಯ್ಯನು ಹೊರಟು ಹೋದನು. ಕೂಡಲೆ ಗಂಗಾಧರನು ಆಳುಗಳಿಗೆ ಆಜ್ಞಾಪಿಸಿದನು. ಅವರು ಹೋಗಿ ಆ ಅರಳಿಮರದ ಕಟ್ಟೆಯನ್ನೆ, ಒಂದು ಚಿಕ್ಕ ಗುಡಿಸಲಾಗಿ ಮಾರ್ಪಡಿಸಿದರು. ನಾಗಪ್ಪಯ್ಯನ ಈ ಮಾರ್ಪಾಡು ಊರಲ್ಲೆಲ್ಲ ಹರಡಿತು. ಒಬ್ಬೊಬ್ಬರ ಬಾಯಲ್ಲಿ

ಒಂದೊಂದು ತರದ ಟಿಪ್ಪಣಿಗೂ ಸುರುವಾಯಿತು. ಅದಿರಲಿ; ಈ ಮಧ್ಯೇ ನಾಗಪ್ಪಯ್ಯನ ವಿಷಯವನ್ನೆಲ್ಲ ಸರಿಯಾಗಿ ಸೂಚಿಸಿ, ನಾರಾಯಣಾನಂದ ನಿಗೂ, ಗಂಗಾಧರನು ಒಂದು ಪತ್ರವನ್ನು ಬರೆದನು. ಹತ್ತು ಹನ್ನೆರಡು ದಿವಸಗಳು ಕಳೆದುವು.

ಮಧ್ಯಾಹ್ನದ ಮೇಲೆ ಎರಡು ಗಂಟೆಯ ಸಮಯ. ಊಟವನ್ನು ತೀರಿಸಿ, ಯಾವುದೋ ಪುಸ್ತಕವನ್ನೋದುತ್ತಾ, ಚಾಪಡಿಯಲ್ಲಿ ಗಂಗಾಧರನು ಅತ್ತಿತ್ತ ತಿರುಗಾಡುತ್ತಿದ್ದನು. ಆಗ, ಒಬ್ಬನು ಬಂದು ಅಂಗಳದಿಂದ ಜಗಲಿ ಗೇರಿ "ನಮಸ್ಕಾರ" ಎಂದನು. ಗಂಗಾಧರನ ಮುಖವು ಆ ಕಡೆಗೆ ತಿರು ಗಿತು. ಅದು ಬಳಕೆಯ ಮೋರೆಯಾಗಿರಲಿಲ್ಲ. "ಯಾರಪ್ಪಾ ನೀನು?" ಎಂದು ಕೇಳಿದನು. "ನಾನು ಪೇದೆ ಸಿದ್ದಯ್ಯ, ಸ್ವಾಮಿ" ಎಂದು ಅವನ ಹೇಳಿಕೆ.

**ಗಂಗಾ**:—ಆದರೆ, ಪೇದೆಯಂತೆ ತೋರುವುದಿಲ್ಲವಲ್ಲ.

**ಸಿದ್ದ**:—ಈಗ ಕೆಲಸವಿಲ್ಲ. ಪ್ರಾಯವಾಯಿತು. ಹುಟ್ಟಿದ ಊರೆಂದು ಪುತ್ತೂರಿನಿಂದ ಬಂದು ಇಲ್ಲೆ ಮನೆಮಾಡಿಕೊಂಡಿದ್ದೇನೆ. ಅಯ್ಯ ನವರಿಗೆ ನನ್ನ ಪರಿಚಯ ಬಹಳವಿತ್ತು.

**ಗಂಗಾ**:—ಆಗಲಿ; ಯಾಕೆ ಬಂದೆ?

**ಸಿದ್ದ**:—ನಾಗಪ್ಪಯ್ಯನವರು, ಆ ಅರಳಿಮರದ ಕಟ್ಟೆಯಲ್ಲಿದ್ದಾರಪ್ಪೆ. ನಿನ್ನೆಯೇ 'ಸ್ವಲ್ಪ ಜಾಡ್ಯವಾಗಿದೆ' ಎಂದರು. ಈ ಹೊತ್ತು ಎದ್ದು ತಿರು ಗಾಡುವಂತಿಲ್ಲ. ಕಾಲಿನಲ್ಲೊಂದು ಹುಣ್ಣು ಮಾತ್ರ ತೋರುತ್ತಿದೆ.

**ಗಂಗಾ**:—ನಿನಗೆ ಹೇಗೆ ಗೊತ್ತು?

**ಸಿದ್ದ**:—ಮೊನ್ನೆ ಆ ದಾರಿಯಾಗಿ ಹೋಗುತ್ತಿದ್ದೆ. ಆಗ ಕಟ್ಟೆ ಯೊಳಗಿನಿಂದ ಹೆಸರೆತ್ತಿ ಕರೆದು "ಏನು ಸಿದ್ದಯ್ಯ, ನಿನ್ನ ಸಿಟ್ಟಿನ್ನೂ ಇಳಿಯ ಲಿಲ್ಲವೆ?" ಎಂದರು. ಕೂಡಲೆ ಹೋದೆನು. "ನಾಗಪ್ಪಯ್ಯನವರೆ, ನೀವು ಆ ದೋಪಮ್ಮನವರನ್ನೆ ಸಂತಯಿಸಿದ್ದೀರಿ. ಅಂಥ ನಿಮ್ಮಲ್ಲಿ ನನಗೇನು ಕೋಪ?" ಎಂದು, ಸುಮಾರು ಹೊತ್ತು ಕುಳಿತು ಮಾತಾಡಿ ಹೊರಟು ಹೋದೆನು.

**ಗಂಗಾ:**—ನಿನಗೇನು ಅವರಲ್ಲಿ ಸಿಟ್ಟು?

**ಸಿದ್ದ:**—ಅದು ಹಿಂದಿನಕಾಲದ ಮಾತು. ತಾವು ಊರಲ್ಲಿದ್ದಿಲ್ಲ. ಇದೇ ನಾಗಪ್ಪಯ್ಯನವರು, ರಾಮಯ್ಯನವರನ್ನೂದಿ, ತಮ್ಮ ತಂದೆಯವರ ಮೇಲೆ, ಒಂದು ವಾರಾಂಟು ಹೊರಡಿಸಿದ್ದರು. ವಾರಾಂಟು ತೆಗೆದುಕೊಂಡು ಬಂದ ಪೇದೆ ನಾನಾಗಿದ್ದೆ. ಬರುವಾಗ, ಪಾಪ, ಅಯ್ಯನವರಿಗೆ ಪ್ರಾಣಾಂತಿಕವಾಗಿತ್ತು. ಕೆಲವು ನಿಮಿಷಗಳಲ್ಲೆ ಅವರು ದೇವರೊಳಗಾಗಿದ್ದರು. ಅದನ್ನು ಹೋಗಿ ಹೇಳಿದರೆ, ಈ ನಾಗಪ್ಪಯ್ಯನವರಿಗೆ ಬಂತು ಕೋಪ. "ಎರಡು ಮೂರು ದಿನಗಳಿಗೆ ಮೊದಲೆ, ನೀನು ವಾರಾಂಟು ತೆಗೆದುಕೊಂಡು ಬಾರದಿರಲಿಕ್ಕೆ, ಲಂಚವನ್ನೆತ್ತಿದುದೆ ಕಾರಣ"ವೆಂದು ಹೇಳಿಬಿಟ್ಟರು. ಇನ್ನೂ ಏನೇನೋ ಹೇಳಿದರು. ಅದನ್ನೆಲ್ಲ ಈಗ ಹೇಳಬಾರದು. ಅಷ್ಟೆ ಅಲ್ಲ; ನೆನೆಯಲೂ ಬಾರದು. ಆಗ, ಕೋಪದಿಂದಾಗಿ ನನ್ನ ಬಾಯಿಂದಲೂ ಏನೇನೋ ಹೊರಟು ಹೋಗಿತ್ತು. ಅದು ನೆನಪಾಗಿರಬೇಕು ನಾಗಪ್ಪಯ್ಯನವರಿಗೆ.

**ಗಂಗಾ:**—ಅದೆಲ್ಲ ಇರಲಿ; ಆಪತ್ತು ಕಠಿನವಾಗಿ ತೋರುತ್ತಿದೆಯೆ?

**ಸಿದ್ದ:**—ಹೌದು; ಅವರ ಅಶಕ್ತಿಯನ್ನು ನೋಡಿದರೆ 'ಹೀಗೇ' ಎನ್ನುವುದು ಕಷ್ಟ. ಅದರ ಮೇಲೆ ಮುಪ್ಪೂ ಮೀರಿದೆ.

**ಗಂಗಾ:**—ಆಯಿತು; ಕೂಡಲೆ ಜನಕಳುಹುತ್ತೇನೆ. ಆ ವರೆಗೆ ಅಲ್ಲೆ ಇರಬಹುದೆ?

**ಸಿದ್ದ:**—ಆಯಿತು ಸ್ವಾಮಿ.

ಸಿದ್ದಯ್ಯನು ಹೊರಟು ಹೋದನು. ಗಂಗಾಧರನು, ಪಾಕಮ್ಮನನ್ನು ಒಬ್ಬ ಹೆಂಗುಸಿನೊಡನೆ ಕೂಡಲೆ ಅಲ್ಲಿಗೆ ಕಳುಹಿದನು. ನಾಗೂರಿನ ಕೃಷ್ಣರಾಯಾದಿಗಳಲ್ಲಿಗೂ, ಆಳಿನ ಮೂಲಕವಾಗಿ, ಈ ಸುದ್ದಿಯನ್ನು ತಿಳಿಯಿಸಿದನು. ಆ ಮೇಲೆ; ತಾನೂ ನಾಗಪ್ಪಯ್ಯನಿದ್ದಲ್ಲಿಗೆ ಹೋಗಿ ಕಟ್ಟೆ ಗುಡಿಸಲಿನ ಒಳಗಯ್ದಿದನು. ಆಗ ಪಾಕಮ್ಮನು, ಹಾಲನ್ನು ನಾಗಪ್ಪಯ್ಯನಿಗೆ ಕುಡಿಸುತ್ತಿದ್ದಳು. ಸಿದ್ದಯ್ಯನೂ ನಿಂತಿದ್ದನು.

**ನಾಗ:**—(ಕಿರುದನಿಯಿಂದ) ನೀವೂ ಬಂದಿರೊ? ಇದು ಅವಲಕ್ಕಿ ಜನಾರ್ದನನ ಮನೆಯಲ್ಲ; ನಾಗನ ಹುತ್ತ.

**ಗಂಗಾ:**—ನಾಗಪ್ಪಯ್ಯನವರೆ, ಹಾಗೆಲ್ಲ ಹೇಳಬಾರದು. ನಿಮಗೆ ಅಸೌಖ್ಯವೇನು?

**ನಾಗ:**—ಬೇರೇನು? ಮುಂದೆ ಆಗಲಿಕ್ಕಿರುವುದಕ್ಕೆ ಸಿದ್ಧತೆ.

**ಗಂಗಾ:**—ಒಂದು ಹುಣ್ಣಿದೆಯಂತೆ ಕಾಲಿನಲ್ಲಿ.

**ನಾಗ:**—ಹೌದು; ಹೆಸರಿಗೆ ಅದೊಂದು.

'ನೋಡುವ' ಎಂದು ಹೊದೆದ ಬಟ್ಟೆಯನ್ನು ತೆಗೆದು ನೋಡಿದನು. ಅದು ಕಣ್ಣಿಗೆ ಮಾತ್ರವಲ್ಲ; ಮೂಗಿಗೂ ಅಸಹ್ಯವಾಗಿತ್ತು. "ಬೇಗನೆ ಸ್ವಲ್ಪ ಬಿಸಿನೀರು ಮಾಡು" ಎಂದು ಪಾಕಮ್ಮನೊಡನೆ ಹೇಳಿದನು. ಅವಳು ತಯಾರಿಸಿದಳು. ಆ ಮೇಲೆ ತಾನು ಮನೆಯಿಂದ ತಂದ "ಬೋರಿಕ್" ಪುಡಿಯನ್ನು ಅದಕ್ಕೆ ಹಾಕಿದನು. ಗಂಗಾಧರನೂ ಸಿದ್ದಯ್ಯನೂ ಕೂಡಿ ಸರಿಯಾಗಿ ಹುಣ್ಣನ್ನು ತೊಳೆದರು. ಅಷ್ಟರಲ್ಲಿ ಮನೆಯಿಂದ ಹಾಸುಗೆದಿಂಬುಗಳನ್ನೂ, ಬೇಕಾದ ಬಟ್ಟೆಗಳನ್ನೂ, ಆಹಾರ ಸಾಮುಗ್ರಿಗಳನ್ನೂ ಒಬ್ಬ ಆಳು ತಂದನು. ಹುಣ್ಣಿಗೆ ಬಟ್ಟೆಗಟ್ಟಿ ರೋಗಿಯನ್ನು ಹಾಸುಗೆಯಲ್ಲಿ ಮಲಗಿಸಿದರು. ಪಾಕಮ್ಮ, ಹಾಲನ್ನು ಕುಡಿಯಿಸಿದಳು. ನಾಲ್ಕು ಗಂಟೆ ಕಳೆಯಿತು. ರೋಗಿಯ ಉಸಿರಾಟದಲ್ಲಿ, ಸ್ವಲ್ಪ ವ್ಯತ್ಯಾಸವೂ ತೋರತೊಡಗಿತು.

**ಗಂಗಾ:**—ಅಶಕ್ತಿ ಹೇಗಿದೆ?

**ನಾಗ:**—(ಮೆಲ್ಲಗೆ) ಹಾಗೇ ಇದೆ. ಆದರೆ, ಭೀಮಯ್ಯನವರಿರುವಲ್ಲಿ ನನಗೆ ಎಡೆ ದೊರೆವುದೆ?

**ಗಂಗಾ:**—(ಒಂದಿಷ್ಟು ಭಾವಿಸಿ) ಸಂದೇಹವೇನು? ದೊರೆವುದು.

**ನಾಗ:**—ದೊರೆತರೆ, ಇನ್ನಾದರೂ ಕ್ಷಮೆ ಬೇಡಿಕೊಳ್ಳುತ್ತಿದ್ದೆ.

**ಗಂಗಾ:**—ಕ್ಷಮೆಬೇಡಲಿಕ್ಕೆ ಅಂಥ ಪಾಪವೇ ಉಳಿಯಲಿಲ್ಲವಲ್ಲ.

**ನಾಗ:**—ಏನೊ?

ಅಷ್ಟರಲ್ಲಿ ನಿಲುವಂಗಿಯನ್ನು ಧರಿಸಿದ, ಯಾರೋ ಒಬ್ಬ ಭವ್ಯಾಕಾರದ ಪುರುಷನು ಬಂದು ಕಟ್ಟೆಯನ್ನೇರಿದನು. ಅವನನ್ನು ಕಂಡೊಡನೆ, ಗಂಗಾಧರನಿಗೆ ಚಿಂತಾಮಣಿಯೆ ಕೈಗೊದಗಿದಂತಾಯಿತು. ಕೂಡಲೆ ಆ ಪುರುಷನನ್ನು ತೋರಿಸಿ "ಅಂಥ ಪಾಪವನ್ನು ಈ ಜನ್ಮದಲ್ಲೇ ನೀಗಿಬಿಡುವ ಯೋಗ್ಯತೆ ನಿಮಗಿದೆ. (ಅಷ್ಟರಲ್ಲಿ ಹತ್ತಿರದಲ್ಲಿ ಕುಳಿತ ಆ ಪುರುಷನನ್ನು ತೋರಿಸಿ) ಇಲ್ಲವಾದರೆ ಇಂಥ ಮಗನನ್ನು ಪಡೆವ, ಮತ್ತು ನೋಡುವ ಪುಣ್ಯವು ಒದಗುತ್ತಿತ್ತೇ?" ಎಂದನು. ನಾಗಪ್ಪಯ್ಯನು ಆ ಪುರುಷನ ಮುಖವನ್ನು ಚೆನ್ನಾಗಿ ನೋಡಿ, "ನಾಣಪ್ಪ, ಬಂದೆಯೊ?" ಎಂದನು. ಮಾತು ಮಸುಕಾಗತೊಡಗಿತು. ನಾರಾಯಣಾನಂದನು ಅವನ ಮುಖದತ್ತ ಬಗ್ಗಿ ಕಿವಿಗೊಟ್ಟನು. "ನಿನ್ನ ಕಾಗದದಂತೆಯೇ ನಡೆದೆ" ಎಂಬ ಪಿಸು ಮಾತು ಕೇಳಿತು. "ಹಾಗಾದರೆ ಕೃತಾರ್ಥರಾಗುತ್ತೀರಿ" ಎಂದು, ನಾರಾಯಣಾನಂದನು ಉಚ್ಚಸ್ವರದಿಂದ ಹೇಳಿದನು. ನಾಗಪ್ಪಯ್ಯನ ಮಾತು ನಿಂತಿತು; ಎರಡು ನಿಮಿಷಗಳ ವರೆಗೆ ಮಗನನ್ನೆ ನೋಡುತ್ತಿರುವಂತೆ ತೋರಿತು. ಕಣ್ಣುಗಳು ಒಮ್ಮೆ ಸುತ್ತಲೂ ತಿರುಗಿ ನೆಲೆಗೊಳ್ಳುವಾಗ, ಉಸಿರೂ ನೆಲೆಗೊಂಡಿತು. ಗಂಗಾಧರನು ಸ್ತಿಮಿತನಾಗಿದ್ದನು. ಸಿದ್ದಯ್ಯನು ಆ ನೋಟದಲ್ಲೆ ಮಗ್ನನಾಗಿ ಹೋಗಿದ್ದನು. ಪಾಕಮ್ಮನ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ನಾರಾಯಣಾನಂದನ ಮುಖದಲ್ಲೊಂದು ನಸುನಗೆ ತಲೆದೋರಿತ್ತು. "ಅಮ್ಮಾ, ಅಳ ಬೇಡಿರಿ; ಮನುಷ್ಯಾವಸ್ಥೆ ಗೊತ್ತಾಯಿತೆ?" ಎಂದನು ಪಾಕಮ್ಮನನ್ನು ನೋಡಿ. "ನನ್ನಂಥವಳಿಗೆ ಹೇಗೆ ಗೊತ್ತಾಗಬೇಕು? ಹೇಗೆ ಹೇಗೋ ಮಾಡಿದೆ; ಏನೇನೋ ಆಯಿತು" ಎಂದು ಹೇಳಿದಳು.

**ನಾರಾ:**—ಏನಾಯಿತು? ಕಡೆಗಾದರೂ ಮನಸ್ಸನ್ನು ಬಿಗಿವಿಡಿದು, ತಂದೆಯವರು, ಸಜ್ಜನರ ಕನಿಕರಕ್ಕೆ ಪಾತ್ರರಾದರು. ಅದೇ ಪರಲೋಕದ ಸದ್ಗತಿಯ ಗುರುತು. ನೀವೀಗ ಗಂಗಣ್ಣನವರಲ್ಲೆ ಇರುವುದರಿಂದ, ಇದಕ್ಕಿಂತಲೂ ಹೆಚ್ಚು ಹೇಳಬೇಕಾಗಿಲ್ಲ.

ಅಷ್ಟರಲ್ಲಿ, ನಾಗೂರಿನಿಂದ ಕೃಷ್ಣರಾಯ ಶಿವರಾಯರೂ, ಗಂಗಾಧರನಲ್ಲಿಂದ ಹೆಂಗುಸರೆಲ್ಲರೂ ಬಂದರು. ಅವರು ಬರುವಾಗ

ನಾಗಪ್ಪಯ್ಯನ ಕಾಲಕಳೆದು ಹೋಗಿತ್ತು. ಅವರ ಬೇಸರದೊಡನೆ, ನಾರಾಯಣಾನಂದನನ್ನು ನೋಡಿದ ಆನಂದವೂ ಬೆರಸಿತು. "ಏನೇ ಆಗಲಿ; ನಾಗಪ್ಪ ಪುಣ್ಯವನ್ನು ಕಟ್ಟಿಕೊಂಡ; ಅಲ್ಲವಾದರೆ ಇಂಥ ಮಗನು ಸಮಯಕ್ಕೊದಗುವನೆ?"ಎಂದಳು ದೋಪಿ ಲಕ್ಷ್ಮಮ್ಮನೊಡನೆ. "ಎಲ್ಲವೂ ನಿಮ್ಮಿಂದಾಗಿ. ನಮ್ಮ ಊರನ್ನೆ ಹೀಗೆ ಮಾರ್ಪಡಿಸಿದ ಈ ಮಗನನ್ನು ಹೆತ್ತವರಲ್ಲವೇ ನೀವು?" ಎಂದನು ನಾರಾಯಣಾನಂದನು. "ನೀವೂ ಹೀಗೆ ಹೇಳಬಾರದು ಸ್ವಾಮಿ. ಆಗುವುದು ಆಗಿಯೇ ಬಿಡುತ್ತದೆ; ನಾವೆಲ್ಲ ಒಂದೊಂದು ನಿಮಿತ್ತಮಾತ್ರ. ಈ ಹುರುಳನ್ನು ನಿಮಗೂ ಹೇಳಬೇಕೆ?" ಎಂದು ಗಂಗಾಧರನು ಕೇಳಿದನು.

ಹೊತ್ತು ಮುಳುಗಿತು. ವಿಧಿಗನುಸಾರವಾಗಿ ಸಂಸ್ಕಾರವೂ ಸಾಗಿತು. ಸನ್ಯಾಸಿಯಾದ ಮಗನಿಗೆ ಕರ್ಮಾಧಿಕಾರವಿಲ್ಲವಷ್ಟೆ. ಅದರಿಂದ, ಗಂಗಾಧರನು, ಸಗೋತ್ರಿಯೊಬ್ಬನನ್ನಾರಿಸಿ, ಅವನಿಂದ ಉತ್ತರ ಕ್ರಿಯಾದಿಗಳನ್ನು ಮಾಡಿಸಿದನು. ಆ ಮೇಲೆ, ಆ ಅರಳಿಮರದ ಗುಡಿಸಲನ್ನೇ, ಆಶ್ರಮವನ್ನಾಗಿ ಮಾರ್ಪಡಿಸಿ ನಾರಾಯಣಾನಂದನು ಅಲ್ಲೇ ನೆಲೆಗೊಂಡನು. "ನಾಗಾಶ್ರಮ"ವೆಂದು ಅದಕ್ಕೊಂದು ಹೆಸರಿಟ್ಟುದು ಗಂಗಾಧರನು. ಒಮ್ಮೆ ನಾಗೂರಿನ ಸಾಲೆಯಲ್ಲಿ ಉಪನ್ಯಾಸ, ಮತ್ತೊಮ್ಮೆ ಕೃಷ್ಣರಾಯನಲ್ಲಿ ಭೋಜನ ಸಮಾರಂಭ; ಇನ್ನೊಮ್ಮೆ ಆ ಪಾತಾಳಗುಂಡಿಯ ದರ್ಶನ; ಹೀಗೆ ಕಾಲವು ಕಳೆಯುತ್ತಿತ್ತು. ಈ ಸಂದರ್ಭಗಳಲ್ಲಿ, ಹಳೆಗಾಲದ ತರತರದ ಚಿತ್ರಗಳೆಲ್ಲ, ಆ ಕೆಳೆಯರ ಎದೆಯಲ್ಲಿ ಪ್ರತಿಬಿಂಬಿಸುತ್ತಿದ್ದುವು.

